# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಸುವರ್ಣ, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ

ಮುಖಚಿತ್ರ : ಪಶ್ಚಿಮ ಏಷ್ಯದ ಜನಾಂದೋಲನ ಯಶಸ್ಸಿನತ್ತ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಮಾನ್ಯ ವಿದ್ವಾನ್ ಆರ್. ಕೆ. ಶ್ರೀಕಂಠನ್ ಅವರಿಗೆ ಈ ವರ್ಷದ ಗಣರಾಜ್ಯ ದಿನೋತ್ಸವದಂದು 'ಪದ್ಮಭೂಷಣ' ಎಂಬ ಬಿರುದು ದೊರೆತದ್ದು ಅತಿಶಯ ಆನಂದದ ವಿಷಯ. ನಮ್ಮ ರಾಜ್ಯದ ಅತ್ಯಂತ ಹಿರಿಯ ಮತ್ತು ಶ್ರೇಷ್ಠ ಸಂಗೀತಗಾರರು ಅವರು. ತೊಂಭತ್ತನ್ನು ಎಂದೋ ದಾಟಿದ ಸಜ್ಜನರಾದ ಶ್ರೀಕಂಠನ್ ಅವರು ನೂರನ್ನು ಮುಟ್ಟಲೆಂಬುದು ಎಲ್ಲರ ಆಶಯ. ಅವರಿಗೆ 'ಹೊಸತು' ಅತ್ಯಂತ ಹರ್ಷದಿಂದ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಕೆಲವರ್ಷಗಳ ಹಿಂದೆ ನಮ್ಮ ಪತ್ರಿಕೆಯ ಜನವರಿ ವಿಶೇಷ ಸಂಚಿಕೆಗಾಗಿ ಅವರನ್ನು ಸಂದರ್ಶಿಸುವ ಇಚ್ಛೆ ವ್ಯಕ್ತಪಡಿಸಿದಾಗ ಒಪ್ಪಿಗೆ ನೀಡಿ ಬಹಳ ಉಪಯುಕ್ತವಾದ ಮತ್ತು ವಿದ್ವತ್ಪೂರ್ಣವಾದ ಅನೇಕ ಸಂಗತಿಗಳನ್ನು ನಮ್ಮ ಓದುಗರೊಡನೆ ಹಂಚಿಕೊಂಡಿದ್ದರು. ಸಂದರ್ಶನ ನಡೆದದ್ದು ಅವರ ಖ್ಯಾತ ಶಿಷ್ಯೆ ವಿದುಷಿ ಡಾ|| ಟಿ. ಎಸ್. ಸತ್ಯವತಿ ಅವರ ಮನೆಯಲ್ಲಿ. ಸಂದರ್ಶನದ ಮುಕ್ತಾಯಕ್ಕೆ ಮುನ್ನ 'ಪದ್ಮ ಪ್ರಶಸ್ತಿ'ಗಳು ಏಕೋ ಏನೋ ನಮ್ಮ ಕೆಲವು ಘನ ವಿದ್ವಾಂಸರಿಗೆ ನೀಡಲಾಗುತ್ತಿಲ್ಲವೆಂಬ ಅಸಮಾಧಾನವನ್ನು ಶ್ರೀಮತಿ ಸತ್ಯವತಿ ಪ್ರಕಟಿಸಿದ್ದರು. ಅದು 'ಹೊಸತು' ಪತ್ರಿಕೆಯ ಅಸಮಾಧಾನವೂ ಆಗಿತ್ತು. ನಮ್ಮ ರಾಜ್ಯಕ್ಕೆ ಕಲಶಪ್ರಾಯರಾದ ಮಾನ್ಯ ಶ್ರೀಕಂಠನ್ ಅವರನ್ನು ಈ ಬಾರಿ ಪದ್ಮವಿಭೂಷಣರನ್ನಾಗಿ ಮಾಡಿರುವುದು ಸರ್ಕಾರಕ್ಕೆ ಮತ್ತು ಜನಕ್ಕೆ ನಿಜಕ್ಕೂ ಭೂಷಣ.

* * *

ವಿದ್ವಾನ್ ಶ್ರೀಕಂಠನ್ ಅವರೊಂದಿಗೆ ಅವರು ಪಡೆದ ಬಿರುದನ್ನು ಪಡೆದಿರುವ ಇನ್ನೊಬ್ಬ ವ್ಯಕ್ತಿ ದೇಶದ ಯೋಜನಾ ಆಯೋಗದ ಅಧ್ಯಕ್ಷ ಅಹ್ಲುವಾಲಿಯ. ಯೋಜನೆಗಳು ಅನಗತ್ಯ ಮತ್ತು ಮುಕ್ತ ಅಭಿವೃದ್ಧಿಗೆ ಹಾನಿಕಾರಕ ಎಂದು ಭಾವಿಸುವ ಈತನ ಸಾಧನೆಯೇನೆಂದರೆ ಯೋಜನೆಯನ್ನು ಅಪ್ರಸ್ತುತಗೊಳಿಸಿರುವುದು. ಅದಕ್ಕೂ ಶ್ಲಾಘನೆಯ ಕಿರೀಟ ತೊಡಿಸಲಾಗಿರುವುದು ಒಂದು ಅಸಹ್ಯ ವಿಪರ್ಯಾಸ. ಪದ್ಮಪ್ರಶಸ್ತಿಗೆ ಕಳಂಕ ತಟ್ಟುವುದು ಅಹ್ಲುವಾಲಿಯನಂಥವರು ಅದನ್ನು ಪಡೆದಾಗ ಎಂಬುದು ಜನಜನಿತವಾದ ಅಭಿಪ್ರಾಯ. ಆತನಿಗೆ ಒಪ್ಪುವ ನಿಜವಾದ ಬಿರುದು ''ವಿಧ್ವಂಸಕ ಮಾರಾಟಗಾರ'' ಎಂಬುದು. ಅಂದರೆ ದೇಶವನ್ನು ಅಮೆರಿಕಾಕ್ಕೆ ಮಾರುವ ವಿಧ್ವಂಸಕ ಕೃತ್ಯದಲ್ಲಿ ತೊಡಗಿರುವವನು ಎಂದರ್ಥ. ಅಕೃತ್ಯಗಳಿಗೆ ಮನ್ನಣೆ ನೀಡುವ ಸಂಪ್ರದಾಯ ನಮ್ಮ ದೇಶದಲ್ಲಿ ಹೊಸದೇನಲ್ಲ. ಹಲವು ಶತಮಾನಗಳ ಕಾಲ ನಾವಿದನ್ನು ಮಾಡುತ್ತಾ ಬಂದಿದ್ದೇವೆಂಬುದಕ್ಕೆ ನಿದರ್ಶನಗಳನ್ನು ಪಟ್ಟಿ ಮಾಡಬೇಕಾಗಿಲ್ಲ. ಅಸ್ಪೃಶ್ಯತೆಯನ್ನು ಬೋಧಿಸಿದ ''ಆಚಾರ್ಯರು'' ಕಲುಷಿತ ಮನಸ್ಸಿನವರೆಂದು ಹೃತ್ಪೂರ್ವಕವಾಗಿ ಹೇಳಿರುವ (ಮತ್ತು ಇಂದೂ ಹೇಳುವ) ಮಂದಿ ನಮ್ಮಲ್ಲೆಷ್ಟಿರಬಹುದು ? ನರಸಿಂಹರಾವ್ ಪ್ರಧಾನಿಯಾಗಿದ್ದಾಗಿನಿಂದಲೂ ದೇಶದ ದಿಕ್ಕನ್ನು ಅಹಿತಕರವಾದ ರೀತಿಯಲ್ಲಿ ಬದಲಿಸುತ್ತಾ ಬಂದುದರ ಪರಿಣಾಮ ನಮ್ಮೆದುರಿಗಿದೆ. ಭ್ರಷ್ಟಾಚಾರವು ಮುಗಿಲು ಮುಟ್ಟಿರುವಂತೆ ಆಹಾರ ಸಾಮಗ್ರಿಗಳ ಬೆಲೆಯೂ ಅದೇ ಎತ್ತರಕ್ಕೇರಿರುವುದು ತಕ್ಷಣಕ್ಕೆ ಮೂರ್ತವಾಗಿ ಕಾಣುವ ಒಂದು ಪರಿಣಾಮ. ನಮ್ಮ ದೇಶದ ಘನತೆಯನ್ನು ಹೂತು ಹಾಕಿದ ದುಷ್ಕೃತ್ಯ ಮನಮೋಹನ ಸಿಂಗ್ ಮತ್ತವರ ಸಚಿವರೆಲ್ಲರದು. ಅವರೆಲ್ಲಾ ನುಂಗಿ ಹಾಕಿರುವ ನಮ್ಮ ದೇಶದ ಸಂಪತ್ತು ಹಿಮಾಲಯದಷ್ಟಿದೆ. ಸಾಲದ್ದಕ್ಕೆ ಅಮೆರಿಕಾದಂತಹ ದೇಶದ ಮುಂದೆ ತಲೆಬಾಗಿ ನಿಲ್ಲುವ ಹೀನತನ ಇವರದು. ದೇಶದ ಸಾರ್ವಭೌಮತ್ವಕ್ಕೆ ಮಸಿ ಬಳಿದಿರುವವರು ಇವರು. ಅಮೆರಿಕಾ ಸರ್ಕಾರದ ವಿದೇಶಾಂಗ ಸಚಿವಾಲಯದ ಒಬ್ಬ ಯಃಕಶ್ಚಿತ್ ಅಧಿಕಾರಿ ಫೆಬ್ರವರಿಯಲ್ಲಿ ಹೇಳಿದ್ದ ಒಂದು ಮಾತು ನೆನಪಿದೆಯಲ್ಲವೆ ? ಅದನ್ನವನು ಹೇಳಿದ್ದು ನಮ್ಮ ದೇಶದ ಕೆಲವು ಮೂರ್ಖರು ವಿದ್ಯಾರ್ಥಿಗಳೆಂದು ಹೇಳಿಕೊಂಡು ಅಮೆರಿಕಾದಲ್ಲಿ ಎಂಥದೋ ಕೆಲಸ ಹುಡುಕಿಕೊಂಡು ಹೋಗಿ ಮೋಸಹೋದರಲ್ಲಾ, ಅದರ ಸಂದರ್ಭದಲ್ಲಿ. ಈ ಯುವಕರ ಹಿಮ್ಮಡಿಗಳಿಗೆ ರೇಡಿಯೋ ಕಾಲರ್ ಎಂಬ ಸರಪಳಿಯನ್ನು ಅಮೆರಿಕಾ ಸರ್ಕಾರ ತೊಡಿಸಿದೆ. ಅದು ಖಂಡನಾರ್ಹವೆಂದು ನಾವು ಹೇಳಿದರೆ ಆ ಅಧಿಕಾರಿಯ ಪ್ರತಿಕ್ರಿಯೆ ಇದು : ''ಜೈಲಿಗೆ ಹೋಗುವುದಕ್ಕಿಂತ ಕಾಲಿಗೆ ಸರಪಳಿ ತೊಡಿಸಿಕೊಳ್ಳುವುದು ಉತ್ತಮ.'' ಇವನ ನಾಲಿಗೆ ಸೀಳಿಹೋಗ ಎಂದು ಆ ಯುವಕರ ತಾಯಂದಿರು ಶಾಪ ಹಾಕಿರಬೇಕು. ಅದಿರಲಿ, ಇಂತಹ ಉದ್ಧಟತನವು ಬಹಿರಂಗವಾಗಿ ತೋರ್ಪಡಿಸಲು ಸಾಧ್ಯವಾದದ್ದು ಹೇಗೆ ? ಹಿಂದಾದರೆ ಇಂತಹ ಮಾತುಗಳನ್ನು ಅವರವರಲ್ಲೇ ಮಾತನಾಡಿಕೊಳ್ಳುತ್ತಿದ್ದರು. ಅಸಾಂಜ್ ಹೊರ ತಂದಿರುವ ''ವಿಕಿಲೀಕ್ಸ್''ನಲ್ಲಿ ಅಂತಹ ನೂರಾರು ಪ್ರಸಂಗಗಳಿವೆ. ಅದೇ ಅನಾಗರಿಕವೆಂದು ಗುರುತಿಸಲಾಗುತ್ತಿರುವಾಗ ಈ ಧೂರ್ತ ಅಧಿಕಾರಿ ಬಹಿರಂಗವಾಗಿ ಉದ್ಧಟತನದ ಮಾತನಾಡಲು ಹೇಗೆ ಧೈರ್ಯ ಮಾಡಿದ ? ಮನಮೋಹನ ಸಿಂಗ್, ಅಹ್ಲುವಾಲಿಯ, ಚಿದಂಬರಂ, ಕಪಿಲ್

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೮ ಮಾರ್ಚ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**URL : www.navakarnataka.com**
**http://navakarnataka.blogspot.com**
**http://hosathu.blogspot.com**


ಸಂಪಾದಕೀಯ

## ಭ್ರಷ್ಟಾಚಾರ, ಹಗರಣಗಳು ಮತ್ತು ಸಿ.ಬಿ.ಐ.

ಭ್ರಷ್ಟಾಚಾರ, ಹಗರಣಗಳು, ಕೊಲೆ, ಭಯೋತ್ಪಾದನೆ ಇವೆಲ್ಲ ಈಗ ದಿನ ನಿತ್ಯದ ಸುದ್ದಿಗಳು. ಹಲವಾರು ಕೇಂದ್ರ ಸರ್ಕಾರದ ಮಂತ್ರಿಗಳು, ರಾಜ್ಯ ಸರ್ಕಾರಗಳ ಮಂತ್ರಿಗಳು, ಅಧಿಕಾರಿಗಳು, ನ್ಯಾಯಾಧೀಶರು, ಉದ್ಯೋಗಪತಿಗಳು ಹೀಗೆ ಹಲವಾರು ಜನರು ಈ ಕರ್ಮಕಾಂಡದ ಪಾತ್ರಧಾರಿಗಳು. ಲಕ್ಷಾಂತರ ಕೋಟಿ ರೂಪಾಯಿಗಳ ಅವ್ಯವಹಾರಗಳ ಸರಮಾಲೆ ಭವ್ಯ ಭಾರತಾಂಬೆಯ ಕುತ್ತಿಗೆಯನ್ನು ಹಿಸುಕುತ್ತಿದೆ, ಉಸಿರು ಕಟ್ಟಿಸುತ್ತಿದೆ. ಭ್ರಷ್ಟ ರಾಜಕಾರಣಿ ಭ್ರಷ್ಟ ಅಧಿಕಾರಿಯನ್ನು ರಕ್ಷಿಸಿದರೆ, ಭ್ರಷ್ಟ ನ್ಯಾಯಾಧೀಶನು ಭ್ರಷ್ಟ ರಾಜಕಾರಣಿ ಮತ್ತು ಭ್ರಷ್ಟ ಅಧಿಕಾರಿ ಇಬ್ಬರನ್ನೂ ರಕ್ಷಿಸುತ್ತಾನೆ. ಇದೊಂದು ವಿಷವೃತ್ತ. ಈ ಬಲಿಷ್ಠ ಜನರ ದೊಡ್ಡ ಭ್ರಷ್ಟಾಚಾರ ಮತ್ತು ಅವ್ಯವಹಾರಗಳ ಬಗ್ಗೆ ತನಿಖೆ ನಡೆಸಲು ನಮ್ಮಲ್ಲಿ ದುರ್ಬಲ ಸಂಸ್ಥೆಯೊಂದಿದೆ. ಅದೇ ಸೆಂಟ್ರಲ್ ಬ್ಯೂರೊ ಆಫ್ ಇನ್ವೆಸ್ಟಿಗೇಶನ್ (ಸಿ.ಬಿ.ಐ.). ಈಗ ಈ ಸಂಸ್ಥೆಯೂ ಕೂಡ ದಿನನಿತ್ಯದ ಸುದ್ದಿಯಲ್ಲಿದೆ. ಭಾರತದ ಕಂಪ್ಟ್ರೋಲರ್ ಅಂಡ್ ಆಡಿಟರ್ ಜನರಲ್ ಅವರು ಅಂದಾಜಿಸಿರುವ ಪ್ರಕಾರ ೨-ಜಿ ಸ್ಪೆಕ್ಟ್ರಮ್ ಹಗರಣದಲ್ಲಿ ದೇಶ ಅನುಭವಿಸಿರುವ ನಷ್ಟ ೧.೭೬ ಲಕ್ಷ ಕೋಟಿ ರೂಪಾಯಿಗಳು. ಸಿ.ಬಿ.ಐ.ನ ಪ್ರಕಾರ ಸುಮಾರು ೫೦,೦೦೦ ಕೋಟಿ ರೂಪಾಯಿಯ ನಷ್ಟ ಉಂಟಾಗಿದೆ. ಈ ಹಗರಣದಲ್ಲಿ ಮಾಜಿ ಕೇಂದ್ರ ಸಂಪರ್ಕ ಮಂತ್ರಿ ಡಿ.ಎಂ.ಕೆ. ಪಕ್ಷದ ಎ. ರಾಜ ಪ್ರಮುಖ ಆರೋಪಿಯಾಗಿದ್ದರೂ, ಈ ಅವ್ಯವಹಾರದಲ್ಲಿ ಮಾಜಿ ಮಂತ್ರಿಗಳಾದ ಅರುಣ್ ಶೌರಿ, ಪ್ರಮೋದ್ ಮಹಾಜನ್ ಮತ್ತು ದಯಾನಿಧಿ ಮಾರನ್ ಇವರ ಪಾಲುದಾರಿಕೆಯೂ ಇದೆಯೆಂದು ತಿಳಿದುಬಂದಿದೆ. 'ಹೊಸತು' ಅದನ್ನು ಮೊದಲೇ ಹೇಳಿತ್ತು. ಪ್ರಧಾನ ಮಂತ್ರಿ ಮನಮೋಹನ್ ಸಿಂಗ್‌ರ ಹೆಸರೂ ಈ ಹಗರಣದೊಂದಿಗೆ ಕೇಳಿಬರುತ್ತಿದೆ. ಹಾಗಾಗಿ ಈ ಹಗರಣದ ವಿಷಯದಲ್ಲಿ ಕಾಂಗ್ರೆಸ್, ಬಿ.ಜೆ.ಪಿ. ಮತ್ತು ಡಿ.ಎಂ.ಕೆ. ಪಕ್ಷಗಳು ಒಂದುಗೂಡಿವೆ. ಅಂದರೆ ಇವರೆಲ್ಲರು ಈ ಪ್ರಕರಣದ ಪಾತ್ರಧಾರಿಗಳು. ಇವರು ನಾಟಕ ಕಂಪನಿಗಳ ಮಾಲೀಕರು. ಇವರಿಗಿರುವ ಅಪಾರ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಶಕ್ತಿಯನ್ನು ಗಮನಿಸಿದರೆ, ಸಿ.ಬಿ.ಐ. ಇದೆಲ್ಲವನ್ನೂ ನಿಭಾಯಿಸಿ, ತನಿಖೆ ನಡೆಸಿ, ಸತ್ಯವನ್ನು ಹೊರತರಬಲ್ಲದೇ ಎಂಬ ಅನುಮಾನ ಕಾಡುವುದು ಸಹಜ. ಸರ್ವೋಚ್ಚ ನ್ಯಾಯಾಲಯ ಈ ಹಗರಣದ ತನಿಖೆಯನ್ನು ಸಿ.ಬಿ.ಐ.ಗೆ ಒಪ್ಪಿಸಿ ಅದಕ್ಕೆ ಇದರ ಉಸ್ತುವಾರಿ ವಹಿಸಿ, ಇದಕ್ಕಾಗಿ ವಿಶೇಷ ಕೋರ್ಟ್ ನೇಮಕವಾಗಬೇಕೆಂದು ಆದೇಶಿಸಿದ್ದರೂ, ಸಿ.ಬಿ.ಐ. ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಬಲ್ಲುದೇ ಎಂಬುದು ಪ್ರಶ್ನೆ. ಇನ್ನು ಕಾಮನ್‌ವೆಲ್ತ್ ಕ್ರೀಡೆಯ ಅವ್ಯವಹಾರ ಕೂಡ ಅಪಾರ ಪ್ರಮಾಣದ್ದು, ಮುಂಬೈನ ಆದರ್ಶ್ ಹೌಸಿಂಗ್ ಸೊಸೈಟಿಯ ಹಗರಣ, ಸತ್ಯಂ ಕಂಪನಿಯ ಹಗರಣಗಳನ್ನೂ ಸಿ.ಬಿ.ಐ. ತನಿಖೆಗೆ ಒಳಪಡಿಸಲಾಗಿದೆ.

ಇನ್ನು ಬಳ್ಳಾರಿ ಮತ್ತು ಆಂಧ್ರಪ್ರದೇಶದ ಗಣಿ ಮಾಲೀಕರ ಬಗ್ಗೆ ಹೆಚ್ಚಿನ ವಿವರಗಳ ಅಗತ್ಯವಿಲ್ಲ. ಕರ್ನಾಟಕದ ರಾಜಕೀಯದಲ್ಲಿ ಹಣದ ಹುಚ್ಚು ಹೊಳೆ ಹರಿಸಿ, ಎಲ್ಲ ಮೌಲ್ಯಗಳನ್ನೂ ನಾಶಗೊಳಿಸಿರುವ ಈ ಜನರನ್ನು ಸಿ.ಬಿ.ಐ. ಸಮರ್ಪಕವಾಗಿ ಎದುರಿಸಬಲ್ಲುದೆ ಎಂಬುದು ಕೂಡ ಅನುಮಾನಾಸ್ಪದ. ದಿನೇ ದಿನೇ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ಸರ್ವೋಚ್ಚ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳು ಅನೇಕ ಪ್ರಕರಣಗಳನ್ನು ಸಿ.ಬಿ.ಐ. ತನಿಖೆಗೆ ವಹಿಸುತ್ತಿವೆ. ಪ್ರಶ್ನೆಯೆಂದರೆ ಈ ಹೊರೆಯನ್ನು ಹೊತ್ತು, ಸಮರ್ಪಕವಾಗಿ ತನಿಖೆ ನಡೆಸಿ, ನ್ಯಾಯ ದೊರಕಿಸಿಕೊಡುವ ಸಾಮರ್ಥ್ಯ ಈ ಸಂಸ್ಥೆಗಿದೆಯೇ ಎಂಬುದು.

ಎರಡನೇ ಜಾಗತಿಕ ಯುದ್ಧದ ಸಮಯದಲ್ಲಿ ಯುದ್ಧೋಪಕರಣಗಳನ್ನು ಕೊಳ್ಳುವ ವ್ಯವಹಾರಗಳಲ್ಲಿ ನಡೆಯುತ್ತಿದ್ದ ಭ್ರಷ್ಟಾಚಾರಗಳ ಬಗ್ಗೆ ತನಿಖೆ ನಡೆಸುವ ಸಲುವಾಗಿ ಅಂದಿನ ಭಾರತ ಸರ್ಕಾರ ೧೯೪೧ರಲ್ಲಿ ವಿಶೇಷ ಪೊಲೀಸ್ ಸಂಸ್ಥೆಯನ್ನು ಸ್ಥಾಪಿಸಿತು. ನಂತರ ೧೯೪೬ರಲ್ಲಿ ದೆಹಲಿ ಪೊಲೀಸ್ ವಿಶೇಷ ಸಂಸ್ಥೆ ಶಾಸನವನ್ನು ಜಾರಿಗೊಳಿಸಿ, ಈ ತನಿಖಾ ಸಂಸ್ಥೆಯನ್ನು ಗೃಹ ವಿಭಾಗಕ್ಕೆ ವರ್ಗಾಯಿಸಿತು. ಸ್ವಾತಂತ್ರ್ಯಾನಂತರ, ೧೯೬೩ರಲ್ಲಿ ಗೃಹ ಮಂತ್ರಾಲಯದ ನಿರ್ಣಯದ ಪರಿಣಾಮವಾಗಿ ಹಿಂದಿದ್ದ ತನಿಖಾ ಸಂಸ್ಥೆ ಸಿ.ಬಿ.ಐ. ಆಗಿ ರೂಪಾಂತರಗೊಂಡಿತು. ಸಿ.ಬಿ.ಐ. ಉದ್ಯಮಶೀಲತೆ, ನಿಷ್ಪಕ್ಷಪಾತತನ, ಪ್ರಾಮಾಣಿಕತೆಗಳು ತನ್ನ ಪರಮೋಚ್ಚ ಮಂತ್ರವೆಂದು ಸಾರಿಕೊಂಡಿತು. ಕೇಂದ್ರ ಸರ್ಕಾರದ ನೌಕರ ವರ್ಗದಲ್ಲಿನ ಭ್ರಷ್ಟಾಚಾರ ತನಿಖೆಗೆ ಮಾತ್ರ ಸೀಮಿತವಾಗಿದ್ದ ಇದರ ವ್ಯಾಪ್ತಿ ನಂತರದ ವರ್ಷಗಳಲ್ಲಿ ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳು, ಕಾರ್ಪೊರೇಶನ್‌ಗಳು ಮತ್ತು ಬ್ಯಾಂಕ್‌ಗಳಿಗೆ ವಿಸ್ತರಗೊಂಡಿತು. ಸರ್ಕಾರಗಳ ಚಟುವಟಿಕೆಗಳು ವಿಸ್ತಾರಗೊಂಡಂತೆಯೆ ಈ ಸಂಸ್ಥೆಯ ತನಿಖಾ ವ್ಯಾಪ್ತಿ ಕೂಡ ವಿಸ್ತಾರಗೊಳ್ಳುತ್ತಲೇ ಇದೆ. ಆರ್ಥಿಕ ಹಾಗೂ ಹಣಕಾಸು ಕಾನೂನುಗಳ ಉಲ್ಲಂಘನೆ, ಪಾಸ್‌ಪೋರ್ಟ್ ಅವ್ಯವಹಾರಗಳು, ಕೊಲೆ ಪ್ರಕರಣಗಳು, ಮಾಹಿತಿ ತಂತ್ರಜ್ಞಾನಕ್ಕೆ ಸಂಬಂಧಿಸಿದ ಅಪರಾಧಗಳು, ಭಯೋತ್ಪಾದನೆಯ ಪ್ರಕರಣಗಳು – ಹೀಗೆ ದೇಶದ ಅನೇಕ ಆಗು-ಹೋಗುಗಳನ್ನು ಸಿ.ಬಿ.ಐ. ತನಿಖೆಗೆ ಒಳಪಡಿಸಲಾಗುತ್ತಿದೆ.

ಇಷ್ಟೆಲ್ಲ ದೊಡ್ಡ ಜವಾಬ್ದಾರಿಗಳನ್ನು ಸಿ.ಬಿ.ಐ. ಮೇಲೆ ಹೊರಿಸಲಾಗುತ್ತಿದ್ದರೂ ಈ ಸಂಸ್ಥೆಗೆ ತನ್ನದೇ ಆದ ವಿಶೇಷ ಕಾನೂನಿಲ್ಲ. ಹಾಗಾಗಿ ಇದರ ವ್ಯವಹಾರಗಳಿಗೆ ಗೊತ್ತುಗುರಿಯಿಲ್ಲ. ಅಮೆರಿಕದ ಫೆಡರಲ್ ಬ್ಯೂರೊ ಆಫ್ ಇನ್ವೆಸ್ಟಿಗೇಶನ್ (ಎಫ್.ಬಿ.ಐ.), ಸೆಂಟ್ರಲ್ ಇಂಟಲಿಜೆನ್ಸ್ ಏಜೆನ್ಸಿ (ಸಿ.ಐ.ಎ.), ವಿಶೇಷ ಕಾನೂನುಗಳಿಂದ ರಚಿತಗೊಂಡ ಸಂಸ್ಥೆಗಳು. ಈ ಸಂಸ್ಥೆಗಳಿಗೆ ವಿಶೇಷ ಅಧಿಕಾರ ಶಾಸನದತ್ತವಾಗಿದೆ. ಹಾಗಾಗಿ ಇವು ಬಲಿಷ್ಠ ಸಂಸ್ಥೆಗಳಾಗಿವೆ. ಹಾಗೆಯೇ ಬ್ರಿಟನ್, ರಷ್ಯಾ, ಜರ್ಮನಿ ಇತ್ಯಾದಿ ರಾಷ್ಟ್ರಗಳಲ್ಲೂ ವಿಶೇಷ ಕಾನೂನುಗಳ ಮೂಲಕ ವಿಶೇಷ ತನಿಖಾ ಸಂಸ್ಥೆಗಳನ್ನು ರಚಿಸಲಾಗಿದೆ. ಇವೆಲ್ಲವೂ ಸ್ವಾಯತ್ತ ಸಂಸ್ಥೆಗಳು. ಆದರೆ ಸಿ.ಬಿ.ಐ. ಗೃಹ ಮಂತ್ರಾಲಯದ ಒಂದು ಅಧೀನ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಇದು ಸಿ.ಬಿ.ಐ.ನ ಒಂದು ಪ್ರಮುಖ ಕೊರತೆ. ಸಿ.ಬಿ.ಐ. ನಿರ್ದೇಶಕರ ಸೇವಾ ಅವಧಿ ಎರಡು ವರ್ಷ ಎಂದು ನಿಗದಿಪಡಿಸಿದ್ದೂ ಕೂಡ ಸರ್ವೋಚ್ಚ ನ್ಯಾಯಾಲಯವೆಂದರೆ ಈ ಸಂಸ್ಥೆಯ ಅವ್ಯವಸ್ಥೆಯ ಬಗ್ಗೆ ಅರಿವಾದೀತು. ಸಿ.ಬಿ.ಐ.ನ ಅಸ್ತಿತ್ವವನ್ನೇ ಪ್ರಶ್ನಿಸಬಹುದಾಗಿದೆಯೆಂದರೆ ಈ ಸಂಸ್ಥೆ ಎಷ್ಟು ಮಾತ್ರ ಶಕ್ತಿಯುತವಾಗಿದೆಯೆಂದು ಗೊತ್ತಾಗುತ್ತದೆ.

ಸಿ.ಬಿ.ಐ. ಒಂದು ವಿಶೇಷ ಹಾಗೂ ನುರಿತ ಪೊಲೀಸ್ ವ್ಯವಸ್ಥೆಯೆಂದು ಪರಿಗಣಿಸಲಾಗಿದೆ. ಸಾಕಷ್ಟು ತಜ್ಞರನ್ನು ಹೊಂದಿದೆ.

ಆದರೆ ಮಾನವ ಸಂಪನ್ಮೂಲದ ಕೊರತೆ, ಹಣಕಾಸಿನ ಕೊರತೆ ಮತ್ತಿತರ ಆಡಳಿತಾತ್ಮಕ ತೊಂದರೆಗಳಿಂದಾಗಿ ತನಿಖೆಗಳು ಅತ್ಯಂತ ಮಂದಗತಿಯಲ್ಲಿ ಸಾಗುತ್ತಿವೆ. ಸುಮಾರು ೪,೧೦೦ ಪ್ರಕರಣಗಳು ೫ರಿಂದ ೧೦ ವರ್ಷಗಳಿಂದ ನಡೆಯುತ್ತಿವೆ. ೧೦ ವರ್ಷ ಕಳೆದರೂ ಕನಿಷ್ಠ ೪೩೮ ಪ್ರಕರಣಗಳಲ್ಲಿ ಚಾರ್ಜ್‌ಶೀಟ್‌ಗಳನ್ನು ಕೂಡ ಹಾಕಿಲ್ಲವೆಂದು ಪಾರ್ಲಿಮೆಂಟ್ ಸಮಿತಿ ತನ್ನ ವರದಿಯಲ್ಲಿ ತಿಳಿಸಿದೆ. ಭೂಪಾಲ್ ಅನಿಲ ದುರಂತ, ಬೋಫೋರ್ಸ್ ಪ್ರಕರಣಗಳಲ್ಲಿ ಸಿ.ಬಿ.ಐ. ನಡೆದುಕೊಂಡ ರೀತಿಯ ಹಿನ್ನೆಲೆಯಲ್ಲಿ ಈ ಸಂಸ್ಥೆ ರಾಜಕೀಯ ಒತ್ತಡಗಳನ್ನು ಮೀರಲಾರದು ಎಂಬುದನ್ನು ಖಚಿತಗೊಳಿಸುತ್ತದೆ.

ಸಿ.ಬಿ.ಐ.ನ ಕಾರ್ಯನಿರ್ವಹಣೆಯ ಬಗ್ಗೆ ವರದಿ ನೀಡಲು ರಚಿಸಲಾಗಿದ್ದ ಡಾ॥ ಇ. ಎಂ. ಸುದರ್ಶನ ನಾಚಿಯಪ್ಪನ್ ನೇತೃತ್ವದ ಪಾರ್ಲಿಮೆಂಟ್ ಸಮಿತಿ ೨೦೦೮ರ ತನ್ನ ವರದಿಯಲ್ಲಿ ಸಿ.ಬಿ.ಐ.ಗೆ ವಿಶೇಷ ಕಾನೂನನ್ನು ಕೇಂದ್ರ ಸರ್ಕಾರ ರಚಿಸಬೇಕೆಂದು, ಇದನ್ನು ಒಂದು ಸ್ವತಂತ್ರ ಸ್ವಾಯತ್ತ ಸಂಸ್ಥೆಯಾಗಿಸಬೇಕೆಂದು ಹಾಗೂ ಇದನ್ನು ಇನ್ನೂ ಸಶಕ್ತಗೊಳಿಸಬೇಕೆಂದು ಶಿಫಾರಸ್ಸು ಮಾಡಿದೆ. ಈ ಸಮಿತಿ ನೀಡಿದ ಯಾವ ಸಲಹೆಯನ್ನೂ ಕೇಂದ್ರ ಸರ್ಕಾರ ಜಾರಿಗೊಳಿಸಿದಂತೆ ಕಂಡುಬಂದಿಲ್ಲ. ಸಿ.ಬಿ.ಐ. ತನ್ನ ಕೈಗೊಂಬೆಯಾಗಿರಬೇಕೆಂಬುದೇ ಆಳುವ ವರ್ಗದ ಬಯಕೆ.

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆರ್ಥಿಕ ಜಾಗತೀಕರಣವೆಂದರೆ ಭ್ರಷ್ಟಾಚಾರ ಮತ್ತು ಅಪರಾಧಗಳ ಜಾಗತೀಕರಣ. ತಂತ್ರಜ್ಞಾನ ಸಮಾಜದ ಬೆಳವಣಿಗೆಗೆ ಎಷ್ಟು ಸಹಕಾರಿಯಾಗಿದೆಯೊ ಅಷ್ಟೇ ಭ್ರಷ್ಟಾಚಾರ ಮತ್ತು ಅಪರಾಧಗಳ ಬೆಳವಣಿಗೆಗೂ ಅನುವು ಮಾಡಿಕೊಟ್ಟಿದೆ. ಒಂದು ದೇಶದಲ್ಲಿ ಕುಳಿತು ಇನ್ನೊಂದು ದೇಶದಲ್ಲಿ ಅಪರಾಧ ಎಸಗಬಹುದಾದಷ್ಟು ಮಾಹಿತಿ ತಂತ್ರಜ್ಞಾನ ಬೆಳೆದಿದೆ. ಅಂದರೆ ಈ ಅಪರಾಧಗಳನ್ನು ತನಿಖೆ ಮಾಡುವ ಸಂಸ್ಥೆಗಳಿಗೆ ಎಂತಹ ಚಾಣಾಕ್ಷತನ, ಚಾಕಚಕ್ಯತೆ, ಪ್ರಾಮಾಣಿಕತೆ ಬೇಕು, ಇವು ಎಷ್ಟು ಆಧುನೀಕರಣಗೊಳ್ಳಬೇಕು ಎಂಬುದು ಅರಿವಾಗುತ್ತದೆ. ಕೊಳೆತು ನಾರುತ್ತಿರುವ ವ್ಯವಸ್ಥೆಯನ್ನು ಬದಲಾಯಿಸುವ ದಾರಿಯೇ ಬೇರೆ. ಸಿ.ಬಿ.ಐ. ಭ್ರಷ್ಟ ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ ಬೀಸುವ ದೊಣ್ಣೆಯೇಟನ್ನು ತಪ್ಪಿಸುವ ಒಂದು ಸಾಧನವಾಗದಿದ್ದರೆ ಸಾಕು, ಅಷ್ಟೆ.

## ಭಾಜಪದ ದ್ವಂದ್ವ ನೀತಿ ಬಯಲು

ಬೇರೆಯವರಾಗಿದ್ದರೆ ಹುಚ್ಚರಾಗಿ ಓಡಿಹೋಗುತ್ತಿದ್ದರು ಎಂದು ಮುಖ್ಯಮಂತ್ರಿ ಯಡಿಯೂರಪ್ಪ ಹೇಳಿದ್ದಾರೆ. ಬೇರೆಯವರಾಗಿದ್ದರೆ ಮರ್ಯಾದೆಯಿಂದ ಅಧಿಕಾರ ತ್ಯಜಿಸುತ್ತಿದ್ದರು. ಇಷ್ಟೆಲ್ಲ ಹಗರಣಗಳ, ಆಪಾದನೆಗಳ ಮಧ್ಯೆಯೂ ಕುರ್ಚಿಗೆ ಅಂಟಿಕೊಂಡಿರುವ ಯಡಿಯೂರಪ್ಪನವರಿಗೆ ಅಧಿಕಾರ ವ್ಯಾಮೋಹದ ಹುಚ್ಚು ಹಿಡಿದಿದೆ ಎಂದು ಹೇಳಬಹುದು. ಕರ್ನಾಟಕದ ಬೇರಾವ ಮಂತ್ರಿಮಂಡಲವೂ ಇಷ್ಟೊಂದು ಭ್ರಷ್ಟವಾಗಿರಲಿಲ್ಲ. ಭೂ ಹಗರಣ, ಸ್ವಜನ ಪಕ್ಷಪಾತದ ಆರೋಪಗಳನ್ನು ಹೊತ್ತು ವಿಚಾರಣೆಗೆ ಗುರಿಯಾಗಿರುವ ಮುಖ್ಯಮಂತ್ರಿ ಇನ್ನೂ ಅಧಿಕಾರದಲ್ಲಿರುವುದು ಅವರ ಭಂಡತನಕ್ಕೆ ಸಾಕ್ಷಿ. ಪ್ರತಿಪಕ್ಷಗಳವರು ಕಿರುಕುಳ ನೀಡುತ್ತಿದ್ದಾರೆ, ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಿಪಡಿಸುತ್ತಿದ್ದಾರೆ ಎಂದು ದಿನಬೆಳಗಾದರೆ ಹೇಳುತ್ತಿರುವ ಯಡಿಯೂರಪ್ಪ ಮಾಟ, ಮಂತ್ರ ಮಾಡಿಸುತ್ತಿದ್ದಾರೆ, ಅದರಿಂದ ನನಗೆ ಪ್ರಾಣಭಯ ಇದೆ ಎಂದೂ ಹೇಳಿಕೊಂಡಿದ್ದಾರೆ. ಇದು ಒಬ್ಬ ಮುಖ್ಯಮಂತ್ರಿಯ ಬಾಯಿಂದ ಬರುವ ಮಾತು! ಇದು ನಮ್ಮ ಸಂವಿಧಾನಕ್ಕೆ ಎಸಗಿರುವ ಅಪರಾಧವಲ್ಲವೆ? ವೈಜ್ಞಾನಿಕ ಮನೋಧರ್ಮ ರಾಷ್ಟ್ರದಲ್ಲಿ ಬೆಳಸಬೇಕು ಎಂದು ಸಂವಿಧಾನ ಹೇಳುತ್ತದೆ ಎನ್ನುವುದು ಅವರಿಗೆ ಗೊತ್ತಿಲ್ಲವೆ? ಕಂಡ ದೇವರಿಗೆಲ್ಲ ಕೈಮುಗಿದು, ಯಜ್ಞಯಾಗಾದಿಗಳನ್ನು ಮಾಡಿಸುವ ಮುಖ್ಯಮಂತ್ರಿಯಿಂದ ಬೇರೇನು ಅಪೇಕ್ಷಿಸುವುದು ಸಾಧ್ಯ!

ತರಾತುರಿಯಲ್ಲಿ ರಾಜ್ಯದ ಬಜೆಟ್ ಮಂಡಿಸಲು ಯಡಿಯೂರಪ್ಪ ಸಿದ್ಧವಾಗುತ್ತಿದ್ದಾರೆ. ಕಳೆದ ಬಜೆಟ್‌ನಲ್ಲಿ ನಿಗದಿಮಾಡಿದ್ದ ಎಷ್ಟು ಯೋಜನೆಗಳು ಕಾರ್ಯಗತವಾಗಿವೆ ಎನ್ನುವುದರ ಬಗ್ಗೆ ಮಾತ್ರ ಮಾಹಿತಿ ಇಲ್ಲ. ಪ್ರವಾಹಪೀಡಿತರಿಗೆ ಮನೆ ಕಟ್ಟಿಕೊಟ್ಟದ್ದು ಇನ್ನೂ ಕಾಗದದ ಮೇಲೇ ಇದೆ. ಇನ್ನು ಉಳಿದ ಯೋಜನೆಗಳ ಪಾಡೇನು ಎಂಬುದು ಅವರಿಗೇ ಗೊತ್ತು. ಈ ಸಲದ ಬಜೆಟ್‌ನಲ್ಲೂ ನಾವು ಬೇಕಾದಷ್ಟು ಆಶ್ವಾಸನೆಗಳನ್ನು, ಯೋಜನೆಗಳನ್ನು ನಿರೀಕ್ಷಿಸಬಹುದು. ಒಂದಂತೂ ಖಾತರಿ, ಮಠಮಾನ್ಯಗಳಿಗೆ ಇನ್ನೆಷ್ಟು ಕೋಟಿ ದೇಣಿಗೆ ಹರಿಸುತ್ತಾರೋ ನೋಡಬೇಕು.

ಭೂ ಹಗರಣಗಳ ವಿಚಾರದಲ್ಲಿ ಆರೋಪಗಳೆಲ್ಲ ನ್ಯಾಯಾಲಯದ ಕಟ್ಟೆಯಲ್ಲಿದೆ. ನ್ಯಾಯಮೂರ್ತಿ ಸೋಮಶೇಖರ್ ಅವರಿಂದ ಗೋಡೆ ಸಾರಿಸುವ ವರದಿ ಪಡೆದುಕೊಂಡ ಹಾಗೆಯೇ ನ್ಯಾಯಮೂರ್ತಿ ಪದ್ಮರಾಜ್ ಅವರಿಂದ ವರದಿ ಪಡೆದುಕೊಳ್ಳುವುದು ಯಡಿಯೂರಪ್ಪನವರ ಯೋಜನೆ. ಆದರೆ ಅದೂ ಕೂಡ ಗೊಂದಲದ ಗೂಡಾಗಿದೆ. ಪ್ರಾಯಶಃ ಮುಖ್ಯಮಂತ್ರಿಗಳು ಈ ಕೋರ್ಟು ವ್ಯವಹಾರಗಳಲ್ಲಿಯೇ ಅಧಿಕಾರದಲ್ಲಿ ಉಳಿದು ಅವಧಿ ಪೂರೈಸಬಹುದು ಅಂದುಕೊಂಡಿರಬೇಕು. ಸುಪ್ರೀಂಕೋರ್ಟಿನಲ್ಲಿ ಹನ್ನೊಂದು ಶಾಸಕರ ಅನರ್ಹತೆ ಪ್ರಶ್ನೆ ಇತ್ಯರ್ಥವಾಗುವವರೆಗೆ ಚಿಂತೆಯಿಲ್ಲ.

ಭಾರತೀಯ ಜನತಾ ಪಾರ್ಟಿಯ ರಾಷ್ಟ್ರೀಯ ನಾಯಕತ್ವ ಅನುಸರಿಸುತ್ತಿರುವ ಇಬ್ಬಗೆಯ ನೀತಿ ಹಾಗೂ ಒಳಸುಳಿಯಲ್ಲಿರುವ ಭಿನ್ನಾಭಿಪ್ರಾಯಗಳು ಯಡಿಯೂರಪ್ಪನವರಿಗೆ ಸುರಕ್ಷೆ. ಕೇಂದ್ರದಲ್ಲಿ ಯುಪಿಎ ಸರಕಾರದ ಹಗರಣಗಳು, ಭ್ರಷ್ಟಾಚಾರದ ಕುರಿತು ಬೊಬ್ಬೆ ಹಾಕುತ್ತಿರುವ ಭಾಜಪ ವರಿಷ್ಠರು ಕರ್ನಾಟಕದ ಭ್ರಷ್ಟಾಚಾರದ ಬಗ್ಗೆ ಚಕಾರವೆತ್ತುತ್ತಿಲ್ಲ. ಹೇಗಾದರೂ ಮಾಡಿ ದಕ್ಷಿಣ ಭಾರತದ ಮೊದಲ ಭಾಜಪ ಸರಕಾರವನ್ನು ಉಳಿಸಿಕೊಳ್ಳುವುದು ಅವರ ಉದ್ದೇಶ. ಅದಕ್ಕೆ ಅದರ ಅಧ್ಯಕ್ಷ ಗಡ್ಕರಿಯವರು ಹರಸಾಹಸ ಮಾಡುತ್ತಿದ್ದಾರೆ. ಬಹಳ ಬುದ್ಧಿವಂತಿಕೆಯಿಂದ ಅವರು ಹೊಸ ಸೂತ್ರ ಹೊಸೆದಿದ್ದಾರೆ. ಯಡಿಯೂರಪ್ಪ ಮಾಡಿರುವುದು 'ಅನೀತಿಯುತ, ಆದರೆ ಅಕ್ರಮವಲ್ಲ' ಎಂದಿದ್ದಾರೆ. ಇದರ ದ್ವಂದ್ವವನ್ನು ಅವರೇ ವ್ಯಾಖ್ಯಾನಿಸಬೇಕು. ಏಕೆಂದರೆ ಅನೀತಿಯಿಂದ ಉದ್ಭವಿಸುವುದೇ ಅಕ್ರಮ ನಡವಳಿಕೆ ಎನ್ನುವುದು ನಮ್ಮ ಅನಿಸಿಕೆ. ಅದೇನೇ ಇರಲಿ, ಕೇಂದ್ರ ನಾಯಕತ್ವದಲ್ಲಿ ಹಿರಿಯ ಕಿರಿಯ ನಾಯಕರ ನಡುವಣ ತಿಕ್ಕಾಟವಂತೂ ಸ್ಪಷ್ಟವಾಗಿ ಕಾಣುತ್ತಿದೆ. ಕೇಂದ್ರ ಸರಕಾರ ಸ್ಪೆಕ್ಟ್ರಮ್ ಹಗರಣವನ್ನು ಜಂಟಿ ಸದನ ಸಮಿತಿಗೆ ಒಪ್ಪಿಸಿರುವುದರಿಂದ ಭಾಜಪದ ಮೇಲೆ ಕರ್ನಾಟಕದ ಮುಖ್ಯಮಂತ್ರಿ ಭ್ರಷ್ಟಾಚಾರದ ಬಗ್ಗೆ ಕ್ರಮಕ್ಕೆ ಒತ್ತಡ ಹೆಚ್ಚುವ ಸಾಧ್ಯತೆ ಇದೆ. ಭಾಜಪದ ದ್ವಂದ್ವ ನೀತಿಯಂತೂ ಬಯಲಾಗಿದೆ.

ತಿಂಗಳ ಪತ್ರಿಕೆ
ಹೊಸತು
ನೆನ್ನೆಯ ನಾಳೆ ನನ್ನಾ
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಈ ತಿಂಗಳು (೩ನೇ ಪುಟದಿಂದ)*

ಸಿಬಲ್ ಮುಂತಾದ ನಾಯಕಮಣಿಗಳಿರುವಾಗ ಅವನು ಧೈರ್ಯ ತೋರಲು ಅಂಜಬೇಕೇಕೆ ? ಅಮೆರಿಕಾ ದೇಶದ ಸರ್ಕಾರವು ಭಾರತದ ಬಗ್ಗೆ ಬಹಿರಂಗವಾಗಿ ದುರಹಂಕಾರ ಪ್ರದರ್ಶಿಸುವ ಮಟ್ಟಕ್ಕೆ ನಮ್ಮನ್ನು ಇಂದಿನ ಕೇಂದ್ರ ಸರ್ಕಾರ ನೂಕಿದೆ. ಇದು ನಾಚಿಕೆಗೇಡಿನ ವಿಷಯ, ದೇಶದ ಜನಕ್ಕೆ ಕೋಪ ಬರಿಸುವ ಸಂಗತಿ. ನಮ್ಮದು ಅಮೆರಿಕಾದ 'ಅಧೀನ ದೇಶ' ಎಂಬಂತೆ ಆಗಿಹೋಗಿದೆ. ನಮ್ಮ ವಿದೇಶಾಂಗ ಸಚಿವರು ಇಂಥದನ್ನು ಪ್ರತಿಭಟಿಸಲು ಸರ್ವಥಾ ಸಿದ್ಧರಿಲ್ಲ. ಮುಖತಃ ಭೇಟಿಯಾದಾಗ ಯಾವನೋ ಅಥವಾ ಯಾವಳೋ ಅಮೆರಿಕಾದ ಅಧಿಕಾರಿ ತಮ್ಮನ್ನು ದಂಡಿಸಬಹುದೆಂಬ ಭೀತಿ ಅವರನ್ನು ಕಾಡುತ್ತಿದೆಯೆ ? ಮೊನ್ನೆ ಮೊನ್ನೆ ಬೆಂಗಳೂರಿನಲ್ಲಿ ನಮ್ಮ ಕೆಲವು ಪತ್ರಕರ್ತರು, ವಿದೇಶಾಂಗ ಸಚಿವರಂತೆ ಅಂಜುಬುರುಕರಾಗದೆ ಅಮೆರಿಕಾದ ಲಾಕ್‌ಹೀಡ್ ಮಾರ್ಟಿನ್‌ನ ಯಾವನೋ ದುರಹಂಕಾರಿ ಅಧಿಕಾರಿಗೆ ಚೆನ್ನಾಗಿ ಛೀಮಾರಿ ಹಾಕಿ ಹೇಳಿದರು : ''ನೀನು ಭಾರತದಲ್ಲಿದ್ದೀಯೆ ತಿಳಿದುಕೊ, ಇದು ನಿನ್ನ ಅಮೆರಿಕಾ ಅಲ್ಲ; ಇಂತಹ ದುರ್ವರ್ತನೆಯನ್ನು ಸಹಿಸುವವರು ನಾವಲ್ಲ, ಜೋಕೆ.'' ಇದು ನಡೆದದ್ದು ಏರೋಸ್ಪೇಸ್ ಪ್ರದರ್ಶನದ ಸಂದರ್ಭದಲ್ಲಿ. ನಮ್ಮ ಪತ್ರಕರ್ತರು ಆ ಕಂಪನಿಯ ಪರವಾಗಿ ಜಾಹಿರಾತುದಾರನಾದ ಯಾವನೋ ಭಾರತೀಯ ಚಲನಚಿತ್ರ ನಟನನ್ನು ಸಮೀಪಿಸ ಕೂಡದೆಂದು ಅಧಿಕಾರಿ ಅಬ್ಬರಿಸಿದಾಗ ಸರಿಯಾದ ಉತ್ತರ ನೀಡಿದ್ದಾರೆ. ಕೇಂದ್ರ ಸರ್ಕಾರ ಇವರಿಂದ ಕಲಿಯಬೇಕಾದ್ದು ಬೇಕಾದಷ್ಟಿದೆ.

ಈ ಮಧ್ಯೆ ನಮ್ಮ ಇಸ್ರೊ ಹಲವು ಕ್ಷಿಪಣಿಗಳನ್ನು ಸಮುದ್ರಕ್ಕೆ ಬೀಳಿಸಿರುವಂತೆ ಈಗ ದೇಶವನ್ನೇ ಸಮುದ್ರದಲ್ಲಿ ಮುಳುಗಿಸಿದೆ. ಸರ್ವೋಚ್ಚ ನ್ಯಾಯಾಲಯವಾಯಿತು, ಮಂತ್ರಿಗಳಾದರು, ಅಧಿಕಾರಿಗಳಾದರು, ಇನ್ನು ಇಸ್ರೊ ಏಕೆ ಹಿಂದೆ ಬೀಳಬೇಕು ! ಸ್ಪೆಕ್ಟ್ರಮ್ ರಾಜ ಒಂದು ಲಕ್ಷ ಎಪ್ಪತ್ತಾರು ಸಾವಿರ ಕೋಟಿಯನ್ನು ಗುಳುಂ ಮಾಡಿದ್ದರೆ, ಇಸ್ರೊ ಸೀದಾ ಎರಡು ಲಕ್ಷ ಕೋಟಿಗಳನ್ನೇ ಸ್ವೇಚ್ಛೆಯಿಂದ ನುಂಗಿದೆಯೆಂದು ಮತ್ತೆ ಅದೇ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ಹೇಳಿದ್ದಾರೆ. ಏನಾಗಿದೆ ನಮ್ಮ ದೇಶಕ್ಕೆ ? ಇಂತಹ ಕ್ರಿಮಿಗಳು ಹೆಚ್ಚಿಕೊಂಡಿದ್ದು ಹೇಗೆ ? ಜನ ನಿರಾಸಕ್ತರಾಗಿ ದಂಗುಬಡಿದವರಂತೆ ಕೂತಿರುವುದು ಏಕೆ ? ಎಲ್ಲಾ ಜಾಗತೀಕರಣದ ಪರಿಣಾಮವಾಗಿ ಹುಟ್ಟಿಕೊಂಡಿರುವ ವ್ಯಾಪಾರಿ ದುರುಳತನ. ನೀರಾ ರಾಡಿಯಾ, ರತನ್ ಟಾಟಾ, ಅಂಬಾನಿ, ಇತ್ಯಾದಿಗಳಂತೆ ಸಚಿವರು, ಅಧಿಕಾರಿಗಳು, ನ್ಯಾಯಮೂರ್ತಿಗಳು, ಎಲ್ಲರೂ ಅವ್ಯವಹಾರಗಳಲ್ಲಿ ತೊಡಗಲು ಹೇಸದವರಾಗಿದ್ದಾರೆ. ಈ ಇಸ್ರೊ ಕಂಪನಿಯು ವ್ಯವಹರಿಸಿದ 'ದೇವಸ್' ಕಂಪನಿಯಲ್ಲಿ ಅಮೆರಿಕಾದ ಹೆಸರಾಂತ ಜನರೇ ತುಂಬಿದ್ದಾರೆ. ಅವರ ಜೊತೆ ಕೈಗೂಡಿಸಿದವರು ಇಸ್ರೋದ ನಿವೃತ್ತ ಅಧಿಕಾರಿಗಳು ಮತ್ತವರ ಆಂತರಿಕ ಬೆಂಬಲಿಗರು. ಆ ದೇವಸ್ (ಅದನ್ನು 'ದಾನವಸ್' ಎನ್ನಬೇಕು) ಕಂಪನಿಯ ಆಡಳಿತ ಮಂಡಲಿಯಲ್ಲಿರುವವರ ಪೈಕಿ ಅಮೆರಿಕಾದವರೇ ಹೆಚ್ಚು. ಹಿಂದೊಮ್ಮೆ ಅಮೆರಿಕಾದ ವಿದೇಶಾಂಗ ಸಚಿವೆಯಾಗಿದ್ದ ತಾಟಕಿ ಮ್ಯಾಡಲಿನ್ ಆಲ್‌ಬ್ರೈಟ್ ಸಹ ದೇವಸ್ ಕಂಪನಿಯಲ್ಲಿದ್ದಾಳೆ ! ದೇಶಭಕ್ತಿ, ಭಾರತೀಯ ಸಂಸ್ಕೃತಿ, ಎಲ್ಲಕ್ಕೂ ಹೊಸ ವ್ಯಾಖ್ಯಾನ ಬರೆಯುತ್ತಿರುವವರು ನಮ್ಮ ದೇಶದ ಭ್ರಷ್ಟ ತಿಮಿಂಗಿಲಗಳು. ಅದನ್ನೆಲ್ಲಾ ಮರೆಯಲು ಭಜನೆ ಮಾಡುತ್ತಾ ಕುಳಿತುಕೊಳ್ಳುವ ಪ್ರವೃತ್ತಿ ಎಷ್ಟು ಪ್ರಶ್ನಾರ್ಹವೆಂದು ನಮ್ಮ ಓದುಗರು ತಿಳಿದಿರುತ್ತಾರೆ.

* * *

ಫೆಬ್ರವರಿ ಮೊದಲ ವಾರವು ಮುಗಿಯುತ್ತಿದ್ದಂತೆ ರಾಜಸ್ತಾನದ ಅಜ್ಮೀರ್‌ನಲ್ಲಿ ಒಂದು ಆಗಬಾರದ ಕೆಲಸ ಆಗಿಹೋಯಿತು. ಜಮ್ಮು-ಕಾಶ್ಮೀರದ ''ವಿಮುಕ್ತಿ ರಂಗ''ದ ಯಾಸೀನ್ ಮಾಲಿಕ್ ಅಜ್ಮೀರದಲ್ಲಿ ದರ್ಗಾಕ್ಕೆ ಭೇಟಿ ನೀಡಿದ್ದ. ಆತನ ರಾಜಕೀಯದ ಒಳ- ಹೊರಗುಗಳು ಎಲ್ಲರಿಗೂ ತಿಳಿದಿದೆ. ಅದನ್ನು ನಾವೆಲ್ಲಾ ಒಪ್ಪುತ್ತೇವೆಂಬ ಭ್ರಮೆ ಬೇಡ; ಅವನಿಗೂ ಆ ಭ್ರಮೆ ಇಲ್ಲದಿರಬಹುದು. ಶ್ರೀನಗರದ ಲಾಲ್ ಚೌಕದಲ್ಲಿ ನಮ್ಮ ರಾಷ್ಟ್ರಧ್ವಜ ಹಾರಿಸುವ ಸಾಹಸದಲ್ಲಿ ಅಧೀರರಾದ ಭಾರತೀಯ ಜನತಾ ಪಕ್ಷದ ನಾಯಕರ ಮಾನ ಉಳಿಸಲೋ ಎಂಬಂತೆ ಆ ಪಕ್ಷದ ಯುವಕರು ಕೆಲವರು ಅಜ್ಮೀರ್‌ನಲ್ಲಿ ಮಾಲಿಕ್ ಮೇಲೆ ಚಪ್ಪಲಿ ಎಸೆದರು. ಹಾಗೆ ಮಾಡಿ ಕಾಶ್ಮೀರವನ್ನು ಭಾರತದಲ್ಲಿ ಉಳಿಸಿಕೊಳ್ಳಬಹುದೆಂಬ ಪ್ರತಿಭೆ ಇವರಲ್ಲಿ ಹೇಗೆ ಮೂಡಿತೋ ತಿಳಿಯದು. ಕಾಶ್ಮೀರದ ಯುವಕರು ಈ ಭಾಜಪ ಯುವಕರ ಸಾಹಸಕ್ಕೆ ಏನು ಪ್ರತಿಕ್ರಿಯೆ ನೀಡಿದ್ದಾರೋ ಅದೂ ತಿಳಿಯದು. ಒಂದೊಂದು ಹೆಜ್ಜೆಯೂ ತಪ್ಪು ಹೆಜ್ಜೆಯಾದಾಗ ಕಾಶ್ಮೀರದ ಪ್ರಶ್ನೆ ಸದಾ ಜಟಿಲವಾಗುತ್ತಲೇ ಇರುತ್ತದೆಂಬುದಂತೂ ನಿಜ. ಅದನ್ನು ಕುರಿತು ಭಾಜಪ ವೀರರು ಗಂಭೀರವಾಗಿ ಚಿಂತಿಸಬೇಕೆಂದು ನಿರೀಕ್ಷಿಸುವುದು ಸಹಜ. ಕಾಶ್ಮೀರದಲ್ಲಿ ಭಾಜಪ ನಾಯಕರು ರಾಷ್ಟ್ರಧ್ವಜ ಹಾರಿಸುವುದಕ್ಕೆ ಅಭ್ಯಂತರವಿಲ್ಲ; ಆದರೆ ಅದನ್ನು ಒಂದು ತೀವ್ರ ಚಳುವಳಿಯನ್ನಾಗಿಸಿದರೆ ಕಾಶ್ಮೀರದ ಹಲವು ಯುವಕರು ಪ್ರತಿರೋಧ ಒಡ್ಡುತ್ತಾರೆ, ಸನ್ನಿವೇಶವು ಇನ್ನೂ ಹೆಚ್ಚು ಬಿಗಡಾಯಿಸುತ್ತದೆ. ನಮಗೆ ಸಮಸ್ಯೆಯ ಪರಿಹಾರ ಮುಖ್ಯವೋ ಅಥವಾ ಕೆಲವು ತಥಾಕಥಿತ - ಸ್ವಯಂಘೋಷಿತ ದೇಶಭಕ್ತರ ಪ್ರತಿಷ್ಠೆ ಮುಖ್ಯವೋ ?

ಈ ಸಂಬಂಧ ಬೇರೊಂದು ಸಂಗತಿಯು ನಮ್ಮನ್ನು ವಿಚಲಿತರನ್ನಾಗಿಸುತ್ತದೆ. ರಾಷ್ಟ್ರೀಯ ಸ್ವಯಂಸೇವಕ ಸಂಘದ ಬೆಂಗಳೂರಿನ ಮಿತ್ರರೊಬ್ಬರು ಪ್ರಸ್ತುತ 'ಹೊಸತು' ಸಂಪಾದಕರಿಗೆ ನಾಗಪುರದಲ್ಲಿ ಒಂದು ಸ್ವಾಗತಾರ್ಹ ಅನುಕೂಲ ಕಲ್ಪಿಸಿಕೊಟ್ಟಿದ್ದರು. ಅದು ಜನವರಿ ಕೊನೆಯ ವಾರದಲ್ಲಿ. ಇನ್ನೂ ಹೆಚ್ಚು ನಿಷ್ಕರ್ಷೆಯಿಂದ ಹೇಳಬೇಕೆಂದರೆ ಗಜರಾಜ್ಯ ದಿನೋತ್ಸವವಾದ ಜನವರಿ ೨೬ರಂದು ನಡೆದದ್ದು. ಅಲ್ಲಿಯ ಹಿರಿಯ ಸ್ವಯಂಸೇವಕರು ನಮ್ಮನ್ನು ಆರೆಸ್ಸೆಸ್ ಕೇಂದ್ರ ಕಾರ್ಯಾಲಯಕ್ಕೆ ಕೊಂಡೊಯ್ದು ಅಲ್ಲಿಯ ವಿಭಾಗಗಳನ್ನು ಮತ್ತು ಚಟುವಟಿಕೆಗಳನ್ನು ಪರಿಚಯ ಮಾಡಿಸಿದರು. ಸಿಹಿಯನ್ನೂ ಹಂಚಿದರು, ಆದರೆ ಗಣರಾಜ್ಯದ ಸಂಭ್ರಮದ ಕಾರಣದಿಂದಲ್ಲ, ಯಾವುದೋ ಸಮಿತಿಯ ಹಿರಿಯ ಕಾರ್ಯಕರ್ತರ ಸಭೆ ಜರುಗುತ್ತಿದ್ದುದರ ಸಲುವಾಗಿ ಸಿಹಿ ಹಂಚಲಾಗಿತ್ತು. ನಮ್ಮನ್ನು ಹಾಗೆ ಕರೆದೊಯ್ದಿದ್ದ ಮಹಾಶಯರು ನಮ್ಮ ಸಮ್ಮುಖದಲ್ಲಿ ತಮ್ಮತಮ್ಮಲ್ಲೇ ಹಾಸ್ಯಚಟಾಕಿಯೊಂದನ್ನು ಹಾರಿಸಿಕೊಳ್ಳುತ್ತಿದ್ದರು : ಆರೆಸ್ಸೆಸ್‌ನ ಕೇಂದ್ರ ಕಾರ್ಯಾಲಯದಲ್ಲಿ ಗಣರಾಜ್ಯದಂದು ರಾಷ್ಟ್ರಧ್ವಜ ಹಾರಿಸುವ ಪ್ರಮೇಯವೇ ಬರುವುದಿಲ್ಲ, ಎಂಬುದು ಅವರ ಹಾಸ್ಯ ರಸಾಯನದಲ್ಲಿ ಬೆರೆತಿದ್ದ ವಿಷಪೂರಿತ ಭಾವನೆ. ಶ್ರೀನಗರದಲ್ಲಿ ರಾಷ್ಟ್ರಧ್ವಜ ಏರಿಸಹೊರಟಿದ್ದ ಭಾಜಪ ನಾಯಕರಿಗೆ ಅಲ್ಲಿ ಸ್ವಾಗತ ಸಿಗಲಿಲ್ಲ, ನಿಜ; ಆದರೆ ಅವರಿಗೆ ನಾಗಪುರದ ತಮ್ಮದೇ ಕೇಂದ್ರದಲ್ಲಿ ಸ್ವಾಗತ ದೊರೆಯಲಾರದೇನು ? ರಾಷ್ಟ್ರಧ್ವಜ ಹಾರಿಸುವುದರ ಬಗೆಗೂ ಹಾಸ್ಯದ ಮಾತು ಸಾಧ್ಯವೆಂದು ತಿಳಿದದ್ದೇ ಅಂದು. ಇದೆಲ್ಲದರ ಸಾರಾಂಶರೂಪದ ಸೂಚನೆಯೇನೆಂದರೆ ನಮ್ಮ ದೇಶದಲ್ಲಿ ನಮ್ಮ ಬಾಂಧವರನ್ನೇ ಜಿಗುಟುವ ಪ್ರವೃತ್ತಿ ಹೆಚ್ಚುತ್ತಿದೆ, ಅದು ಆರೋಗ್ಯಕರವಲ್ಲ, ಎಂಬುದು. ನಮ್ಮನ್ನು ಆದರದಿಂದ ತಮ್ಮ ಕೇಂದ್ರ ಕಚೇರಿಗೆ ಕರೆದೊಯ್ದ ಸ್ನೇಹಿತರ ಬಗೆಗೆ ಅಸಮಾಧಾನವೇನೂ ಇಲ್ಲ; ನಮ್ಮ ಬೆಂಗಳೂರಿನ ಆರೆಸ್ಸೆಸ್ ಸ್ನೇಹಿತರಿಂದಾಗಿಯೋ ಏನೋ ಅವರು ಬಹಳ ಸೌಜನ್ಯ ತೋರಿದರು. ಆದರೆ ಸೌಜನ್ಯವನ್ನು ಸೀಮಿತಗೊಳಿಸಿ ಕೆಲವರಿಗೆಂದೇ ಮೀಸಲಾಗಿಡುವುದು ಒಳ್ಳೆಯ ಸಂಸ್ಕೃತಿಯಾಗಲಾರದು.

* * *

**ಮೊ**ನ್ನೆ ಐವರು ಪಕ್ಷೇತರ ಶಾಸಕರ ಅನರ್ಹತೆಯನ್ನು ಎತ್ತಿ ಹಿಡಿದ ರಾಜ್ಯ ಹೈಕೋರ್ಟು ತೀರ್ಪು ಹೊರಬೀಳುತ್ತಿದ್ದಂತೆ ಅವರ ಪೈಕಿ ಒಬ್ಬರಾದ ಡಿ. ಸುಧಾಕರ್ ಗಳಗಳನೆ ಕಣ್ಣೀರು ಸುರಿಸಿ 'ಯಾವ ತಪ್ಪಿಗಾಗಿ ನಮಗೆ ಈ ಶಿಕ್ಷೆ' ಎಂದು ಪ್ರಲಾಪಿಸಿದರು. ಪೂರ್ತಿ ಒಂದು ನಿಮಿಷ ಟೆಲಿವಿಶನ್ ಪರದೆಯ ಮೇಲೆ ಈ ದೃಶ್ಯ ಪ್ರದರ್ಶನಗೊಂಡಿತು. ತಕ್ಷಣ ನೆನಪಿಗೆ ಬಂದುದು ಈ ಶಾಸಕರ ಪೂರ್ವಾಶ್ರಮದ ಗುರು ಮುಖ್ಯಮಂತ್ರಿ ಯಡಿಯೂರಪ್ಪ ಇದೇರೀತಿ ಅತ್ತ ದೃಶ್ಯ. ಅದರಿಂದ ಈ ಶಾಸಕರು ಅದರ ಬಗ್ಗೆ ಸಂಕೋಚ ಪಡಬೇಕಾಗಿಲ್ಲ. ಹಗರಣಗಳ ಸುಳಿಯಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದ ಯಡಿಯೂರಪ್ಪ ಕಣ್ಣೀರು ಹರಿಸಿದ್ದೂ ಅದೇ ಮೊದಲ ಸಲವೇನಲ್ಲ. 'ಆಳುವ ಗಂಡಸನ್ನು ನಂಬಲೇ ಬಾರದು' ಎನ್ನುವುದಕ್ಕೆ ಮುಖ್ಯಮಂತ್ರಿಗಳ ಭಂಡತನವೇ ಸಾಕ್ಷಿ. ಇನ್ನು ಶಾಸಕರು ಮಾಡಿದ ತಪ್ಪೇನು ನೋಡೋಣ. ಮೊದಲನೆ ತಪ್ಪು ಸ್ವಂತಂತ್ರ ಅಭ್ಯರ್ಥಿಯಾಗಿ ಆಯ್ಕೆಗೊಂಡು ಅಧಿಕಾರದ ಆಸೆಗೆ ಬಲಿಯಾಗಿ ಮಂತ್ರಿಯಾದದ್ದು. ಇದು ಮತದಾರರಿಗೆ ಎಸಗಿದ ದ್ರೋಹ. ಎರಡನೆಯದು ಅಧಿಕಾರ ಹೋದಮೇಲೆ ತಿರುಗಿಬಿದ್ದದ್ದು. ಈಗ ಅತ್ತೇನು ಪ್ರಯೋಜನ ! ಪಕ್ಷಾಂತರಿಗಳು ಏನೆನ್ನುತ್ತಾರೆ ?

* * *

'ಕೊಯಲಿಶನ್ ಧರ್ಮ'. ಇದು ವ್ಯಾಕರಣಬದ್ಧವಾದ ಪದಗುಚ್ಛ ಅಲ್ಲ. ಆದರೆ ಅನುಕೂಲ ಸಿಂಧು. ಸಮ್ಮಿಶ್ರ ಸರಕಾರದ ಚುಕ್ಕಾಣಿ ಹಿಡಿದಿರುವವರಿಗೆ ಇಕ್ಕಟ್ಟಿನ ಪರಿಸ್ಥಿತಿಯಿಂದ ನುಣುಚಿಕೊಳ್ಳಲು ಸುಲಭವಾಗಿ ಸಿಗುವ ನುಡಿಗಟ್ಟು. ಎನ್‌ಡಿಎ ಸರಕಾರದ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಮೊದಲು ಇದನ್ನು ಪ್ರಯೋಗಿಸಿದವರು. ಅವರು ಗುಜರಾತಿನ ಹಿಂಸಾಚಾರ ಪ್ರಕರಣದ ಸಂದರ್ಭದಲ್ಲಿ ತಮ್ಮ ಶಿಷ್ಯ ಮುಖ್ಯಮಂತ್ರಿ ನರೇಂದ್ರ ಮೋದಿಯನ್ನು ಹಿಂಬಿಟ್ಟುಕೊಳ್ಳಲು 'ರಾಜಧರ್ಮಪಾಲನೆ' ಎನ್ನುವ ಬಾಣ ಪ್ರಯೋಗಿಸಿದರು. ಯುಪಿಎ ಸರಕಾರದ ಪ್ರಧಾನಿ ಮನಮೋಹನ ಸಿಂಗ್ ಅವರಿಗೆ ಇನ್ನೂ ಎರಡನೇ ಪ್ರಯೋಗ 'ರಾಜಧರ್ಮ...' ಬಳಸಲು ಅವಕಾಶವಾಗಿಲ್ಲ. ಆದರೆ ಮೊನ್ನೆತಾನೆ ಟಿ.ವಿ. ಮುಂದೆ ಬಾಯಿಬಿಟ್ಟ ಮನಮೋಹನ ಸಿಂಗ್ ಸ್ಪೆಕ್ಟ್ರಮ್ ಹಗರಣದಿಂದ ಜಾರಿಕೊಳ್ಳಲು 'ಕೊಯಲಿಶನ್ ಧರ್ಮ' ಪದ ಪ್ರಯೋಗಿಸಿ ತಾವು ನಿಸ್ಪೃಹರೆಂದು ತೋಡಿಕೊಂಡರು. ಈಗ ನ್ಯಾಯಾಂಗ ಬಂಧನಕ್ಕೆ ಒಳಗಾಗಿರುವ ಮಾಜಿ ಸಚಿವ ಎ. ರಾಜಾ ಮೇಲೆ ಎಲ್ಲ ಗೂಬೆ ಕೂರಿಸಿದರು. ಕೊಯಲಿಶನ್ ಧರ್ಮ ಎಂದರೆ ಎಲ್ಲ ಅನಾಚಾರಗಳನ್ನು ಕಣ್ಣುಮುಚ್ಚಿ ನೋಡಿಕೊಂಡು ಕೂರುವುದಂತೂ ಅಲ್ಲ. ನಮ್ಮ ಸಂಪುಟ ವ್ಯವಸ್ಥೆಯಲ್ಲಿ ಇಡೀ ಸರಕಾರದ್ದೇ ಹೊಣೆ. ಇದು ಅವರಿಗೆ ತಿಳಿದಿರಬೇಕು. ಸಮ್ಮಿಶ್ರ ಸರಕಾರ ವ್ಯವಸ್ಥಿತವಾಗುವುದು ಒಂದು ನಿರ್ದಿಷ್ಟ ಕಾರ್ಯಕ್ರಮದ ಆಧಾರದ ಮೇಲೆ ಇದ್ದಾಗ ಮಾತ್ರ. ಅದಿಲ್ಲದೆ

ಹಾಗೆ ಹೊಂದಾಣಿಕೆ ಮಾಡಿಕೊಂಡರೆ ಅದು 'ಅಪವಿತ್ರ ಮೈತ್ರಿ' ಎನಿಸಿಕೊಳ್ಳುತ್ತದೆ. ಯುಪಿಎ-೨ ಇರುವುದು ಹಾಗೆಯೆ. ಯುಪಿಎ-೧ ಕನಿಷ್ಠ ಕಾರ್ಯಕ್ರಮದ ಮೇಲೆ ಆಧಾರವಾಗಿತ್ತು. ಆಗ ಮನಮೋಹನ್ ಸಿಂಗ್ ಅವರಿಗೆ ವಿರೋಧದ ನಡುವೆಯೂ ಅಮೆರಿಕಾದೊಂದಿಗೆ ಪರಮಾಣು ಒಪ್ಪಂದ ಮಾಡಿಕೊಳ್ಳುವಾಗ 'ಕೊಯಲಿಶನ್ ಧರ್ಮ' ಎಲ್ಲಿಗೆ ಹೋಗಿತ್ತೋ!

* * *

ನಮ್ಮ ಕರ್ನಾಟಕದವರೇ ಆದ ವಿದೇಶಾಂಗ ಸಚಿವ ಎಸ್. ಎಂ. ಕೃಷ್ಣ ವಿದೇಶದಲ್ಲಿ ವ್ಯಾಸಂಗ ಮಾಡಿಬಂದಿರುವ, ಸದಾ ಶಿಸ್ತಿನಿಂದ ಟ್ರಿಮ್ ಆಗಿ ಡ್ರೆಸ್ ಮಾಡಿಕೊಂಡಿರುವ ವ್ಯಕ್ತಿ. ಆದರೆ ಕೇಂದ್ರದಲ್ಲಿ ವಿದೇಶಾಂಗ ಸಚಿವರಾಗಿ ಇದುವರೆಗೆ ಅವರು ವಿಶೇಷ ವ್ಯಕ್ತಿತ್ವವನ್ನೇನೂ ತೋರಿಸಿಲ್ಲ. ಅದಕ್ಕೆ ಬೇಕಾದ ಪ್ರತಿಭೆ ಅವರಲ್ಲಿಲ್ಲವೆಯೋ ತಿಳಿಯದು. ಕರ್ನಾಟಕದ ಜನರಿಗೆ ಕಾಡುಗಳ್ಳ ವೀರಪ್ಪನ್ ವರನಟ ರಾಜಕುಮಾರ್ ಅವರನ್ನು ಹಾರಿಸಿಕೊಂಡು ಹೋದಾಗ ಅವರು ನಡೆದುಕೊಂಡ ರೀತಿ ಪರಿಚಯವಿದೆ. ಕೆಲದಿನಗಳ ಹಿಂದೆ ಅವರು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಸಭೆಯಲ್ಲಿ ಪೋರ್ಚುಗೀಸು ವಿದೇಶಾಂಗ ಸಚಿವರ ಭಾಷಣದ ಪ್ರತಿಯನ್ನು ಓದಲಾರಂಭಿಸಿ ಪೆಚ್ಚು ಪೆಚ್ಚಾದದ್ದಂತೂ ನಿಜ. ಅವರ ಮಟ್ಟಿಗೆ ಅದು ಅಂಥ ಅಚಾತುರ್ಯವೇನಲ್ಲ. ಆದರೆ ಅವರು ನಮ್ಮ ವಿದೇಶಾಂಗ ಸಚಿವರು!

* * *

ಪ್ರಜಾಪ್ರಭುತ್ವದಲ್ಲಿ, ಅದರಲ್ಲೂ ಅಷ್ಟೊಂದು ವೈವಿಧ್ಯಮಯವಾದ ನಮ್ಮ ಸಾಮಾಜಿಕ ಪರಿಸ್ಥಿತಿಯಲ್ಲಿ, ಸಂಯುಕ್ತರಂಗವನ್ನು ಹೇಗೆ ನಡೆಸಬೇಕೆಂಬ ರಾಜಕೀಯ ಕಲೆಯನ್ನು ಅರಿಯದ ಮುಖ್ಯ ಪಕ್ಷಗಳು, ಅವರು ನಡೆಸುವ ಸಂಯುಕ್ತರಂಗದ ಕುತಂತ್ರಕ್ಕೆ, 'ಧರ್ಮ' ವೆಂಬ ಹೆಸರಿಟ್ಟು, ತಮ್ಮೊಡನೆ ಪಾಲುದಾರರಾದ ಚಿಕ್ಕ ಪಕ್ಷಗಳು ಭ್ರಷ್ಟ; ತಾವಲ್ಲ, ವಿಧಿ ಇಲ್ಲದೆ ಅವರೊಡನೆ ರಾಜಿ ಮಾಡಿಕೊಂಡಿರುವುದೆ ಭ್ರಷ್ಟಾಚಾರಕ್ಕೆ ಕಾರಣವೆನ್ನುತ್ತಿದ್ದಾರೆ. ಏಕಪಕ್ಷಕ್ಕೆ ಹೆಚ್ಚುಮತ ನೀಡಿದಾಗಲೂ ಭ್ರಷ್ಟರಾದ ಇವರ ಮೇಲೆ ಒಂದಿಷ್ಟು ಅಂಕುಶ ವೆಂಬಂತೆ ಜನತೆ ಸಾಕಷ್ಟು ಬಹುಮತ ನೀಡದ ಪ್ರಯೋಗ ಮಾಡಿದೆ. ಅಂದರೆ, ಬಡತನ ನಿವಾರಣೆ ಮಾಡುವಂಥ ಅಭಿವೃದ್ಧಿ ಮಾರ್ಗವನ್ನು ಹಿಡಿದು ಜನತೆಯ ಬೆಂಬಲ ಪಡೆಯುವ ಬದಲು, ಕಡಿಮೆ ಅಥವಾ ಹೆಚ್ಚು ಭ್ರಷ್ಟಾಚಾರದ ಆಯ್ಕೆಯಷ್ಟೆ ಜನರಿಗೆ, ಎನ್ನುವಂತಿದೆ ಇವರ ಚಿಂತನೆ! ವಾಸ್ತವದಲ್ಲಿ ಮಮತಾ, ಲಲ್ಲೂ, ಕಲೈಂಞರ್ ಕಡೆ ಬೆರಳು ಮಾಡುತ್ತಾ, ತಮ್ಮ ತೀರ್ಮಾನಗಳನ್ನೆಲ್ಲಾ ಕಾರ್ಪೊರೇಟ್ ಛೇಂಬರುಗಳಲ್ಲಿ ತೆಗೆದುಕೊಳ್ಳುವ ಪರಿಪಾಟಲು ೧೯೯೧ರಿಂದ ನಡೆಯುತ್ತಿದ್ದು, ನಮ್ಮ ಪ್ರಜಾಪ್ರಭುತ್ವವನ್ನು ಬುಡಮೇಲು ಮಾಡಿರುವುದು ಯಾರು ಎಂಬುದು ಸ್ಪಷ್ಟವಾಗಿದೆ. ಕಾನೂನು ವ್ಯವಸ್ಥೆಯಲ್ಲಿ ಭ್ರಷ್ಟರನ್ನು ನೇಮಿಸುವುದೂ ಈ ಪ್ರಕ್ರಿಯೆಯ ಅಂಗ. ''ಕಾನೂನು ತನ್ನ ಕ್ರಮ ಜರುಗಿಸುತ್ತದೆ'' ಎಂದು ನಿರ್ಭಿಡೆಯಿಂದ ಹೇಳಲು ಇದರಿಂದ ಸಾಧ್ಯವಾಗಿದೆ. ಅಥವಾ ಈಗಷ್ಟೆ ಕೆಲವು ನ್ಯಾಯಾಧೀಶರು ಸುಪ್ರೀಂ ಕೋರ್ಟ್ ಮಟ್ಟದಲ್ಲಿ ಎಚ್ಚರಗೊಂಡು, ಪಟ್ಟಭದ್ರ ಹಿತಾಸಕ್ತಿಗಳಿಗೆ ಗಾಬರಿ ಉಂಟಾಗಿದೆ. ಅದರ ಹಿಂದೆ ಸಕ್ರಿಯ ರಾಜಕಾರಣಕ್ಕಿಂತ ಸಾರ್ವಜನಿಕ ಕಾಳಜಿಯ ಹಲವಾರು ಚಳುವಳಿಗಳ ಒತ್ತಡವಿರುವುದು ಇದಕ್ಕೆ ಕಾರಣವೇ ವಿನಾ ಬದಲಾದ ರಾಜಕೀಯವಲ್ಲ. ಭ್ರಷ್ಟರೆನಿಸಿಕೊಂಡವರನ್ನು ಮಂತ್ರಿಮಂಡಲದಿಂದ ಕೈಬಿಡಲೂ ಸಾಧ್ಯವಾಗಿಲ್ಲ ನಮ್ಮ ಪ್ರಧಾನಿಗೆ. ರಾಜಾ, ಮಾರನ್, ಬಾಲು, ಚವ್ಹಾಣ ಮುಂತಾದವರೆಲ್ಲಾ ಪುನಃ ಪುನಃ ಮುಂಬಾಗಿಲಿನಿಂದ ಹೋಗಿ ಹಿಂಬಾಗಿಲಿನಿಂದ ಒಳಗೆ ಬರುತ್ತಿದ್ದಾರೆ. ಈಗಷ್ಟೆ ಛತ್ತೀಸ್‌ಗಢದ ಬಿಜೆಪಿ ಮುಖ್ಯಮಂತ್ರಿ ಕಪ್ಪು ಹಣವಿಲ್ಲದೆ ಇಂದಿನ ಚುನಾವಣೆ ಸಾಧ್ಯವಿಲ್ಲ ಎಂದು ಬಹಿರಂಗವಾಗಿ ಹೇಳಿದ್ದಾರೆ. ಅಂದರೆ ಪದೇ ಪದೇ ಆರಿಸಿಬರುವ ಕೆಲವು ಭ್ರಷ್ಟರ ಹಿಂದೆ ಜನತೆಗಿಂತ ಹೆಚ್ಚಾಗಿ ಕಪ್ಪುಹಣದ ಬೆಂಬಲವೇ ಇರುವುದು ಎನ್ನುವುದು ಮತ್ತಷ್ಟು ಸ್ಪಷ್ಟ. ಅಂದರೆ ಚುನಾವಣೆಯಲ್ಲಿ ಆರಿಸಿ ಬಂದಷ್ಟಕ್ಕೆ ಒಬ್ಬನನ್ನು ಜನಪ್ರತಿನಿಧಿ ಎಂದೇನೂ ಹೇಳಲಾಗದು ಎನ್ನುವ ದುರಂತ ನಮ್ಮ ಪ್ರಜಾಪ್ರಭುತ್ವಕ್ಕೆ ಎಂಥ ಅವಹೇಳನವಾಗಿದೆ!

* * *

ಸುದ್ದಿ: ಭಾರತ ಬಡದೇಶವೆಂದು ಪ್ರಧಾನಿ ಪತ್ರಕರ್ತರಿಗೆ ಹೇಳಿದರು! ಬ್ರಿಟಿಷ್ ದೇಶದ ಆರ್ಥಿಕ ಆರೋಗ್ಯ ಅಷ್ಟೇನೂ ಚೆನ್ನಾಗಿಲ್ಲ, ಆದರೂ ಅದು ಭಾರತಕ್ಕೂ ಪಾಕಿಸ್ತಾನಕ್ಕೂ ಹಣಕಾಸಿನ ನೆರವನ್ನು ಮುಂದುವರಿಸಿದೆ. ನಮಗೆ ಒಂದೂ ಚಿಲ್ಲರೆ ಬಿಲಿಯನ್ನಾದರೆ ಪಾಕಿಸ್ತಾನಕ್ಕೆ ಅದರ ಮೂರುಪಟ್ಟು. ವಿಶ್ವದ ನಾಲ್ಕೋ, ಐದೋ ಮಟ್ಟದ ಆರ್ಥಿಕ ಪ್ರಮಾಣವೆಂದೆನಿಸುವಷ್ಟು ಶೇಕಡ ೧೦ರಷ್ಟು ದರದಲ್ಲಿ ಬೆಳೆಯುವ ನಮಗೇಕೆ ವಿದೇಶಿ ನೆರವು? ಅದೂ ನಾವೇ ಈಗ ಅಂಥ ನೆರವು ನೀಡುತ್ತಿರುವಾಗ? ''ನಾವು ಈಗಾಗಲೆ ಅಲ್ಲಿಯ ಬಡವರ ಕ್ಷೇತ್ರದಲ್ಲಿ ಕೆಲವು ಕೆಲಸಗಳಲ್ಲಿ ನಿರತರಾಗಿದ್ದು, ಭಾರತ ಸರ್ಕಾರ ಬೇಡ ಎನ್ನುವವರೆಗೆ ಇದನ್ನು ಮುಂದುವರಿಸುತ್ತೇವೆ'' ಎಂದು ಬ್ರಿಟಿಷ್ ಸರ್ಕಾರ ಹೇಳಿತು. ಭಾರತದ ಪ್ರಧಾನಿ ಪತ್ರಕರ್ತರಿಗೆ ಹೇಳಿದ್ದು – ನಮ್ಮದು ಇನ್ನೂ ಬಡದೇಶ, ಬೇಕಾದಷ್ಟು ನೆರವಿನ ಅಗತ್ಯವಿದೆ. ಯಾರಾದರೂ ತಾವಾಗೆ ನೀಡಿದರೆ ಬೇಡವೆನ್ನೆವು. ನಾವಾಗೆ ಬೇಡೆವು ಎಂದು. ವಿದೇಶಿಯರು ಎನ್‌ಜಿಒಗಳ ಮೂಲಕ ಸೇವೆಯ ನೆಪದಲ್ಲಿ ನಡೆಸುವ ಹಲವಾರು ಅವ್ಯವಹಾರಗಳು ಜಗಜ್ಜಾಹಿರಾಗಿವೆ. ಅಂಥ ನೆರವುಗಳನ್ನು ನೀಡುವ ತವಕ ಅವರಿಗೆ ಏಕೆ ಎಂದು ಅರ್ಥವಾಗುತ್ತದೆ. ಪ್ರಧಾನಿಯವರು ಕೆಲವೊಮ್ಮೆಯಾದರೂ ನಮ್ಮದು ಬಡದೇಶವೆಂದು ಜ್ಞಾಪಿಸಿಕೊಳ್ಳುವುದು ಒಳ್ಳೆಯದು. ನಮ್ಮಲ್ಲಿ ಈಗ ವಿದೇಶಿ ವಿನಿಮಯ ಸಾಕಷ್ಟು ಸಂಗ್ರಹವಾಗಿದೆ. ಹಾಗೂ ಬಡ್ಡಿದರ ಏರಿಸಿ, ಹೊರದೇಶದವರು ತಮ್ಮ ಹಣ ತರಲಿ ಎಂದು ಬಾಗಿಲು ತೆರೆದಿದ್ದೇವೆ. ಹಾಗಿರುವಾಗ ಬ್ರಿಟನ್ನಿನ ಅಥವಾ ಅಮೆರಿಕದ ಚಿಲ್ಲರೆ ನೆರವುಗಳಿಗೆ ಬಾಯಿಬಿಡುವುದು ಅಸಹ್ಯವಾಗಿ ಕಾಣುತ್ತದೆ. ದೇಶದಲ್ಲಿ ಆಹಾರದ ಕೊರತೆಯಾದರೆ ಎಷ್ಟೆ ಹಣಕೊಟ್ಟಾದರೂ ಹೊರಗಿನಿಂದ ಕೊಂಡು ತರಬಲ್ಲ ಶಕ್ತಿ ನಮ್ಮ ಸಂಗ್ರಹಿತ ವಿದೇಶಿ ವಿನಿಮಯ ಆಗಬಹುದಿತ್ತು. ಆದರೆ ಅದರ ಬಹುಭಾಗ ವೆಚ್ಚವಾಗುವ ಮಾರ್ಗವೆಂದರೆ ನಮ್ಮ ಉದ್ಯಮಪತಿಗಳು ದೇಶದೊಳಗೆ ತಮ್ಮ ಬಂಡವಾಳ ಹೂಡಿಕೆಯನ್ನು ಈಗಾಗಲೆ ಸಾಕಷ್ಟು ಮಾಡಿ, ಇನ್ನೇನು ಮಾಡುವುದು ಎಂದು ತಿಳಿಯದೆ ಈಗ ಪರದೇಶದಲ್ಲಿ ಬಂಡವಾಳ ಹೂಡಲು ಹೊರಟಿರುವುದರಿಂದ ಈರುಳ್ಳಿಯನ್ನೂ ಇತರ ಆಹಾರ ಸರಕುಗಳನ್ನೂ ವಿದೇಶಕ್ಕೆ ಕಳುಹಿಸಿಯಾದರೂ ವಿದೇಶಿ ವಿನಿಮಯ ಸಂಗ್ರಹಿಸದಿದ್ದರೆ, ಅವಮಾನಕರವಾದ ವಿದೇಶಿ ನೆರವನ್ನು ಇನ್ನೂ ಪಡೆಯುತ್ತಲೇ ಇರದಿದ್ದರೆ, ನಮ್ಮ ಉದ್ಯಮಪತಿಗಳೂ ಆಫ್ರಿಕಾದಲ್ಲೂ, ಅಮೆರಿಕದಲ್ಲೂ ಬಂಡವಾಳ ಹೂಡುವುದು ಹೇಗೆ? ಅವರು ಅಲ್ಲೆಲ್ಲಾ ತೆಗೆಯುವ ಸಾಲಕ್ಕೆ ನಮ್ಮ ಘನ ಸರ್ಕಾರ ಗ್ಯಾರಂಟಿ ಕೊಡದಿದ್ದರೆ ಹೇಗೆ?

* * *

ಅನಿಲ್ ಅಂಬಾನಿ, ಅರುಣ್‌ಶೌರಿಗಳಂತೆ ಮುಂದೊಮ್ಮೆ ಬಹುಶಃ ಟಾಟಾ ತಾವಾಗೆ ಸಿ.ಬಿ.ಐ. ಕಛೇರಿಗೆ ಭೇಟಿ ನೀಡಿ, ಅವರಿಗೆ ತನಿಖೆ ನಡೆಸಲು ನೆರವಾಗುತ್ತಾರೆ! ಇವರಿಗೆ ಸಿ.ಬಿ.ಐ. ನೋಟಿಸ್ ನೀಡುವುದಿಲ್ಲ ಅಥವಾ ಅದಕ್ಕೆ ಇವರು ಕಾಯುವುದಿಲ್ಲ. ಇವರೆಲ್ಲ ಪ್ರಾಮಾಣಿಕರು ಎನ್ನುವುದಕ್ಕೆ ಬೇರೆ ಏನು ಪುರಾವೆ ಬೇಕು! ಸಿ.ಬಿ.ಐ. ನಾವೇ ಕರೆಸಿದೆವು ಎನ್ನುವುದು, ಅಂಬಾನಿ ವಕ್ತಾರ ಹಾಗೇನಿಲ್ಲ, ತಾವಾಗೆ ಹೋದರು ಎನ್ನುವುದು ಇದೆಲ್ಲ ಗೊಂದಲದ ಸುದ್ದಿ ಕೇಳಿ ನಾವು ಈ ಸ್ಪಷ್ಟನೆ ನೀಡಬೇಕಾಗಿರುವುದು. ಸಿ.ಬಿ.ಐ. ಕಛೇರಿಯಲ್ಲಿ ಟೆಲಿಕಾಂ ರಾಜಾ, ರಿಲೈಯನ್ಸ್ ಟೆಲಿಕಾಂ ರಾಜ ಒಂದು ಗಂಟೆಗೂ ಮಿಕ್ಕು ಎದುರುಬದರಾದಾಗ ಏನೆಲ್ಲಾ ಆಗಿರಬಹುದು! ಹಿಂದಿ ಸಿನಿಮಾದಲ್ಲಿ ಸಾಮಾನ್ಯವಾಗಿ ಖಳನಾಯ್ಕನ ಮನೆಯಲ್ಲಿ ಪೊಲೀಸ್ ಅಧಿಕಾರಿಯನ್ನು ನಾಯಿಯಂತೆ ತೋರಿಸುವುದು ಬರೇ ನಾಟಕೀಯ ಅಷ್ಟೆ. ಬಾಸ್ ಯಾರು ಎನ್ನುವುದು ಎಲ್ಲರಿಗೂ ತಿಳಿದಿರುವುದು ಒಳ್ಳೆಯದು. ಅಂಬಾನಿಯವರು ವಾರಕ್ಕೊಮ್ಮೆ ದೆಹಲಿಗೆ ಮಾಮೂಲಿಯಾಗಿ ಭೇಟಿ ನೀಡುತ್ತಾರಂತೆ. ಹಾಗೆಯೇ ಈ ಸಲ ಸುದ್ದಿಯಲ್ಲಿರುವ ಕೆಲವು ವಿಷಯಗಳನ್ನು ಕುರಿತು ತಿಳುವಳಿಕೆ ನೀಡಲು ಸಿ.ಬಿ.ಐ. ಕಛೇರಿಗೂ ಭೇಟಿ ನೀಡಿದ್ದು ಅಷ್ಟೆ ಅನ್ನುತ್ತಾರೆ ಅವರ ವಕ್ತಾರರು. ಇದೂ ಮಾಮೂಲಾಗಬಹುದೇ ಎನ್ನುವುದು ಕೇವಲ ಕುಹಕ.

* * *

ಸಾಕ್ಷಿ ಪುರಾವೆ ಎಲ್ಲವನ್ನು ಗುಡಿಸಿ ಸಾರಿಸಿ ಆದಮೇಲೆ ಈಗಷ್ಟೆ ಜೆಪಿಸಿಗೆ ಒಪ್ಪಿಗೆ ದೊರಕಿದೆ. ಕುರುಡ ಧೃತರಾಷ್ಟ್ರ ನಮ್ಮವರಿಗೂ ಪಾಂಡವರಿಗೂ ನಡುವೆ ಏನೆಲ್ಲಾ ಚರ್ಚೆ ಆಯ್ತು ಎಂದು ಸಂಜಯನನ್ನು ಕೇಳಿದಂತೆ ವಿರೋಧ ಪಕ್ಷಕ್ಕೂ ಆಳುವ ಪಕ್ಷಕ್ಕೂ ತೆರೆಮರೆಯಲ್ಲಿ ಈ ಕುರಿತು ಏನೆಲ್ಲ ಚರ್ಚೆ ನಡೆಯಿತು ಎಂದು ಊಹಿಸಬೇಕೇನೋ ಅಷ್ಟೆ. ಗುಜರಾತ್ ಪ್ರಕರಣದ ವಿಚಾರಣೆಯಲ್ಲಿ, ಅಥವಾ ನಾವು ಅಧಿಕಾರದಲ್ಲಿದ್ದ ಕಾಲದ ಭ್ರಷ್ಟಾಚಾರವನ್ನು ನೀವು, ನಿಮ್ಮ ಭ್ರಷ್ಟಾಚಾರವನ್ನು ನಾವು ಆದಷ್ಟು ಎತ್ತಿಹಿಡಿಯದೆ ''ಪರಸ್ಪರಂ ಭಾವಯಂತಃ'' ಎಂದು ರಾಜಿ ಮಾಡಿಕೊಳ್ಳೋಣವೆ ಎಂದಿದ್ದರೆ ಬೆರಗಾಗಬೇಕಿಲ್ಲ. ಇದನ್ನೆ ಸ್ವಲ್ಪ ಹೆಚ್ಚು ಕಡಿಮೆ ಪ್ರಧಾನಿ ತಮ್ಮ ಪತ್ರಕರ್ತರೊಡನೆ ಚರ್ಚೆಯಲ್ಲಿ ಇಂಗಿತವಾಗಿ ಹೇಳಿದರಲ್ಲವೆ? ಭ್ರಷ್ಟಾಚಾರ ಬೇಕೋ, ಆರು ತಿಂಗಳಿಗೊಮ್ಮೆ ಚುನಾವಣೆ ಬೇಕೋ ಎಂದು ಬೆದರಿಸಿದ ಪ್ರಧಾನಿ, ಜೆಪಿಸಿ ವಿಷಯದಲ್ಲಿ ಯಾರಿಗೆ ಯಾರು ಹೆದರಿದ್ದಾರೆ ಎಂದೂ ಹೇಳಬಹುದಿತ್ತು. ಸುಪ್ರೀಂಕೋರ್ಟ್ ನಿರ್ದೇಶನದಲ್ಲಿ ಧೈರ್ಯವಾಗಿ ಸಿ.ಬಿ.ಐ. ತನಿಖೆ ಮಾಡುತ್ತಿರಲಾಗಿ, ಇನ್ನು ಏನಿದ್ದರೂ, ಎರಡೇ ಪಕ್ಷಗಳ ಪ್ರಜಾಪ್ರಭುತ್ವದ ಮಾದರಿ ಬಯಸುವ ಭಾಜಪ-ಕಾಂಗ್ರೆಸ್‌ಗಳೂ ಜೆಪಿಸಿಯನ್ನು ಹೇಗೆ ಪರಸ್ಪರ ಹಿತಾಸಕ್ತಿಗೆ ಬಳಸಿಕೊಳ್ಳುವುದು ಎಂದು ಚಿಂತಿಸುತ್ತಿದ್ದಾರು. ಈ ಹಿಂದಿನ ಜೆಪಿಸಿಗಳ ಸಾಧನೆ ತಿಳಿದ ಸಾರ್ವಜನಿಕರಿಗೆ ಈ ಜೆಪಿಸಿಯ ಬಗೆಗೂ ಯಾವ ಕುತೂಹಲವೂ ಉಳಿದಿಲ್ಲ. ಆದರೆ ಚರ್ಚೆಯಿಲ್ಲದೆ ಶಾಸನಗಳನ್ನು ಮಾಡುತ್ತಿರುವ ಶಾಸನಸಭೆಗಳು ಹೆಚ್ಚುತ್ತಿರುವುದು ಅವರಿಗೆ ಚಿಂತಾಜನಕವಾಗಿದೆ. ಎರಡು ಪಕ್ಷಗಳ, ಆರು ತಿಂಗಳಿಗೊಮ್ಮೆ ಚುನಾವಣೆಯ, ಬೆದರಿಕೆಗೆ ಸವಾಲಾಗಿ ಜನತೆ ಶೀಘ್ರದಲ್ಲೇ ಮೂರನೆಯ ಪರ್ಯಾಯವನ್ನು ಕಂಡುಕೊಳ್ಳಬೇಕು. ■




**'ಹೊಸತು' ವಿಶೇಷಾಂಕ**

೨೦೧೧ರ 'ಹೊಸತು' ವಿಶೇಷಾಂಕ ಕೈಸೇರಿ ಒಂದು ವಾರ ಆಯ್ತು. ಈವರೆಗೆ ಅದರ ವಾಚನವೇ ಬಿಟ್ಟೂಬಿಡದೆ ಮಾಡುವಂತಾಯ್ತು. ವಿಷಯ ವೈಪುಲ್ಯ ಹಾಗೂ 'ಹೊಸತು'ವಿನ ವೈಶಿಷ್ಟ್ಯಪೂರ್ಣ ವಿವೇಚನಾತ್ಮಕತೆಯನ್ನು ಪಡಿಬಿಂಬಿಸಿ ದಂತಿರುವ ಬರೆಹಗಳು, ಮಾಹಿತಿಪೂರ್ಣ ಲೇಖನಗಳು ಮನಸ್ಸಿಗೆ ಹಿಡಿಸಿದವು; ಹೀಗಾಗಿ ಈ ಸಪ್ತಾಹವು ಸಂತೋಷದ ಸಪ್ತಾಹವಾಗಿ ಮುದಗೊಳಿಸಿತು.

ಜಿ. ಶ್ರೀನಿವಾಸಮೂರ್ತಿಗಳ ಕಾಪಿಲ ಸಿದ್ಧಾಂತ, ನವಕಾಂತ ಭಟ್‌ರವರ 'ನ್ಯಾನೋ ಟೆಕ್ನೊಲಾಜಿ'ಯ ಅವಲೋಕನ, ಪರಂಜ್ಯೋತಿಯವರ 'ಚೆಂಜಿ ಕೋಟೆ' (ನಮ್ಮ ಕಡೆಗೆ ಮತ್ತು ಮಹಾರಾಷ್ಟ್ರದಲ್ಲಿ ಇದು 'ಜಿಂಜೀ' ಎಂದೆನಿಸಿದೆ) ಹಾಗೂ ಡಾ॥ ಎಚ್. ಎಸ್. ಗೋಪಾಲ ರಾವ್ ಅವರ ಪ್ರವಾಸ ಕಥನಗಳು ಬಹಳ ಖುಷಿಕೊಟ್ಟವು; ಚಿತ್ರಗಳೂ ಮನೋ ವೇದಕ ಬರವಣಿಗೆಯ ಶೈಲಿಯೂ ರೋಚಕವಾಗಿವೆ. ಕೆ. ಪಿ. ಸ್ವಾಮಿಯವರು ಸ್ವತಃ ವಿಚಕ್ಷಕ ಚಿತ್ರಗ್ರಾಹಕರು, ಈ ಐತಿಹಾಸಿಕ ಕೋಟೆಯ ಭಾವಚಿತ್ರಗಳು ಚೆನ್ನಾಗಿ ಹೊಂದಾಣಿಕೆ ಯಾಗಿದೆ. ರಹಮತ್ ತರೀಕೆರೆಯವರು ಬರೆದಿರುವ ಸಂದರ್ಶನ ಲೇಖನ ಮನಮುಟ್ಟುವಂತಿದೆ. ಅಶಾಂತ ಪರ್ವತ ಸದೃಶ ಶಾಂತರಸರೊಡನೆ ನಡೆಯಿಸಿದ್ದ ಸಂದರ್ಶನ ಸೊಗಸಾಗಿ ಒಡಮೂಡಿದೆ. ಜಿ. ಆರ್. ಹಾಗೂ ಕೆ.ಎಸ್.ಪಿ. ಯವರು ಒಕ್ಕಣಿಸಿರುವ ಸಂದರ್ಶನಗಳೂ ಆಯಾಯ ಮಹನೀಯರ ಒಳತೋಟಿಯ ನೋಟವನ್ನು ಪ್ರಕಟ ಗೊಳಿಸುವಲ್ಲಿ ಯಶಸ್ವಿಯಾಗಿವೆ.

ನಿರಂಜನ ವಾನಳ್ಳಿಯವರ ಮಾಧ್ಯಮಶಕ್ತಿ ಸತ್ಯ ಮತ್ತು ಮಿಥ್ಯೆ ಕಣ್ತೆರೆಸುವಂತಿದೆ. ಈಗೀಗಂತೂ ಬಹುತೇಕ ಪತ್ರಿಕೆ ಗಳು, ಚಾನೆಲ್‌ಗಳು ಸತ್ಯವನ್ನು ಮುಸುಕಿನಲ್ಲಿ ಬೈತಿಟ್ಟು ಮಿಥ್ಯೆಯನ್ನು ಸತ್ಯವನ್ನಾಗಿಸಿ ಮೆರೆಸುವ ಛಲ ತೊಟ್ಟಿದ್ದನ್ನು ಕಂಡಾಗ, ಕಾಣುತ್ತಿರುವಾಗ ಕೆ.ಎಸ್.ಪಿ.ಯವರ ಸಂಪಾದಕೀಯ 'ಕೊಳೆತು ನಾರುತ್ತಿರುವ ವ್ಯವಸ್ಥೆ'ಯ ಚರಮವಾಕ್ಯದಲ್ಲಿ, 'ಅಧಿಕಾರ ವರ್ಗ, ಶಾಸಕ ವರ್ಗ ಹಾಗೂ ನ್ಯಾಯಾಂಗ ಮೂರೂ ಕೆಟ್ಟರೆ ಪ್ರಜಾಪ್ರಭುತ್ವ ನಡೆಯುವುದು ಹೇಗೆ' ಎಂಬ ಪ್ರಶ್ನೆಯಲ್ಲಿ ನಾಲ್ಕನೇ ಸ್ತಂಭವನ್ನು ಹೆಸರಿಸದೇ ಇರೋದು ಲೋಪವೆಂದೆನ್ನಬೇಕಾಗುತ್ತದೆ; ಅದೂ ನೀರಾ ರಾಡಿಯಾ ಪ್ರವಾಹವು ಅಲ್ಲಿರುವ ರಾಡಿ ನೀರನ್ನೆಲ್ಲ ಹೊರಚೆಲ್ಲಿದ ಪ್ರಸ್ತುತ ಸಂದರ್ಭದಲ್ಲಿ.

ಒಟ್ಟಿನ ಮೇಲೆ ಒಳ್ಳೆಯ ವಿಶೇಷಾಂಕ ನೀಡಿದ್ದಕ್ಕಾಗಿ ನಿಮಗೆಲ್ಲ ಮನಮುಟ್ಟ ಸೈಪು ಸಲ್ಲಿಸುವೆ.

ಬೆಳಗಾವಿ **ಅನಂತ ಕಲ್ಲೋಳ**

ಸುಮಾರು ಆರು ವರ್ಷಗಳ ಕೆಳಗಿನ ಮಾತು. ಬೆಂಗಳೂರಿನ ಚಾಮರಾಜಪೇಟೆಯಲ್ಲಿ ನವಕರ್ನಾಟಕ ಪ್ರಕಾಶನದವರು ಪುಸ್ತಕ ಪ್ರದರ್ಶನ ಮತ್ತು ಮಾರಾಟ ಏರ್ಪಡಿಸಿದ್ದರು. ನಾನು ಒಳಹೋದೆ. ಪುಸ್ತಕದ ಸಾಲು ಸಾಲು ಜೋಡಣೆಯನ್ನು ನೋಡಿ ತುಂಬ ಸಂತಸವಾಯಿತು. ನಾನೂ ಒಂದೆರಡು ಪುಸ್ತಕ ಕೊಂಡು ಹೊರ ಬಂದೆ. ಒಂದೆಡೆ 'ಹೊಸತು' ವಿಶೇಷಾಂಕ ಜೋಡಿಸಿಟ್ಟಿದ್ದರು. ಹಾಗೆ ತಿರುವಿ ಹಾಕಿದಾಗ ಅದನ್ನು ಕೊಳ್ಳದಿರಲು ನನ್ನಿಂದ ಆಗಲೇ ಇಲ್ಲ. ಆಮೇಲಿನ ವರ್ಷಗಳಲ್ಲಿ ಪ್ರತಿವರ್ಷವೂ ವಿಶೇಷಾಂಕವನ್ನು ಪಡೆದುಕೊಳ್ಳುತ್ತಿದ್ದೇನೆ. ಅಲ್ಲಿಂದ ಈಚೆಗೆ ಈವರೆಗೂ ಪ್ರತಿ ವರ್ಷದ ವಿಶೇಷಾಂಕಗಳನ್ನು ಜತನದಿಂದ ಜೋಡಿಸಿಟ್ಟು ಆಗಾಗ ತಿರುವಿಹಾಕುತ್ತಿರುತ್ತೇನೆ. ವರ್ಷದಲ್ಲಿ ಸಾಮಾನ್ಯವಾಗಿ ಎಲ್ಲ ಪತ್ರಿಕೆಗಳು ವಿಶೇಷಾಂಕ ತರುತ್ತವೆ. ಆದರೆ 'ಹೊಸತು'ವಿನ ವಿಶೇಷಾಂಕದ ವಿಶೇಷವೇ ಬೇರೆ. ಎಂದಿಗೂ ಅಲ್ಲಿಯ ಲೇಖನಗಳು ಮೌಲ್ಯವುಳ್ಳವೆ.

ಬೆಂಗಳೂರು **ವಿ. ರಾಮಚಂದ್ರ ಶಾಸ್ತ್ರಿ**

ರಾಜ್ಯ ಮತ್ತು ರಾಷ್ಟ್ರ ಮಟ್ಟದ ಇತ್ತೀಚಿನ ರಾಜಕೀಯ ಬೆಳವಣಿಗೆಗಳು ಜನಸಾಮಾನ್ಯರಲ್ಲಿ ಜಿಗುಪ್ಸೆಯನ್ನು ಮೂಡಿಸಿವೆ. ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ




ಯಡಿಯೂರಪ್ಪನವರು ಭ್ರಷ್ಟಾಚಾರದ ಸುಳಿಯಲ್ಲಿ ಸಿಲುಕಿ ಕೊಂಡು ತಮ್ಮ ಸ್ಥಾನ ಮತ್ತು ಅಧಿಕಾರವನ್ನು ಉಳಿಸಿಕೊಳ್ಳಲು ಎಲ್ಲ ರಾಜಕೀಯ ತಂತ್ರಗಳನ್ನೂ ಪ್ರಯೋಗಿಸುತ್ತಿದ್ದಾರೆ.

ರಾಷ್ಟ್ರಮಟ್ಟದಲ್ಲಿ ಪರಿಸ್ಥಿತಿ ಭಿನ್ನವಾಗಿಲ್ಲ. ಯುಪಿಎ ಸರ್ಕಾರ, ೨-ಜಿ ಸ್ಪೆಕ್ಟ್ರಂ, ಕಾಮನ್‌ವೆಲ್ತ್ ಕ್ರೀಡಾಕೂಟ ಮುಂತಾದ ಹಗರಣಗಳ ಹಿನ್ನೆಲೆಯಲ್ಲಿ ಜನತೆಯನ್ನು ಎದುರಿಸಲು ಅಧೀರ ರಾಗಿದ್ದಾರೆ. ದೇಶಕ್ಕೆ ಅಗತ್ಯವಾದ ಸೂಕ್ತ ವಿದೇಶಾಂಗ ನೀತಿ ಯನ್ನು ರೂಪಿಸಿ, ಅನುಸರಿಸುವಲ್ಲಿ ವಿಫಲರಾಗಿದ್ದಾರೆ. ಆಹಾರ ಪದಾರ್ಥಗಳ ಬೆಲೆ ಏರಿಕೆ ಶೇಕಡ ೧೬-೨೦ಕ್ಕೆ ತಲುಪಿ, ಜನಸಾಮಾನ್ಯರ ಜೀವನವನ್ನು ಆತಂಕಕ್ಕೀಡುಮಾಡಿದೆ.

ಅನೇಕ ಕಾರಣಗಳಿಂದ ಬೇರೆಯಾಗಿರುವ ಎಡ ಪಂಥೀಯ ರಾಜಕೀಯ ಪಕ್ಷಗಳ ಧ್ವನಿ ಕ್ಷೀಣಿಸುತ್ತಿದೆ. ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಜನತೆ ರಾಜಕೀಯ ಪರ್ಯಾಯದ ಹುಡುಕಾಟದಲ್ಲಿ ಮಗ್ನರಾಗಿರುವಾಗ, ಎಡಪಂಥೀಯ ಪಕ್ಷಗಳು ಮತ್ತು ಪ್ರಜಾಸತ್ತಾತ್ಮಕ ಜಾತ್ಯತೀತ ಶಕ್ತಿಗಳು, ತಮ್ಮ ಅಸ್ತಿತ್ವವನ್ನು ಪ್ರಕಟಿಸಬೇಕಾಗಿದೆ. ಕೇಂದ್ರ ಸರ್ಕಾರ, ದೇಶದ ಆರ್ಥಿಕ ವ್ಯವಸ್ಥೆ ಶೇಕಡ ೯ರಷ್ಟು ಆರ್ಥಿಕ ಬೆಳವಣಿಗೆಯನ್ನು ಪ್ರಸಕ್ತ ಹಣಕಾಸು ವರ್ಷದಲ್ಲಿ ಸಾಧಿಸಲಿದೆ ಎಂದು ಅತೀವ ಸಂತಸವನ್ನು ವ್ಯಕ್ತಪಡಿಸಿದೆ. ಷೇರು ಮಾರುಕಟ್ಟೆ ಸೂಚ್ಯಂಕದ ಏರಿಕೆ, ಮತ್ತು ಆರ್ಥಿಕ ಬೆಳವಣಿಗೆಯ ಪ್ರಮಾಣ ಶೇಕಡ ೪೦ರಷ್ಟು ಬಡತನ ರೇಖೆಯ ಕೆಳಗಿರುವ ಈ ದೇಶದ ಜನಸಂಖ್ಯೆಯ ಜೀವನದಲ್ಲಿ ಸುಧಾರಣೆಯನ್ನು ತಂದಿಲ್ಲ.

ಒಂದು ಸತ್ವಯುತ, ಪರ್ಯಾಯ ರಾಜಕೀಯ ಶಕ್ತಿ ಜನತೆಯ ನಡುವೆ ಮೂಡಿದಾಗ ಮತ್ತು ಅಧಿಕಾರ ವಹಿಸಿಕೊಂಡಾಗ ಮಾತ್ರ ಜನಸಾಮಾನ್ಯರ ಜೀವನ ಬದಲಾಗಬಹುದು.

ಬೆಂಗಳೂರು **ಶಂಕರನಾರಾಯಣ**

ಮಕ್ಕಳ ಮುಖಪುಟದ ಆಕರ್ಷಣೆಯೇ ಒಂದು ರೀತಿಯ ಖುಷಿ ಕೊಡುವಂತಹುದು. ಫೆಬ್ರವರಿ ೨೦೧೧ರ ಸಂಚಿಕೆಯ ಚಿನ್ನಾರಿಯ ನೋಟ ನಿಜಕ್ಕೂ ಸಂತಸ ತಂದಿತು!

ಇನ್ನು ನ್ಯಾ॥ ಬಿ. ಎನ್. ಶ್ರೀಕೃಷ್ಣರ ತೆಲಂಗಾಣ ರಾಜ್ಯದ ಬಗ್ಗೆ ನೀಡಿದ ವರದಿಯ ಬಗ್ಗೆ ಒಂದು ಸಂಪಾದಕೀಯ ವಾಸ್ತವಿಕತೆಯ ಬುನಾದಿ ಹೊಂದಿದ್ದು, ಸಂದರ್ಭೋಚಿತವಾಗಿತ್ತು.

ಪ್ರೊ॥ ಆರ್. ಪಿ. ಪುನಗಿನ ಅವರ 'ಉಚಿತ ಕಡ್ಡಾಯ ಶಿಕ್ಷಣ' ಲೇಖನ ಕೇಂದ್ರದ ಶಿಕ್ಷಣ ನೀತಿಗೆ ಹಿಡಿದ ಕನ್ನಡಿಯಾಗಿ ಮೂಡಿಬಂದರೂ ಕೊನೆಗುಳಿಯುವ ಪ್ರಶ್ನೆ ಈ ಯೋಜನೆಯ ಜಾರಿ ಯಶಸ್ವಿಯಾದೀತೇ ಎಂಬುದು. ಶ್ರೀಮಂತ ಮಕ್ಕಳ ಜೊತೆ ಸೆಣಸುವುದು ಶೇಕಡ ೨೫ರಷ್ಟು ಮಕ್ಕಳಿಗೆ ಸಾಧ್ಯವಾದೀತೇ? ಸರ್ಕಾರದಿಂದ ಬರುವ ಅನುದಾನದ ನೆಚ್ಚಿಕೆಯಲ್ಲಿ ಖಾಸಗಿ ಶಾಲೆಗಳು ಬಡ ಮಕ್ಕಳಿಗೆ ಪ್ರಾಮಾಣಿಕ ವಾಗಿ ಸವಲತ್ತುಗಳನ್ನು ಕೊಡಲು ಮುಂದಾಗುತ್ತವೆಯೇ?

ಮೂರನೆಯ ರಕ್ಷಾಪುಟ 'ಕಲಾ ಪುಟ'ವಾಗಿರದಿದ್ದುದ ರಿಂದ ಭಣ ಭಣ ಎನಿಸುತ್ತಿತ್ತು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಡಾ॥ ಬಿ. ಎ. ಸನದಿಯವರ ಅನುವಾದಿತ ಕವನ 'ಕಾದಲೆ'ಯ ಕಡೆಯ ಎರಡು ಸಾಲುಗಳು ("ಅಣಕಿಸುತಿರಲು ಈ ಬರಿ ಹಾಸಿಗೆ/ನಾನೊಬ್ಬಂಟಿಯೆ ಮಲಗುವುದಾದರು ಹೇಗೆ?"), ಗೊಂಡ ಜನಪದ ಗೀತೆಯೊಂದರ ಈ ಕಾವ್ಯಾತ್ಮಕ ಸಾಲುಗಳನ್ನು ನೆನಪಿಸಿದುವು: "ನೀನಿಲ್ಲದೆ ನನ್ನ ಹಾಸಿಗೆ ಸಪ್ಪೆಯಾಗುತ್ತದೆ/ಬಾಡಿದೆಲೆಗಳಿಂದ ಅಣಿಗೊಳಿಸಿದ ತಾಂಬೂಲದಂತೆ!"

ಮೈಸೂರು **ಪಿ.ಪಿ.ಕೆ.**

ಖಾಸಗೀಕರಣದ ಆರ್ಥಿಕ ನೀತಿಯ ಭಾಗವಾಗಿ ಪ್ರಪಂಚದ ಎಲ್ಲಾ ಕಡೆ ಮೊಬೈಲ್ ಬಳಕೆಗೆ ಬಂತು. ಅದರಲ್ಲಿನ ಅನುಕೂಲಗಳನ್ನು ಮಾನ್ಯ ಮಾಡುತ್ತಲೇ ಇಂದಿಗೂ ಅನೇಕರು ಮೊಬೈಲ್‌ನ ಮಾರಕ ಅಂಶಗಳನ್ನು ಟವರ್‌ಗಳ ಘಾತಕ ಪರಿಣಾಮಗಳನ್ನೂ ಪಟ್ಟಿ ಮಾಡುತ್ತಲೇ ಇದ್ದಾರೆ. ನನ್ನ ಕೈಲೇ ಇರುವ, ಬಳಸಲು ಹೇಗೋ ಹಾಗೆ ಬಳಸದಿರಲೂ ಸಾಧ್ಯವಿರುವ ಸ್ವಾತಂತ್ರ್ಯವನ್ನು ಇನ್ನೂ ಅಳಿಸಿಹಾಕದಿರುವ ಸಾಧನವಾಗಿರುವ ಮೊಬೈಲ್, ಜನವಿರೋಧಿ ನೀತಿಗಳ, ಪ್ರಜಾತಂತ್ರ ಮುಖವಾಡದ ಸರ್ವಾಧಿಕಾರೀ ಉದ್ಯಮಪರ ಸರಕಾರದ ಆರ್ಥಿಕ-ರಾಜಕೀಯದ ವಿರುದ್ಧ ನಾನು ಬಳಸ ಬಹುದಾದ, ನನಗೆಟಕುವ ಸಾಧನ ಮೊಬೈಲ್. ಆದ್ದರಿಂದ ಮೊಬೈಲನ್ನು ಬಿಸಾಡಿದ್ದೇನೆ. ಮೊಬೈಲ್ ತಂತ್ರಜ್ಞಾನಕ್ಕಿಂತ ಮೊಬೈಲ್ ಉದ್ಯಮ ಜನರನ್ನು ಆಳುತ್ತಿದೆ. ಎರಡೂ ಒಂದೇ ಎಂದು ತುಂಬಾ ಜನರು ಅಂದುಕೊಂಡಿದ್ದಾರೆ. ಜನರ ಕೈನ ಪುಡಿಗಾಸುಗಳನ್ನು ಉಪಾಯವಾಗಿ, ನಯವಾಗಿ ಅಗೋಚರ ವಾಗಿ ಒಟ್ಟುಮಾಡುವ ವ್ಯಾಪಾರ ಇದು. ನಾವಿಲ್ಲದೆ ಮೊಬೈಲ್ ಉದ್ಯಮ ನಡೆಯುವುದು ಸಾಧ್ಯವಿಲ್ಲ. ಆದ್ದರಿಂದ ಈ ಕ್ರಮ. ಮೊಬೈಲ್ ಅನಿವಾರ್ಯವೇನಲ್ಲ, ಹಾಗೆಂದು ನಂಬಿಸಿದ್ದಾರೆ.

ಮೈಸೂರು **ವಿ. ಎನ್. ಲಕ್ಷ್ಮೀನಾರಾಯಣ**



# ಪ್ರಜ್ಞಾವಂತ ಪ್ರಕಾಶ್ ನಂದಿಹೋದರು

ಅವರನ್ನು ಕಂಡು ಮಾತಾಡಿದ್ದು ಸುಮಾರು ಒಂದೂವರೆ ತಿಂಗಳ ಹಿಂದೆ. ಸಾಮಾನ್ಯವಾಗಿ ವಾರಕ್ಕೊಮ್ಮೆ ಒಂದು ಮಧ್ಯಾಹ್ನ ನವಕರ್ನಾಟಕ ಪುಸ್ತಕ ಮಳಿಗೆಗೆ ಬರುವುದು ಅವರ ರೂಢಿ. ಹತ್ತಾರು ಹೊಸ ಪುಸ್ತಕಗಳನ್ನು ಜೋಡಿಸಿಕೊಂಡು ಹೋಗದಿದ್ದರೆ ಅವರ ಮನಸ್ಸಿಗೆ ಹಿತವಿರುತ್ತಿರಲಿಲ್ಲ. ಅವರ ಓರಿಗೆಯ ಇತರರೆಷ್ಟೋ ಮಂದಿ ಅಕ್ಷರ ಶತ್ರುಗಳಾಗಿ ವರ್ತಿಸುವುದು ಅವರಿಗೂ ತಿಳಿದಿತ್ತು. ಅದಕ್ಕಾಗಿ ಬೇಸರಿಸುತ್ತಿದ್ದುದೂ ಉಂಟು. ನವಕರ್ನಾಟಕಕ್ಕೆ ಬಂದಾಗ ಇಬ್ಬರು ಮೂವರು ಮಿತ್ರರನ್ನಾದರೂ ಮಾತನಾಡಿಸಿ, ಕೆಲವು ವಿದ್ಯಮಾನಗಳನ್ನು ಚರ್ಚಿಸಿ, ಬರಲಿರುವ ದಿನಗಳಲ್ಲಿ ಉಂಟಾಗಬಹುದಾದ ಸನ್ನಿವೇಶಗಳ ಬಗ್ಗೆ ಖಿನ್ನತೆಯನ್ನು ವ್ಯಕ್ತಪಡಿಸಿ, ಈ ರುಜಿನಕ್ಕೆ ಮದ್ದೇನೆಂದು ಚಿಂತಿಸುವುದು ಅವರಿಗೆ ಆಗಿಬಂದಿದ್ದ ಒಂದು ಸುತ್ತ್ಯರ್ಹವಾದ ಗುಣ. 'ಹೊಸತು' ಪತ್ರಿಕೆ ಆರಂಭವಾದಾಗಿನಿಂದಲೂ ಅದನ್ನು ಆಮೂಲಾಗ್ರವಾಗಿ ಓದಿ ಆಗಾಗ್ಗೆ ಅಭಿಪ್ರಾಯಗಳನ್ನು ತಿಳಿಸುವ ಸೌಜನ್ಯ ಅವರದಾಗಿತ್ತು. ಅವರನ್ನು ಕಳೆದುಕೊಂಡಿರುವ ಇಂದಿನ ಸಂದರ್ಭದಲ್ಲಿ ಸನ್ಮಾನ್ಯ ಎಂ. ಪಿ. ಪ್ರಕಾಶ್ ಅವರನ್ನು ಗೌರವದಿಂದ ನೆನೆಯುತ್ತೇವೆ, ನಮ್ಮ ಅಭಿಮಾನ ಪೂರ್ವಕ ನಮನ ಸಲ್ಲಿಸುತ್ತೇವೆ.

೧೯೬೮-೬೯ರಲ್ಲಿ ಬೆಂಗಳೂರಿನ ಗಾಂಧಿ ಭವನದ ಬಳಿ ಇರುವ ವಲ್ಲಭ ನಿಕೇತನದ ಮಾವಿನ ಮರದ ಕೆಳಗೆ ಅಂದಿನ ವಿದ್ಯಾರ್ಥಿ ಯುವಜನ ಸಭಾ ಎರಡು ವಾರಕ್ಕೊಮ್ಮೆಯಾದರೂ ಒಂದೊಂದು ಅಧ್ಯಯನ ಗೋಷ್ಠಿಯನ್ನು ಆಯೋಜಿಸುತ್ತಿತ್ತು. ಈಗ ನವಕರ್ನಾಟಕದ ವ್ಯವಸ್ಥಾಪಕ ನಿರ್ದೇಶಕ ಶ್ರೀ. ಆರ್. ಎಸ್. ರಾಜಾರಾಮ್ ಮತ್ತು ಜೀವ ವಿಮಾ ಕಾರ್ಪೊರೇಶನ್ನಿನ ನೌಕರರಾಗಿದ್ದ ಶ್ರೀ. ಸಿ. ವಿ. ಜಯತೀರ್ಥ ಅವನ್ನು ಆಯೋಜಿಸುತ್ತಿದ್ದರು. ವಿಷಯಗಳು ವೈವಿಧ್ಯಮಯವಾಗಿರುತ್ತಿದ್ದುವು. ಸಾಹಿತ್ಯ, ಇತಿಹಾಸ, ಅರ್ಥಶಾಸ್ತ್ರ, ರಾಜಕೀಯ, ಸಾಮಾಜಿಕ ಸಮಸ್ಯೆಗಳು, ತತ್ತ್ವಶಾಸ್ತ್ರ, ಹೀಗೆ ಎಲ್ಲಾ ಇರುತ್ತಿದ್ದುವು. ಪ್ರತಿ ಗೋಷ್ಠಿಯಲ್ಲೂ ಎರಡು ವಿಷಯಗಳು, ಮೂರು ಗಂಟೆಯ ಅವಧಿ, ನಂತರ ಚರ್ಚೆ. ನನಗೆ ನೆನಪಿರುವಂತೆ ಶ್ರೀ. ಪ್ರಕಾಶ್ ಅವರು ಅಂತಹ ಅನೇಕ ಗೋಷ್ಠಿಗಳಲ್ಲಿ ಉಪಸ್ಥಿತರಿದ್ದು ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಆಗ್ಗೆ ಅವರು ಬೆಂಗಳೂರಿನಲ್ಲಿ ವಾಸವಿದ್ದರೋ ಇಲ್ಲವೋ ತಿಳಿಯದು, ಆದರೆ ಊರಿನಲ್ಲಿದ್ದಾಗೆಲ್ಲಾ ಗೋಷ್ಠಿಗಳಿಗೆ ಬರುತ್ತಿದ್ದರು. ಎಷ್ಟೋ ವರ್ಷಗಳ ನಂತರವೂ ಅವರು ಅದನ್ನು ಆಗಾಗ್ಗೆ ಪ್ರಸ್ತಾಪಿಸುತ್ತಿದ್ದುದುಂಟು. ಅವರ ಇನ್ನೊಂದು ಶ್ಲಾಘನೀಯ ಲಕ್ಷಣವನ್ನು ಅವರಷ್ಟು ಪ್ರಸಿದ್ಧರಲ್ಲದವರಲ್ಲೂ ನಾನು ಕಂಡಿಲ್ಲ. ಯಾವುದಾದರೂ ಸಂದರ್ಭದಲ್ಲಿ ಒಬ್ಬರ ಪರಿಚಯವಾಗಿದ್ದರೆ ಅವರಿಗೆ ಅದೇ ವ್ಯಕ್ತಿಯ ಪರಿಚಯವನ್ನು ಪದೇ ಪದೇ ಮಾಡಿ ಕೊಡಬೇಕಾಗುತ್ತಿರಲಿಲ್ಲ. ಇದು ಕೇವಲ ಜ್ಞಾಪಕಶಕ್ತಿಯ ಪ್ರಶ್ನೆಯಲ್ಲ, ಅದು 'ಅಹಂ'ನ ಸಮಸ್ಯೆ. ಕೆಲವರಿದ್ದಾರೆ, ಪ್ರತಿ ಸಲ ಭೇಟಿಯಾದಾಗಲೂ ಹೊಸ ಪರಿಚಯವೆಂಬಂತೆ ನಟಿಸುತ್ತಾರೆ. ಅಂಥವರನ್ನು ಮಾತನಾಡಿಸುವುದೇ ಸರಿಯಲ್ಲವೆಂಬುದು ನನ್ನ ಅಭಿಪ್ರಾಯ. ಅವರನ್ನು ಕಂಡರೂ ಕಾಣದಂತೆ ನಟಿಸುವುದನ್ನು ನಾನೂ ಕಲಿತುಕೊಳ್ಳುವ ಪ್ರಸಂಗಗಳು ಬಂದಿವೆ. ಆದರೆ ಪ್ರಕಾಶ್ ಅವರಲ್ಲಿ ಅಂತಹ ಕೃತ್ರಿಮತೆ ಇರಲಿಲ್ಲವೆಂಬುದು ಒಂದು ದೊಡ್ಡ ಗುಣ. ಎಲ್ಲರನ್ನೂ ಗುರುತಿಸುವ ಲಕ್ಷಣ ಅದು.

ಜೆ. ಎಚ್. ಪಟೇಲ್ ಮುಖ್ಯಮಂತ್ರಿಯಾಗಿದ್ದಾಗ ಶ್ರೀ. ಪ್ರಕಾಶ್ ವಾರ್ತಾ ಸಚಿವರಾಗಿದ್ದರೆಂದು ನೆನಪು. ಅವರನ್ನು ಭೇಟಿಯಾಗಲು ಮೊದಲೇ ದಿನ ಮತ್ತು ಕಾಲಗಳನ್ನು ನಿಗದಿಪಡಿಸಿಕೊಂಡು ಹೋಗುವ ಪದ್ಧತಿ ಇರಲಿಲ್ಲ, ಹೋಗುವುದು; ಇದ್ದರೆ ಸಂಧಿಸುವುದು; ಇಲ್ಲದಿದ್ದರೆ ಒಂದು ಚೀಟಿಯಲ್ಲಿ ಹೆಸರು ಬರೆದಿಟ್ಟು ಬರುವುದು. ಇದೇ ರೂಢಿ. ಅವರು ಸಚಿವರಾಗಿದ್ದಾಗ ಒಮ್ಮೆ ಬೆಳಿಗ್ಗೆ ೧೦ ಗಂಟೆಯ ವೇಳೆಗೆ ಅವರ ಮನೆಗೆ ಹೋದೆ. ಮನೆಯಲ್ಲಿದ್ದರು, ಯಾರೊಡನೆಯೋ ಮಾತನಾಡುತ್ತಿದ್ದರು. ನನಗೆ ಅದು ತಿಳಿಯದು. ಕಚೇರಿಯಲ್ಲಿದ್ದ ಅವರ ಆಪ್ತ ಸಹಾಯಕರು ನನ್ನನ್ನು ಕೂಡಲೆ ಒಳಕ್ಕೆ ಕಳಿಸಿಬಿಟ್ಟರು. ಒಳಗೆ ಒಬ್ಬ ಯುವ ಅಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯದವರು, ನನಗೆ ಬಹಳ ಬೇಕಾದವರು. ಅವರು ಚರ್ಚಿಸುತ್ತಿದ್ದ ವಿಷಯ ತೀರಾ ವೈಯಕ್ತಿಕವಾದುದು; ಆದ್ದರಿಂದ ಅವರಿಗೆ ಸ್ವಲ್ಪ ಮುಜುಗರವಾಯಿತು. ಅವರು ನಿರ್ಗಮಿಸಿದ ನಂತರ ಶ್ರೀ. ಪ್ರಕಾಶ್ ಹೇಳಿದರು : ''ನೋಡಿ, ನಿಮ್ಮ ವಿಶ್ವವಿದ್ಯಾಲಯಗಳ ನಿಯಮಗಳು ಬಹಳ ಮೂರ್ಖತನದವು. ಪ್ರಾಧ್ಯಾಪಕರಾಗಿ ನೇಮಕಗೊಳ್ಳಲು ಸ್ವಲ್ಪವಾದರೂ ಮುದುಕರಾಗಿರಬೇಕೆಂಬುದು ನಿಮ್ಮ ಅಲಿಖಿತ ನಿಯಮವಂತೆ! ಅಂದರೇನು ? ಚಿಕ್ಕ ವಯಸ್ಸಿನಲ್ಲಿ ಪ್ರಬುದ್ಧರಾಗಿರಕೂಡದೆಂದೆ ? ಈಗ ಬಂದಿದ್ದರಲ್ಲ, ಅವರು ನಿಮಗೂ ಸ್ನೇಹಿತರು. ಪ್ರಾಧ್ಯಾಪಕರಾಗಿ ನೇಮಕವಾಗಲು ಅವರಿಗೆ ಅರ್ಹತೆ ಸಾಲದೆಂದು ಹೇಳುತ್ತಾರಂತಲ್ಲ, ಏನು ನಿಮ್ಮ ಉಪಕುಲಪತಿಗಳ ಅಳತೆಗೋಲು ?'' ಪ್ರಕಾಶ್ ಅವರ ಮಧ್ಯಪ್ರವೇಶದಿಂದ ಸಾಕಷ್ಟು ಚಿಕ್ಕ ವಯಸ್ಸಿನಲ್ಲೇ ಉನ್ನತ ಸ್ಥಾನಗಳಿಗೆ ಏರಿರುವ ಹಲವರ ಪರಿಚಯ ನನಗಿದೆ. ಯುವಕರಿಗೆ ಹೀಗೆ ಇಂಬು ನೀಡಿದ ಸಚಿವರು ವಿರಳ. ಬೇರೆಂಥದೋ ಕಾರಣಗಳಿಗಾಗಿ ಅನರ್ಹರನ್ನು ದೊಡ್ಡ ಜಾಗಗಳಿಗೆ ನೇಮಕ ಮಾಡಿಸಿರುವ ಸಚಿವರೇ ಹೆಚ್ಚು. ಅಂತಹ ಉದಾಹರಣೆಗಳಿಗೇನೂ ಕೊರತೆಯಿಲ್ಲ.

ಕೆಲವು ವರ್ಷಗಳ ಹಿಂದೆ ರಾಜ್ಯ ಸರ್ಕಾರವು ಮದ್ಯದ ಮಾರಾಟವನ್ನು ಕುರಿತಂತೆ ಹೊಸ ನೀತಿಯೊಂದನ್ನು ಪ್ರಕಟಿಸಿತ್ತು. ಅಂಥದೇ ತೀರ್ಮಾನವನ್ನು ಶ್ರೀ. ಎಸ್. ಎಂ. ಕೃಷ್ಣ ಮುಖ್ಯಮಂತ್ರಿಯಾಗಿದ್ದಾಗ ಪ್ರಕಟಿಸಿದ್ದು, ವಿರೋಧಗಳ ಪರಿಣಾಮವಾಗಿ ಹಿಂತೆಗೆದುಕೊಂಡಿದ್ದರು. ದಿನಸಿ ಅಂಗಡಿಗಳಲ್ಲೆಲ್ಲಾ ಮದ್ಯದ ಪಾಕೆಟ್‌ಗಳನ್ನು ಮಾರಬೇಕೆಂಬುದು ಆ ತೀರ್ಮಾನ. ಮದ್ಯದ ಲಾಬಿಯಿಂದಾಗಿ ಜೀವ ಕಳೆದುಕೊಂಡ ಎ. ಟಿ. ಬಾಬು ಪ್ರತಿಭಟನೆ ಆಯೋಜಿಸುವುದರಲ್ಲಿ ಪ್ರಮುಖರಾಗಿರುತ್ತಿದ್ದರು. ಹಿಂತೆಗೆದುಕೊಂಡಿದ್ದ ತೀರ್ಮಾನವನ್ನು ಸ್ವಲ್ಪ ಪರಿಷ್ಕರಿಸಿ ಸರ್ಕಾರ ಮತ್ತೆ ಹೊರಡಿಸಲಿದ್ದಿತು. ಜಕ್ಕರಾಯನ ಕೆರೆಯಿಂದ ನೆಹರು ನಗರದ ವೃತ್ತದವರೆಗೆ ಮೆರವಣಿಗೆ ನಡೆಯಿತು ಮತ್ತು ವೃತ್ತದಲ್ಲಿ ಸಭೆ ಆರಂಭವಾಯಿತು. ಆಗ ಮಧ್ಯಾಹ್ನ೧೨ ಗಂಟೆ. ಪ್ರಕಾಶ್ ಅವರು

ಆಗ ಗೃಹ ಸಚಿವರು. ಅನಿರೀಕ್ಷಿತವಾಗಿ ಸಭೆಯ ಬಳಿ ಬಂದು ಮಾತನಾಡಿದರು : ''ಸರ್ಕಾರದ ಒಂದು ಕೆಟ್ಟ ತೀರ್ಮಾನದಿಂದಾಗಿ ಶ್ರೀ. ಎಚ್. ಎಸ್. ದೊರೆಸ್ವಾಮಿ ಮತ್ತು ಶ್ರೀಮತಿ ಎಸ್. ಜಿ. ಸುಶೀಲಮ್ಮ ಅಂಥವರು ಬೀದಿಗೆ ಬರುವಂತಾಗಿರುವುದು ನನಗೆ ನಾಚಿಕೆಯೆನಿಸುತ್ತದೆ. ಮೂರು ದಿನಗಳ ಹಿಂದೆ ಸರ್ಕಾರವು ಸುಶೀಲಮ್ಮ ನವರಿಗೆ ಬಸವ ಪುರಸ್ಕಾರ ನೀಡಿತು, ಇಂದು ಅವರನ್ನು ಬೀದಿಗೆ ಎಳೆದೂತಂದಿದೆ. ಇರಲಿ, ಅವರಂಥವರು ಆ ನೀತಿ ಬೇಡವೆಂದರೆ ಅದನ್ನು ಜಾರಿಗೊಳಿಸುವು ದಿಲ್ಲವೆಂಬ ಆಶ್ವಾಸನೆ ನೀಡುತ್ತೇನೆ.'' ಎಷ್ಟು ಜನ ಸಚಿವರು ಹೀಗೆ ಪ್ರತಿಭಟನಕಾರರ ಮಧ್ಯೆ ತಾವಾಗಿಯೇ ಬಂದು ಆತ್ಮಾವಲೋಕನದ ಮಾತನಾಡಿದ್ದಾರೆ ? ''ಸಚಿವರು'' ಎಂಬ ಪದವಿ ದೊರೆತ ಕ್ಷಣದಿಂದ ''ನೋಡೋಣ,'' ''ಪರಿಶೀಲಿಸುತ್ತೇನೆ,'' ''ನೀವು ಹೀಗೆಲ್ಲಾ ಪ್ರತಿಭಟಿಸಬಾರದು,'' ''ಏನು ಮಾಡಬೇಕೆಂದು ಸಚಿವ ಸಂಪುಟಕ್ಕೆ ಗೊತ್ತು'' ಮುಂತಾಗಿ ಮಾತನಾಡುವವರೇ ಹೆಚ್ಚು. ಮಾನ್ಯ ಪ್ರಕಾಶ್ ಅವರನ್ನು ಕಂಡು ಅವರಿಂದ ಅಷ್ಟಾಗಿ ಕಲಿತ ಸಚಿವರು ಬಹಳಷ್ಟಿಲ್ಲದಿರುವುದು ನಮ್ಮ ರಾಜ್ಯದ ದುರಂತ.

''ತೆಹೆಲ್ಕಾ''ದಿಂದ ಜಾರ್ಜ್ ಫರ್ನಾಂಡೀಸರು ರಕ್ಷಣಾ ಸಚಿವರಾಗಿ ಎಸಗಿದ್ದ ಅಕ್ರಮಗಳು ಜಗಜ್ಜಾಹೀರಾದ್ದು ಈಗ ಇತಿಹಾಸ. ಆಸ್ತಿಯೇ ಇಲ್ಲದವರೆಂದು ಫರ್ನಾಂಡೀಸರ ಬಗ್ಗೆ ಐತಿಹ್ಯವೊಂದು ಪ್ರಚಾರದಲ್ಲಿತ್ತು. ಈಗ ಅವರ ಆಸ್ತಿಗಾಗಿ ಏನೆಲ್ಲಾ ಕೌಟುಂಬಿಕ ತಕರಾರುಗಳು ಎದ್ದಿವೆಯೆಂಬುದನ್ನು ನಾವಿಲ್ಲಿ ಪ್ರಸ್ತಾಪಿಸುವುದು ಬೇಡ. ''ತೆಹೆಲ್ಕಾ'' ಶೋಧದಿಂದ ಬಹಳ ವಿಚಲಿತರಾದವರು, ನೊಂದವರು, ಬೇಸತ್ತವರು ಶ್ರೀ. ಎಂ. ಪಿ. ಪ್ರಕಾಶ್. ''ತೆಹೆಲ್ಕಾ'' ನೀಡಿದ್ದ ಪುರಾವೆಗಳೆಲ್ಲಾ ಸುಳ್ಳೆಂದು ವಾದಿಸುವ ಒಂದು ಪುಸ್ತಕವನ್ನು ಫರ್ನಾಂಡೀಸ್ ಬೆಂಬಲಿಗರು ದೆಹಲಿಯಿಂದ ಪ್ರಕಟಿಸಿದ್ದರು. ಅದು ಇಂಗ್ಲಿಷ್‌ನಲ್ಲಿತ್ತು. ಒಮ್ಮೆ 'ಹೊಸತು' ಕಚೇರಿಗೆ ಬಂದಾಗ ಪ್ರಕಾಶ್ ಅದನ್ನು ತಂದಿದ್ದರು, ನಮಗೆ ಕೊಟ್ಟರು ಮತ್ತು ಹೇಳಿದರು : ''ಪ್ರಕಟಿತ ಅಂಶಗಳಿಗೆ ಪ್ರತಿಯಾಗಿ ಬೇರೆ ಅಂಶಗಳೂ ಇವೆ. ಈ ಪುಸ್ತಕ ಅದನ್ನು ದಾಖಲಿಸಿದೆ. ಓದಿನೋಡಿ, ನಿಮ್ಮ ಅಭಿಪ್ರಾಯ ಬದಲಾಗಬಹುದು.'' ಅವರು ಹೇಳಿದಂತೆ ಅದನ್ನು ಓದಿದೆ, ಆದರೆ ಅಭಿಪ್ರಾಯವೇನೂ ಬದಲಾಗಲಿಲ್ಲ. ಹಾಗೆಂದು ಮತ್ತೊಮ್ಮೆ ಅವರ ಭೇಟಿಯಾದಾಗ ಹೇಳಿದೆ. ಅವರೆಂದರು : ''ನಿಮ್ಮಿಷ್ಟ, ಆದರೆ ಹಲವರಂತೆ ನೀವೂ ಪೂರ್ವಗ್ರಹ ಪೀಡಿತರೆಂದು ತೋರುತ್ತದೆ. ನಾನಿನ್ನೇನು ಹೇಳಲಿ ?'' ಅವರ ಮನಸ್ಸಿಗೆ ಹಿಂಸೆಯುಂಟುಮಾಡಬಾರದೆಂದು ನಾನು ಮೌನವಾಗಿದ್ದೆ. ನನ್ನ ಟೀಕೆಯಿಂದ ಅವರಿಗೆ ನೋವುಂಟಾಗಿತ್ತಾದರೂ ವ್ಯವಹಾರದಲ್ಲಿ ಎಂದಿನಂತೆಯೇ ನಡೆದು ಕೊಂಡರು. ಅಪೂರ್ವವಾದ ಗುಣಗಳ ಖನಿ ಪ್ರಕಾಶ್ ಎಂದು ನಮಗೆ ತೋರಲು ಇಂತಹ ಎಷ್ಟೋ ಪ್ರಸಂಗಗಳಿವೆ. ಅವರು ಅನಾರೋಗ್ಯದಿಂದಿದ್ದಾಗ ಕಲಾವಿದೆ ಎನ್. ಮಂಗಳ ನನಗೆ ವಿಷಯ ತಿಳಿಸಿದರು. ಒಂದು ವಾರದ ನಂತರ ಅವರನ್ನು ಕಾಣಲು ಹೋದೆ. ಇನ್ನು ಹತ್ತು ದಿನಗಳ ನಂತರ ಶಸ್ತ್ರಚಿಕಿತ್ಸೆ ಯಾಗುವುದಿತ್ತು. ಲವಲವಿಕೆಯಿಂದಲೇ ಮಾತನಾಡಿದರು, ತಮ್ಮ ಅನಾರೋಗ್ಯದ ಲಕ್ಷಣಗಳನ್ನು ವಿವರಿಸಿದರು. ಹೀಗೆ ಹದಿನೈದು ನಿಮಿಷಗಳು ಕಳೆದಿದ್ದುವು. ಅವರನ್ನು ಕಾಣಲು ಯಾರೋ ಜಿಲ್ಲಾ ನ್ಯಾಯಾಧೀಶರು ಬಂದಿದ್ದಾರೆಂದು ಅವರ ಮನೆಯವರು ಸುದ್ದಿ ಮುಟ್ಟಿಸಿದರು. ಹೆಮ್ಮೆಪಡಬೇಕೋ, ಸಂಕೋಚದಿಂದ ಸಣ್ಣವನಾಗಬೇಕೋ, ಅಥವಾ ಪ್ರಕಾಶ್ ಅವರ ಹಿರಿತನಕ್ಕೆ ಪಾರವಿಲ್ಲವೆಂದು ನಮಿಸಬೇಕೋ, ತಿಳಿಯದು. ಅವರೆಂದರು : ''ರಾಮಕೃಷ್ಣ ಬರುವುದೇ ಅಪರೂಪ. ಅವರನ್ನು ಒಳಗೆ ಕುಳ್ಳಿರಿಸಿ. ಇನ್ನೈದು ನಿಮಿಷಗಳಲ್ಲಿ ಬಂದುಬಿಡುತ್ತೇನೆ.''



ಇಂತಹ ಸ್ನೇಹಜೀವಿಯನ್ನು ಕಳೆದುಕೊಂಡಿದ್ದೇವೆ. 'ಅಚಲ' ಪ್ರಕಟವಾಗುತ್ತಿದ್ದ ೨೨ ವರ್ಷಗಳ ಪರ್ಯಂತವೂ ಅವರು ಆ ಪತ್ರಿಕೆಯಲ್ಲಿ ಆಸಕ್ತಿ ತುಂಬಿಕೊಂಡು ಬೆಂಬಲ ನೀಡಿದವರು. ಒಮ್ಮೆ ಸವಣೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ವಕ್ಕುಂದ ದಂಪತಿಗಳ ನೇತೃತ್ವದಲ್ಲಿ ಜಾಗತೀಕರಣವನ್ನು ಕುರಿತಾದ ಎರಡು ದಿನಗಳ ವಿಚಾರ ಗೋಷ್ಠಿ ಆಯೋಜಿತವಾಗಿತ್ತು. ಅದರ ಸಮಾರೋಪ ಭಾಷಣ ಶ್ರೀ. ಪ್ರಕಾಶ್ ಅವರಿಂದ. ಆಗ ಅವರು ಸಚಿವ ಸ್ಥಾನದಲ್ಲಿರಲಿಲ್ಲ. ಅವರಿಗೆ ಮುನ್ನ ಮಾತನಾಡಿದ್ದ ನಾನು ಒಬ್ಬ ಹಿರಿಯ ಸಾಹಿತಿಯ ಬಗ್ಗೆ ಸ್ವಲ್ಪ ಕುಚೋದ್ಯದ ಮಾತನಾಡಿದ್ದೆ. ರಾಜ್ಯಸಭೆಗೆ ಹೋಗಬೇಕೆನ್ನುವ ಅವರ ತವಕವನ್ನು ಟೀಕಿಸಿದ್ದೆ. ಮಾನ್ಯ ಪ್ರಕಾಶ್ ಅವರು 'ಅಚಲ' ಪತ್ರಿಕೆಯನ್ನು ಪ್ರಶಂಸಿಸಿ, ನಂತರ ನನ್ನ ಮಾತಿಗೆ ನವಿರಾಗಿ ಉತ್ತರ ನೀಡಿ ಛೇಡಿಸಿದರು. ಅಂತಹ ಮೃದುಭಾಷಿ, ಕಟ್ಟುನಿಟ್ಟಿನ ತತ್ತ್ವಗಳ ನಿಷ್ಠಾವಂತ ಅನುಸಾರಿ, ನಮ್ಮನ್ನಗಲಿದ್ದಾರೆ. ಇನ್ನೊಂದು ಪ್ರಸಂಗ : ಈಗೆರಡು ವರ್ಷಗಳ ಹಿಂದೆ ಒಮ್ಮೆ ಯಥಾಪ್ರಕಾರ ನವಕರ್ನಾಟಕ ಪುಸ್ತಕ ಮಳಿಗೆಗೆ ಬಂದು ಒಂದಷ್ಟು ಪುಸ್ತಕ ಗಳನ್ನು ಆಯ್ದುಕೊಂಡಿದ್ದಾರೆ. ಮಳಿಗೆಯಲ್ಲಿದ್ದ ನೌಕರ ಬಿಲ್ಲು ತಯಾರಿಸಿದ್ದಾರೆ. ಆದರೆ ಪ್ರಕಾಶ್ ಅವರ ಜೇಬಿನಲ್ಲಿ ಅಷ್ಟು ಹಣವಿರಲಿಲ್ಲ. ತಮ್ಮ ಪರಿಚಯ ಹೇಳಿಕೊಂಡರು, ತಾವು ಯಾವಾಗಲೂ ಬರುವ ಗಿರಾಕಿ ಎಂದು ಹೇಳಿದರು, ನಾಳೆ ಮತ್ತೆ ಬಂದಾಗ ಮಿಕ್ಕ ಹಣ ಕೊಡುತ್ತೇನೆ ಎಂದರು. ನೌಕರ ಒಪ್ಪಲಿಲ್ಲ. ಅವರು ಹೊಸಬರು, ಅವರಿಗೆ ಪ್ರಕಾಶ್ ಅವರ ಪರಿಚಯ ಕಡಿಮೆ. ಕೋಪಾವಿಷ್ಟರಾಗದೆ ಒಂದೆರಡು ಪುಸ್ತಕಗಳನ್ನು ಅಲ್ಲೇ ಬಿಟ್ಟು ಇದ್ದಷ್ಟು ಹಣ ನೀಡಿ ಪ್ರಕಾಶ್ ಹಿಂದಿರುಗಿದರು. ನಂತರ ಒಮ್ಮೆ 'ಹೊಸತು' ಕಚೇರಿಗೆ ಬಂದಾಗ ಹಿಂದಿನ ಅನುಭವವನ್ನು ಮೆಲುಕುಹಾಕಿದರು. ನಾನು ಲೋಕಾಭಿರಾಮವಾಗಿ ಏನೋ ಸಮಜಾಯಿಷಿ ನೀಡಿ ಪ್ರಕಾಶ್ ನೌಕರರನ್ನು ಅಪಾರ್ಥ ಮಾಡಿಕೊಳ್ಳಬೇಡಿರೆಂದು ವಿನಂತಿಸಿದೆ. ಅವರೆಂದರು : ''ವಿಷಯ ಅದಲ್ಲ, ಅಪಾರ್ಥ – ಅಸಮಾಧಾನ ಅವನ್ನೆಲ್ಲಾ ಪಕ್ಕಕ್ಕಿಡಿ. ನನ್ನ ಭಾವನೆ ಬೇರೆಯೇ ಇದೆ. ನಾನೆಂಥವನು, ನಾನು ಯಾರು, ಎಂದು ಹೇಳಿಕೊಳ್ಳದೆಯೇ ಅವರಿಗೆ ತಿಳಿಯುವಂತಹ ಕೆಲಸಗಳನ್ನು ನನ್ನ ಸಾರ್ವಜನಿಕ ಜೀವನದಲ್ಲಿ ಮಾಡಲಾಗಲಿಲ್ಲವಲ್ಲಾ ಎಂದು ನನಗೆ ನನ್ನ ಕಾರ್ಯಕ್ಷೇತ್ರದ ಆಯ್ಕೆಯ ಬಗ್ಗೆ ಪ್ರಶ್ನೆ ಎದ್ದಿದೆ. ಈಗದನ್ನು ತಿದ್ದಿಕೊಳ್ಳುವಂತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!''

ತಿದ್ದಿಕೊಳ್ಳುವುದು ಯಾವಾಗಲೂ ಇರುವಂಥದು. ಆದರೆ ತಿದ್ದಿಕೊಳ್ಳಬೇಕಾದ್ದು ಕನಿಷ್ಠ ಪ್ರಮಾಣದ್ದು ಎನಿಸುವಂತಹ ನಡತೆ ವಿಶೇಷವಾದ್ದು. ಅಂತಹ ಮಾದರಿ ಶ್ರೀ. ಪ್ರಕಾಶ್ ಅವರದು. ಅವರಿಗೆ ವೈಯಕ್ತಿಕವಾಗಿ ನನ್ನ ಪ್ರಣಾಮ ಸಲ್ಲಿಸುತ್ತೇನೆ.

'ಹೊಸತು' ಅನೇಕ ವೇಳೆ ಸಿನಿಮಾಗಳಲ್ಲಿ ಟಿ.ವಿ. ಧಾರಾವಾಹಿಗಳಲ್ಲಿ ಕಾಣಿಸಿ ಕೊಂಡಿದೆ. ಸಂಬಂಧಪಟ್ಟ ಪಾತ್ರಧಾರಿಗಳು ಮತ್ತು ನಿರ್ದೇಶಕರು ಪತ್ರಿಕೆಯನ್ನು ಗಮನಿಸಿದ್ದಾರೆಂಬುದು ನಮಗೆ ಸಮಾಧಾನದ ಸಂಗತಿ. ಆದರೆ ಪತ್ರಿಕೆಯ ಒಳಗಿರುವುದನ್ನೂ ಗಮನಿಸಿದ್ದಾರೋ ಇಲ್ಲವೋ ತಿಳಿಯದು. ಬಹುಶಃ ಗಮನಿಸಿಯೇ ಇರುತ್ತಾರೆಂಬ ಭರವಸೆ ನಮ್ಮದು. ಮಾನ್ಯ ಪ್ರಕಾಶ್ ಬೇರೆಯವರಂತಲ್ಲ. ವಿಧಾನಸಭೆಯಲ್ಲಿ ಅಭಿವೃದ್ಧಿಯ ಒಳ-ಹೊರಗುಗಳನ್ನು ಚರ್ಚಿಸುವಾಗ 'ಹೊಸತು' ಪತ್ರಿಕೆಯನ್ನು ತೋರಿಸಿ ಸದಸ್ಯರಿಗೆ ಹೇಳಿದ್ದರು : ''ಈ ಪತ್ರಿಕೆಯನ್ನು ತಪ್ಪದೆ ನೋಡಿದರೆ ನಾವು ಚರ್ಚಿಸುತ್ತಿರುವ ವಿಷಯದ ಬಗ್ಗೆ ಸರಿಯಾದ ಕಲ್ಪನೆ ದೊರೆಯುತ್ತದೆ. ದಯವಿಟ್ಟು ಅದನ್ನು ಮಾಡುವುದನ್ನು ರೂಢಿಸಿಕೊಳ್ಳಿ.'' ಇದು ಸ್ವಂತದ ಬೆನ್ನು ತಟ್ಟಿಕೊಳ್ಳುವ ಸಂಗತಿಯಲ್ಲ, ಅಭಿವೃದ್ಧಿ ಮೀಮಾಂಸೆಯನ್ನು ಪ್ರಕಾಶ್ ಎಷ್ಟು ಆಳವಾಗಿ, ಗಂಭೀರವಾಗಿ, ಅರ್ಥ ಮಾಡಿಕೊಂಡಿದ್ದರು, ಅದರ ಕಾಳಜಿ ಅವರಿಗೆಷ್ಟಿತ್ತು, ಎಂಬುದರ ನಿದರ್ಶನ.

ಇಷ್ಟೆಲ್ಲಾ ನೆನಪಿಸಿಕೊಂಡು, ಅವರಿಗೆ ಯಾವ ಅಪಚಾರವನ್ನೂ ಎಸಗದೆ, ಒಂದು ವಿಷಯವನ್ನು ಪರಾಮರ್ಶೆ ಮಾಡಿಕೊಳ್ಳ ಬೇಕೆನಿಸುತ್ತದೆ. ಕಳೆದ ಸುಮಾರು ಐದಾರು ವರ್ಷಗಳಲ್ಲಿ ಅದೆಷ್ಟು ಪಕ್ಷಗಳಲ್ಲಿ ತಮ್ಮ ವರ್ಚಸ್ಸನ್ನು ವ್ಯಯಮಾಡಲು ಶ್ರೀ. ಪ್ರಕಾಶ್ ಮುಂದಾದರು ಮತ್ತು ಅವರೇಕೆ ಹಾಗೆ ಮಾಡಬೇಕಾಯಿತು? ಇದಕ್ಕೆ ಉತ್ತರ ಕಠಿಣ. ಅಧಿಕಾರ ದಾಹವಂತೂ ಇರಲಿಲ್ಲ. ಹಾಗಾದರೆ ಬೇರೇನು ಅವರಿಗೆ ಈ ಬಲವಂತವನ್ನೊಡ್ಡಿತು ? ಅವರ ಮಗನ ವ್ಯವಹಾರಗಳು ಅಷ್ಟಾಗಿ ಹಿತಕರವಾಗಿರಲಿಲ್ಲವೆಂದೂ, ಅವನ್ನು ಸಾವರಿಸಲು ಪ್ರಕಾಶ್ ಅತೃಪ್ತಿಯಿಂದಲೇ ಕೆಲವು ಕ್ರಮಗಳನ್ನು ಕೈಗೊಂಡರೆಂದೂ ಕೆಲವರ ಅಂಬೋಣ. ನನಗೆ ಅದು ತಿಳಿಯದು, ನಾನವರನ್ನೆಂದೂ ಈ ಬಗ್ಗೆ ಪ್ರಶ್ನಿಸಿರಲಿಲ್ಲ, ಯಾರೋ ಹೇಳಿದರೆಂದು ನಂಬಿಬಿಡಬಹುದಾದಂತಹ ಸಂಗತಿ ಇದಲ್ಲವೆಂದಷ್ಟೇ ಹೇಳಬಹುದು.

ಜಿ. ಆರ್.

# ಮಹಜ್ಜೀವಿ ಜಿ. ವಿ. ನುಡಿ




೨೦೧೧ರ ಫೆಬ್ರವರಿ ೪ರಿಂದ ೬ರ ವರೆಗೆ ಬೆಂಗಳೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಎಪ್ಪತ್ತೇಳನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ ಆಯ್ದ ಭಾಗಗಳು.

*ಸರ್ವಜ್ಞಂ ತಮಹಂ ವಂದೇ ಪರಂಜ್ಯೋತಿಸ್ತಮೋಪಹಂ*
*ಪ್ರವೃತ್ತಾ ಯನ್ಮುಖಾದ್ದೇವೀ ಸರ್ವಭಾಷಾ ಸರಸ್ವತೀ*
– ನಾಗವರ್ಮ

**ಯಾರ ಮುಖದಿಂದೆದ್ದು ನಿಂದಳೊ**
**ಭಾಷೆಯೆಲ್ಲಕು ದೇವಿ ಸರಸ್ವತಿ**
**ಅಂಥ ದೇವಗೆ ಎಲ್ಲ ಬಲ್ಲಗೆ**
**ತಮವ ದೂಡುವ ಹೊಳೆವ ಬೆಳಕಿಗೆ**
**ಇದಿಗೊ ನನ್ನಯ ವಂದನೆ.**

ಎಲ್ಲ ಸಾರಸ್ವತ ಚೇತನಗಳಿಗೂ ನನ್ನ ಸಮಸ್ಕಾರ.

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಲೇಖಕರಿಗೆ ನೀಡುವ ಅತ್ಯಂತ ಪ್ರಮುಖವಾದ ಗೌರವ – ಇಂಥ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷ ಪದವಿ. ನನಗೆ ಈ ಗೌರವವನ್ನು ನೀಡಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಗೂ ಇತರ ಕಾರ್ಯಕಾರಿ ಸಮಿತಿ ಸದಸ್ಯರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸಿ ನನ್ನ ಕೆಲವು ಅರಿವಿನ ಮಾತುಗಳನ್ನು ಹೇಳುತ್ತೇನೆ. ಶಾಂತವಾಗಿ ಕೇಳಬೇಕೆಂದು ನನ್ನ ಬಿನ್ನಹ.

..............

ಇಂದು ನೆರವೇರುತ್ತಿರುವ ಸಮ್ಮೇಳನವು **ನವೋದಯದ ಶತಮಾನದ ಉತ್ಸವ ಸಮಾರಂಭವೆಂದು** ನಾನು ತಿಳಿದಿದ್ದೇನೆ. ಇಂದು ಇದರಲ್ಲಿ ಭಾಗವಹಿಸಿ ತಮ್ಮೆದುರು ಮಾತನಾಡಲು ನನಗೆ ಸಂತೋಷವಾಗುತ್ತಿದೆ.

**ಶ್ರೀಯವರ ಉದ್ದೇಶದಲ್ಲಿ ಮೂರು ಮುಖ್ಯವಾದ ವಿಷಯಗಳಿದ್ದವು.**

೧. ಇಲ್ಲಿಯವರೆಗೆ ಸಂಸ್ಕೃತದ ಪೋಷಣೆಯಲ್ಲಿ ಬೆಳೆದ ಕನ್ನಡವು ಇನ್ನು ಮುಂದೆ ಇಂಗ್ಲಿಷ್ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಬೇಕು.

೨. ಹೊಸಗನ್ನಡಕ್ಕೆ ನೂತನ ಗದ್ಯದ ಶೈಲಿಯನ್ನು ತಂದು ಕೊಡಬೇಕು.

೩. ಒಟ್ಟಿನಲ್ಲಿ ಉದಾರವಾದ ಜೀವನಧರ್ಮದ ಸಾರವನ್ನು ಪ್ರಚಾರ ಮಾಡಬೇಕು.

ಇಂಗ್ಲಿಷ್ ಸಾಹಿತ್ಯಕ್ಕೆ ಗ್ರೀಕ್, ಜರ್ಮನ್, ಫ್ರೆಂಚ್ ಮತ್ತು ಲ್ಯಾಟಿನ್ ಭಾಷಾ ಸಾಹಿತ್ಯಗಳ ಸತ್ವಗಳು ಇಳಿದು ಬಂದಿದ್ದವು. ಆ ಎಲ್ಲ ಪ್ರಭಾವಗಳೂ ಕನ್ನಡದ ಬೆಳವಣಿಗೆಯಲ್ಲಿ ಸಹಾಯವಾಗುತ್ತವೆ ಎಂಬುದು ಶ್ರೀಯವರ ಆಸೆಯಾಗಿತ್ತು. ಕನ್ನಡದಲ್ಲಿ ಇಂದಿನವರೆಗೆ ಆಗಿರುವ ಬೆಳವಣಿಗೆಯಿಂದ ಆ ಆಸೆಯು ಈಡೇರಿದೆ ಎಂಬುದು ಸಾಬೀತಾಗುತ್ತದೆ. ನವೋದಯದ ಪರಿಣಾಮವಾಗಿ ಕನ್ನಡದ ಸಾಹಿತ್ಯದಲ್ಲಿ ಏನೇನು ಬದಲಾವಣೆಯಾಗಿವೆ ಎಂಬುದನ್ನು ಮೇಲುಸ್ತರದಲ್ಲಿ ಪರಿಶೀಲಿಸಿದರೂ ನಿಜವಾಗಿ ಆಶ್ಚರ್ಯವಾಗುತ್ತದೆ.

ಮೈಸೂರಿನಲ್ಲಿ ೧೯೧೬ರಲ್ಲಿ ವಿಶ್ವವಿದ್ಯಾನಿಲಯವು ಸ್ಥಾಪಿತವಾದ ಮೇಲೆ ಆ ಊರಿನ ಮಹಾರಾಜ ಕಾಲೇಜು ಕನ್ನಡ ಸಾಹಿತ್ಯದ ಚಟುವಟಿಕೆಗಳ ಕೇಂದ್ರವಾಯಿತು. ಮೈಸೂರಿನಲ್ಲಿ ಪ್ರಾಚ್ಯವಸ್ತು ಭಂಡಾರವು ಕಾರ್ಯವನ್ನು ಪ್ರಾರಂಭಿಸಿತು. ಆ ಭಂಡಾರದಲ್ಲಿ ಪ್ರಾಚೀನವಾದ ಸಂಸ್ಕೃತ, ಕನ್ನಡ ಗ್ರಂಥಗಳೂ ಸಂಗ್ರಹವಾದವು. ಅನೇಕ ಹಸ್ತಪ್ರತಿಗಳು ಶೇಖರಗೊಂಡವು. ಹೊಸದಾಗಿ ಅನೇಕ ಗ್ರಂಥಗಳು ಸಂಪಾದಕರಿಂದ ಪರಿಷ್ಕರಿಸಲ್ಪಟ್ಟು ಮುದ್ರಣಕ್ಕೆ ಸಿದ್ಧವಾದವು. ಕಾಲೇಜಿನಲ್ಲಿ ಕನ್ನಡದ ಆಳವಾದ ವ್ಯಾಸಂಗ ನಡೆಯಿತು. ಹೊಸಗನ್ನಡದಲ್ಲಿ ಪ್ರಾಚೀನ ಗ್ರಂಥ ವಿಮರ್ಶೆಗಳು ರಚಿತವಾದವು. ಮೊತ್ತಮೊದಲಿಗೆ ಕುಮಾರವ್ಯಾಸ ಪ್ರಶಸ್ತಿ ರಚಿತವಾಯಿತು. ನಾಡಿನಲ್ಲೆಲ್ಲ ಹೊಸ ಹೊಸ ಕರ್ನಾಟಕ ಸಂಘಗಳು ಸ್ಥಾಪಿತವಾಗಿ ಸಾಹಿತ್ಯ ಪ್ರಚಾರಕಾರ್ಯ ನೆರವೇರಿತು. ಜನತೆಯಲ್ಲಿ ಕನ್ನಡದ ಬಗ್ಗೆ ಜಾಗೃತಿಯುಂಟಾಯಿತು.

ಸೃಷ್ಟಿಶೀಲ ಸಾಹಿತ್ಯವು ಪ್ರಕಟವಾದಂತೆಲ್ಲ ಹೊಸ ಲೇಖಕರ ಧ್ಯೇಯೋದ್ದೇಶಗಳು ಪ್ರಕಟವಾದವು. ಹಿಂದೆ ಆಧ್ಯಾತ್ಮಿಕದಲ್ಲಿ ಪ್ರಮುಖವಾದ ಆಸಕ್ತಿ ಇದ್ದದ್ದು ಈಗ ಬದಲಾಗಿ ಇಹದಲ್ಲಿರುವ ಮಾನವನ ಬಾಳಿನ ವಿಶ್ಲೇಷಣೆಯು ಹೆಚ್ಚು ಪ್ರಾಧಾನ್ಯವನ್ನು ಪಡೆಯಿತು. ಮಾನವನು ದೇವನೂ ಅಲ್ಲ ರಾಕ್ಷಸನೂ ಅಲ್ಲ – ಆದರೆ ಅವನು ಒಳಿತು ಕೆಡುಕುಗಳ ಮಿಶ್ರಣವಾದ ಸೃಷ್ಟಿ. ಅವನಿಗೆ ದೇಶಪ್ರೇಮ ಇದೆ, ಭಾಷಾ ಪ್ರೇಮವಿದೆ, ದೈವದಲ್ಲಿ ನಂಬಿಕೆ ಇದೆ, ಸಹಜೀವಿಗಳಲ್ಲಿ ಸ್ನೇಹವಿದೆ. ಎಲ್ಲಕ್ಕಿಂತ ಹೆಚ್ಚಾಗಿ ಜೀವನದಲ್ಲಿ ಶ್ರದ್ಧೆ ಇದೆ – ಭಕ್ತಿ ಭಾವನೆಯೂ ಇದೆ.



ಕೆಡುಕನ್ನು ತಿರಸ್ಕರಿಸಿ ಒಳಿತನ್ನು ಬಳಸುವ, ಮಾನವನ ಸ್ವಭಾವವಾದ ನೀತಿಯುತವಾದ ಪ್ರಾಮಾಣಿಕವಾದ ಬದುಕಿನ ಆಸಕ್ತಿ ಹೆಚ್ಚಾಯಿತು, ಅವನಿಗೆ... ಬಾಳು ನ್ಯಾಯನಿಷ್ಠೆಯಿಂದ ಕೂಡಿರಬೇಕು, ಪ್ರಾಮಾಣಿಕತೆ ಪ್ರದರ್ಶಿತವಾಗಬೇಕು, ಪಾರದರ್ಶಕವಾಗಿರಬೇಕು ಮುಂತಾದ ಉದಾತ್ತ ಭಾವನೆಗಳು ಜನತೆಗೆ ಬೇಕಾದವು. ಒಟ್ಟಿನಲ್ಲಿ ನವಭಾರತ ನಿರ್ಮಾಣವಾಗಬೇಕೆಂಬುದೇ ಮುಖ್ಯದೃಷ್ಟಿ.

ಈ ಹೊಸ ನಂಬಿಕೆಗಳಿಂದ ಸಾಹಿತ್ಯದ ಎಲ್ಲ ಪ್ರಕಾರಗಳೂ ಜೀವಂತವಾದವು. ಕಾವ್ಯ, ನಾಟಕ, ಕತೆ, ಕಾದಂಬರಿ, ಜೀವನಚಿತ್ರ, ಪ್ರಬಂಧ, ವಿಮರ್ಶೆ – ಇವೆಲ್ಲ ಬಹುಸಂಖ್ಯೆಯಲ್ಲಿ ಮುದ್ರಣಗೊಂಡವು. ದೇಶೋದ್ಧಾರದ ಜೊತೆಗೆ ಆತ್ಮೋದ್ಧಾರವೂ ಸೇರಿಕೊಂಡಿತು. ಶೋಷಿತರನ್ನು ಎತ್ತಿ ನಿಲ್ಲಿಸುವ ಪ್ರಯತ್ನ ಹೆಚ್ಚಾಯಿತು. ಸ್ವಾತಂತ್ರ್ಯಪ್ರಿಯತೆ ಎಷ್ಟು ಗಾಢವಾಯಿತೆಂದರೆ ಕವಿಗಳು ಹಾಡಿದರು ಹೀಗೆ :-

*ನೂರು ದೇವರನೆಲ್ಲ ನೂಕಾಚೆ ದೂರ*
*ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ!*

ಹೀಗೆ ಗಟ್ಟಿಯಾಗಿ ಘೋಷಿಸುವುದು ಸಾಧ್ಯವಾಯಿತು.

**Statement about ownership and other particulars about newspaper**

FORM IV

| | | |
|---|---|---|
| 1. | Place of publication | : Bangalore |
| 2. | Periodicity of its publication | : Monthly |
| 3. | Printer's Name | : R. S. Rajaram |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 4. | Publisher's Name | : R. S. Rajaram |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 5. | Editor's Name | : G. Ramakrishna |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 6. | Name and address of individuals who own the newspaper and partners and shareholders holding more than one percent of the total capital | : Navakarnataka Publications (P) Ltd., Embassy Centre, Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2011

ನವ ಸಾಹಿತಿಗಳೂ ತಮ್ಮ ಕೃತಿಗಳಿಂದ ಗಳಿಸಿದ ಹಿರಿಮೆ ಪ್ರಖರವಾಗಿತ್ತು. ಪರ್ವತೋಪಮವಾದ ಪ್ರತಿಭೆಯ ಮೂವರು ಮಹಾಕವಿಗಳು ನಾಡಿನಲ್ಲಿ ಬೆಳಗಿದರು. ಮಹಾಕಾವ್ಯಗಳ ಕಾಲ ಮುಗಿದುಹೋಯಿತು ಎಂಬಂತಿದ್ದ ಸಮಯದಲ್ಲಿ ಒಂದು ಅದ್ಭುತ ಮಹಾಕಾವ್ಯ ಸೃಷ್ಟಿಯಾಯಿತು. ಸಂಕೀರ್ಣವಾದ ಮಾನವ ಜೀವಿತದ ಸಾಪಿರ ಮುಖಗಳನ್ನು ಅತ್ಯಂತ ಭಾವತೀವ್ರತೆಯಿಂದ ಜಾನಪದ ಸತ್ವದಿಂದ ಚಿತ್ರಿಸಿ ಹಾಡಿದ ಕವಿಯೊಬ್ಬರು ಮಹಾಕವಿಗೆ ಸಮಾನರಾದರು. ಹರಿಸರ್ವೋತ್ತಮತ್ವದ ಆಧ್ಯಾತ್ಮಿಕ ದೃಷ್ಟಿಯ ಮತ್ತೊಬ್ಬ ಕವಿ ಮತ್ತೊಂದು ಕಿರು ಮಹಾಕಾವ್ಯವನ್ನೇ ರಚಿಸಿದರು. ಈ ಮೂವರಿಗೆ ಕಿಂಚಿನ್ನೂನವೆಂಬಂತೆ ಅನೇಕ ಕವಿಗಳು ಆಸಕ್ತರಾದ ಓದುಗರಿಗೆ ಹೃದಯ ತುಂಬುವ ಕವಿತೆಗಳನ್ನು ರಚಿಸಿದರು. ನವ್ಯ ಕಾವ್ಯವೆಂಬ ಹೊಸ ರಚನೆಗಳನ್ನು ರಚಿಸಿ ಮತ್ತೆ ಇಬ್ಬರು ಕವಿವರ್ಯರು ಇಂಗ್ಲೆಂಡ್ ಅಮೆರಿಕಗಳ ಹೊಸಕಾವ್ಯವನ್ನು ಅನುಸರಿಸಿ ಕನ್ನಡ ಕಾವ್ಯ ರಚನೆಗೆ ಹೊಸ ಭಾಷೆಯನ್ನು ಹೊಂದಿಸಿದರು. ಕ್ರಮೇಣ ನವ್ಯತೆ ಮಾಯವಾಗಿ ಕೆಲವು ಬದಲಾವಣೆಗಳೊಡನೆ ನವೋದಯದ ಪ್ರಭಾವ ಮತ್ತೂ ಪ್ರಖರವಾಗುತ್ತಾ ಇದೆ. ಇಂದು ರಸಿಕರ ಮನಸ್ಸನ್ನು ಮುದಗೊಳಿಸುವ ಕಾವ್ಯರಾಶಿ ರಚಿತವಾಗುತ್ತಲೆ ಇದೆ. ಸ್ತ್ರೀಯರು ಕೂಡ ಕೆಲವು ಉತ್ತಮ ಕವನಸಂಕಲನಗಳನ್ನು ತಂದಿದ್ದಾರೆ.

ಕಾವ್ಯ ಕ್ಷೇತ್ರದಷ್ಟೇ ಪ್ರಭಾವವುಳ್ಳ ಕತೆ-ಕಾದಂಬರಿಗಳ ವಿಭಾಗವೂ ಅತ್ಯಂತ ಜೀವಂತವಾದ ಪುಸ್ತಕಗಳಿಂದ ಅಲಂಕೃತವಾಗಿದೆ. ಕನ್ನಡದ ಆಸ್ತಿಯಾದ ಸಣ್ಣ ಕತೆಗಾರರಿಂದ ಸಾವಿರ ಪುಟಗಳ ಕಾದಂಬರಿಕಾರರವರೆಗೆ ಪ್ರಭಾವಿತರಾದ ಹತ್ತಾರು ಜನ ಕಥಾಸಾಹಿತ್ಯ ನಿರ್ಮಾಪಕರು ಈಗಲೂ ಇದ್ದಾರೆ. ಪ್ರಗತಿಶೀಲವೆಂಬ ಹೆಸರಿನ ಚಳವಳಿಯಿಂದ ಪ್ರಭಾವಿತರಾದ ಕೆಲವರು ನೂರಾರು ಕಾದಂಬರಿಗಳನ್ನು ರಚಿಸಿದ್ದಾರೆ. ಆ ದಾರಿಯಲ್ಲಿಯೇ ನಂಬಿಕೆ ಇದ್ದರೂ ಚಾರಿತ್ರಿಕ ಕಾದಂಬರಿಗಳನ್ನು ರಚಿಸಿದ ಹಿರಿಯರು, ದಲಿತರ ಉದ್ಧಾರಕ್ಕೆಂದೋ ಜನತೆಯ ಬಾಳಿನ ಸೊಗಸಿಗೆಂದೋ ರಚಿಸಿದ ಅನೇಕ ಕಾದಂಬರಿಗಳು ಪ್ರಕಟವಾಗಿವೆ. ಹತ್ತು ಜನ ಕಾದಂಬರಿಕಾರರು ವಿಶ್ವಕಾವ್ಯದ ರಚನೆಯ ಮಟ್ಟಕ್ಕೆ ಬರುವ ಕಾದಂಬರಿಗಳನ್ನು ರಚಿಸಿದ್ದಾರೆ. ಇವರೆಲ್ಲರ ಕಾದಂಬರಿಗಳು ಭಾರತದ ಇತರ ಭಾಷೆಗಳಿಗೆ ಅನುವಾದ ಗೊಂಡಿವೆ. ಪ್ರಗತಿಶೀಲ ಆಂದೋಳನವು ಬಹು ದಟ್ಟವಾದ ಪರಿಣಾಮವನ್ನು ಬೀರಿತು...

ನವೋದಯದ ಪರಿಣಾಮವಾಗಿ ಇಂಗ್ಲೆಂಡನ್ನೂ ಇಂಗ್ಲಿಷ್ ಭಾಷೆಯನ್ನೂ ಸಾಹಿತ್ಯವನ್ನೂ ಪ್ರೀತಿಯಿಂದ ಕಂಡು ಭಾರತೀಯ ಭಾಷಾ ಸಾಹಿತ್ಯಗಳನ್ನು ಒಂದು ಅವಗಣನೆಯ ದೃಷ್ಟಿಯಿಂದ ಕಾಣುವ ವ್ಯವಸ್ಥೆಯುಂಟಾಯಿತು. ಒಬ್ಬ ಕವಿ ಹಾಡಿದನು ಹೀಗೆ :-

*ಬೀಸುತಿದೆ ಪಶ್ಚಿಮದ ರಸಪೂರ್ಣ ಹೊಸಗಾಳಿ*
*ಭಾರತದ ಬಣಗು ಬಾಳ್ಮರವನಲುಗಾಡಿ*

ಈ ಬಗೆಯ ಭಾವನೆ ಕೆಲವರಲ್ಲಿ ಬೇರೂರಿತು. ಇಂಥ ಮಾತಿನಿಂದ ಇಂಗ್ಲೆಂಡನ್ನು ತುಂಬ ಎತ್ತರದಲ್ಲಿ ನಿಲ್ಲಿಸಿದಂತೆ ಕಾಣುತ್ತದೆ. ಇದಕ್ಕೆ ಕಾರಣವಿಲ್ಲದಿಲ್ಲ. ಭಾರತದಲ್ಲಿ ಚೆನ್ನಾಗಿ ಬೇರೂರಿದ್ದ ವಿವಿಧ ಧರ್ಮಗಳ, ಜಾತಿಕೋಮುಗಳ, ಹೆಣ್ಣನ್ನು ಅವಗಣಿಸುತ್ತಿದ್ದ ಭಾವನೆಗಳ ಪರಿಣಾಮವಾಗಿ ವರ್ಗಗಳೇರ್ಪಟ್ಟು ಶೋಷಿತವರ್ಗಗಳು ಹುಟ್ಟಿಕೊಂಡಿದ್ದವು. ಇಂಗ್ಲೆಂಡಿನ ಸರ್ವಾಧಿಕಾರದ ಆಡಳಿತದಲ್ಲಿ ಶೋಷಿತವರ್ಗಗಳೆಲ್ಲ ಎದ್ದು ನಿಂತು ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನಗಳನ್ನು ಕಾಣಬಹುದು ಎಂಬ ಆಸೆಯನ್ನು ಹೊಂದಿದ್ದು ಆಶ್ಚರ್ಯವಲ್ಲ. ಅದನ್ನು ಕೆಲವರು ಕವಿಗಳು ಮೆಚ್ಚಿಕೊಂಡರು. ಅಂಥ ಅವಕಾಶವನ್ನು ಹೊಗಳಿ ಕವನಗಳನ್ನು ರಚಿಸಿರಬಹುದು.

ಸ್ವಾತಂತ್ರ್ಯದ ಹೋರಾಟದಲ್ಲಿ ಡಾ|| ಅಂಬೇಡ್ಕರ್ ಅವರೂ ಅವರ ಅನುಯಾಯಿಗಳೂ ಸ್ವಾತಂತ್ರ್ಯದ ಗಳಿಕೆಗಿಂತ ಸಮಾಜದಲ್ಲಿ ಶೋಷಿತವರ್ಗಗಳಿಗೆ ಸಮಾನತೆಯನ್ನು ತರುವುದು ಅತ್ಯಗತ್ಯವಲ್ಲವೆ ಎಂಬ ಪ್ರಶ್ನೆಯನ್ನು ಎತ್ತಿಹಿಡಿದರು. ನವೋದಯದ ಕಾದಂಬರಿ ಗಳಲ್ಲಿಯೂ ಕತೆಗಳಲ್ಲಿಯೂ ಈ ಹೋರಾಟದ ಚಿತ್ರಗಳಿವೆ. ಇದೇನೂ ವಿರೋಧವಿಲ್ಲದ ಹೋರಾಟವಲ್ಲ. ಇಂಥ ಹೋರಾಟಕ್ಕೆ ಅಡ್ಡಿಯಾದ ಪ್ರಯತ್ನಗಳೂ ಮೂಡಿದವು. ಅಂಬೇಡ್ಕರ್ ಅವರ ವಾದವನ್ನು ವಿರೋಧಿಸಿ ಭಾರತದ ವೈಭವದ ಸಂಸ್ಕೃತಿಯ ಚರಿತ್ರೆಯನ್ನು ಎತ್ತಿಹಿಡಿದರು ಕೆಲವರು ಸಂಪ್ರದಾಯವಾದಿಗಳಾದ ವಿದ್ವಾಂಸರು.

...ಸ್ವಾತಂತ್ರ್ಯಾನಂತರದ ಕಥೆಯೇ ಬೇರೆ. ಹಿಂದೆ ಯಾರು ಯಾರು ಶೋಷಿತರಾಗಿದ್ದರೂ ಅವರೆಲ್ಲ ತಲೆ ಎತ್ತಿ ನಿಲ್ಲುವ ಅವಕಾಶವುಂಟಾಯಿತು. ದಲಿತ, ಬಂಡಾಯ, ಮಹಿಳಾ ಉದ್ಧಾರ, ಮತಾಂತರ ವಿರೋಧ ಇತ್ಯಾದಿ ವಸ್ತುಗಳುಳ್ಳ ಅನೇಕ ಕಾದಂಬರಿಗಳೂ, ಕತೆಗಳೂ ಇವೆ. ಕೆಲವರು ಲೇಖಕರು ಉಪಸಂಸ್ಕೃತಿಗಳ ಹೆಸರಿನಲ್ಲಿ ಕೆಳವರ್ಗದವರ ಸಾಮಾಜಿಕ ವ್ಯವಹಾರಗಳನ್ನು ಅಭ್ಯಾಸ ಮಾಡಿ ಅವುಗಳ ಹಿರಿಮೆಯನ್ನು ಚಿತ್ರಿಸಿದ್ದೂ ಉಂಟು.

ದಲಿತ ಸಾಹಿತ್ಯದ ಬಗ್ಗೆ ತುಂಬ ಚರ್ಚೆಯಾಯಿತು. ದಲಿತರೇ ಸ್ವಂತವಾಗಿ ಅವರ ಬಗ್ಗೆ ಬರೆದರೆ ಅದು ನಿಜವಾದ ದಲಿತ ಸಾಹಿತ್ಯ; ಬೇರೆಯವರು ಅಂಥ ಸಾಹಿತ್ಯವನ್ನು ಬರೆದರೆ ಅದು ದಲಿತಪರ ಸಾಹಿತ್ಯ ಎಂಬ ಭೇದವನ್ನು ಮಾಡಿದರು. ಇದನ್ನೂ ಕೆಲವರು ಒಪ್ಪಿದರು. ಈ ಬಗೆಯ ಎರಡು ವಿಭಾಗಗಳಲ್ಲಿಯೂ ಉತ್ತಮ ಕೃತಿಗಳು ರಚಿತವಾಗಿವೆ. ವಸಾಹತುಶಾಹಿ, ಪುರೋಹಿತ ಶಾಹಿ ಮುಂತಾದ ಶಬ್ದಗಳು ಆಯಾ ವರ್ಗದವರು ರಚಿಸಿದ ಸಾಹಿತ್ಯಕ್ಕೆ ಅನ್ವಯಿಸುತ್ತವೆ. ಇಂಥ ಸಾಹಿತ್ಯವೂ ಅಪಾರವಾಗಿದೆ...

ಕಳೆದ ಇಪ್ಪತ್ತು ವರ್ಷಗಳಲ್ಲಿ ಸಾಹಿತ್ಯವನ್ನು ರಚಿಸಿರುವ ಮಹಿಳಾ ವರ್ಗ ತುಂಬ ದೊಡ್ಡದಾಗಿದೆ. ಸುಮಾರು ೭೫ ಜನ ಉತ್ತಮ ಲೇಖಕಿಯರಿದ್ದಾರೆ. ಅವರೆಲ್ಲರ ಬಗ್ಗೆ ಒಂದು ಪರಿಚಯ ಗ್ರಂಥವೇ ಇದೆ. ಇವರಲ್ಲಿ ಕೆಲವರು ಹಿರಿಯ ಕವಿಗಳೂ ಕತೆಗಾರರೂ ಕಾದಂಬರಿಕಾರರೂ ವಿಮರ್ಶಕರೂ ಇದ್ದಾರೆ.

...ನಾನು ಮಾತನಾಡುತ್ತಿರುವ ಈ ದಶಮಾನದಲ್ಲಿ ಕೂಡ ಕನ್ನಡದಲ್ಲಿ ಬರುತ್ತಿರುವ ಲೇಖನದ ಭಾಷೆಯಲ್ಲಿ ಬೇರೊಂದು ಬಗೆಯ ನವೀನತೆ ಕಾಣಬರುತ್ತಿದೆ. ವಾರ್ತಾ ಪತ್ರಿಕೆಗಳಲ್ಲಿ ಈಗ ಬರುವ ಯುವ ಲೇಖಕರು ಬಳಸುವ ಭಾಷೆಯಲ್ಲಿ ಹತ್ತು ವರ್ಷಗಳ ಹಿಂದಿನ ಭಾಷೆಗಿಂತ ಪೂರ್ಣವಾಗಿ ಬದಲಾದ ರೀತಿ ಎದ್ದು ಕಾಣುತ್ತಿದೆ. ಅದರಲ್ಲಿ ನಿಜವಾಗಿಯೂ ಒಂದು ಹೊಸ ಆಕರ್ಷಕ ಶೈಲಿ ರೂಪುಗೊಳ್ಳುತ್ತಿದೆ. ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ವಿಶೇಷವಾಗಿ ಕಲಿಯದಿದ್ದರೂ ಕನ್ನಡದಲ್ಲಿ ಲೇಖನಗಳನ್ನು ರಚಿಸುವವರನ್ನೂ ಕವನ ಕಟ್ಟಿಕೊಡುವವರನ್ನೂ ನಾನು ಕಂಡಿದ್ದೇನೆ. ಅವರು ವೈದ್ಯರು, ತಂತ್ರಜ್ಞಾನಿಗಳು, ವಿಜ್ಞಾನಿಗಳು... ಹೀಗೆ. ಅವರಿಗೆ ಉತ್ಸಾಹವಿದೆ, ದಟ್ಟವಾದ ಅರಿವಿಲ್ಲ. ಅಂಥವರ ಬರಹದಲ್ಲಿ ಸಾಮರ್ಥ್ಯ ಹೆಚ್ಚಬೇಕಾದರೆ ಹಳೆಗನ್ನಡದ ಹಿನ್ನೆಲೆ ಸ್ವಲ್ಪ ಇರಬೇಕು. ಇಂಥವರು ಸ್ವಲ್ಪ ಶ್ರಮಪಟ್ಟರೆ ಅವರೇ ಸ್ವಂತವಾಗಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವ ಮಾರ್ಗವಿದೆ. ಅದು ಕುಮಾರವ್ಯಾಸನನ್ನೂ ವಚನಸಾಹಿತ್ಯವನ್ನೂ ಪ್ರತಿನಿತ್ಯ ಸ್ವಲ್ಪ ಸ್ವಲ್ಪ ಓದುವುದು, ಇಷ್ಟೆ! ಹೀಗೆ ಅವರೆಲ್ಲ ಬೆಳೆಯಲಿ ಎಂದು ಹಾರೈಸುತ್ತೇನೆ.

ಕೆಲವರು ಮಹಿಳೆಯರ ಬರಹಗಳಲ್ಲಿ, ಇದು ಪುರುಷರು ಬಳಸಲಾಗದ ಶೈಲಿ ಎಂಬಷ್ಟು ವ್ಯತ್ಯಾಸವನ್ನು ನಾನು ಪರಿಗಣಿಸಿದ್ದೇನೆ. ನನ್ನ ಕೆಲವು ಮುನ್ನುಡಿಗಳಲ್ಲಿ ಈ ಮಾತನ್ನು ಹೇಳಿದ್ದೇನೆ ಕೂಡ. ಪ್ರಸಿದ್ಧರಾದ ಕೆಲವರು ಮಹಿಳೆಯರು ಅವರದೇ ಆದ ಶಬ್ದ ಸಮುದಾಯ ಗಳನ್ನು ರೂಪಿಸಿಕೊಂಡಿದ್ದಾರೆ. ಇದರಲ್ಲಿಯೂ ಒಂದು ಹೊಸತನವಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಶತಮಾನದ ಕೃಷಿಯಿಂದ ಕನ್ನಡದ ನೆಲ ಎಷ್ಟು ಫಲವತ್ತಾಗಿದೆ ಎಂಬುದು ಸ್ಪಷ್ಟವಾಗಿ ತಿಳಿಯಬರುತ್ತಿದೆ. ಮುಂದೆ ಬರುವ ಸಾಹಿತ್ಯಕ್ಕೆ ಬೇಕಾದ ಎಲ್ಲ ಹಿನ್ನೆಲೆಯನ್ನೂ ಈ ಶತಮಾನ ಸೃಷ್ಟಿಸಿದೆ. ನಾವಿನ್ನು ಹೊಸದಕ್ಕೆ ದಾರಿ ಮಾಡೋಣ. ಬರುವುದನ್ನು ಪ್ರೀತಿಯಿಂದ ನಿರೀಕ್ಷಿಸೋಣ, ಎಂಬ ಆಲೋಚನೆ ನನಗೆ ಹೊಳೆದಿದೆ.

ನಾನು ಕನ್ನಡ ಭಾಷೆಯ ವ್ಯಾಸಂಗದಲ್ಲಿ ನಿರತನಾಗಿ ರುವವನು. ಕನ್ನಡವನ್ನು ಆಳವಾಗಿ ಅರ್ಥಮಾಡಿ ಕೊಳ್ಳಬೇಕೆಂಬ ಆಸಕ್ತಿಯುಳ್ಳ ವಿದ್ಯಾರ್ಥಿ. ಕನ್ನಡವನ್ನು ಪ್ರೀತಿಸುವ ಜನಸಮುದಾಯದಲ್ಲಿ ನಾನೂ ಒಬ್ಬ. ಆದುದರಿಂದ ಆ ಭಾಷೆಯಲ್ಲಿ ಈಗ ಏನಾಗುತ್ತಿದೆ ಎಂಬುದರ ಕಡೆಗೆ ಈ ಬೃಹತ್‌ಸಭೆಯ ದೃಷ್ಟಿಯನ್ನು ಸೆಳೆಯಲು ಬಯಸುತ್ತೇನೆ. ಈಗಾಗಲೇ ಹೇಳಿರುವಂತೆ ಕನ್ನಡದ ಶಬ್ದಸಂಪತ್ತು ವೃದ್ಧಿ ಹೊಂದಿದೆ ಎಂಬುದು ನಿಜ. ಆದರೆ ಬೆಂಗಳೂರು ಮತ್ತು ಇತರ ಬೃಹನ್ನಗರಗಳಲ್ಲಿ ಮಧ್ಯಮ ವರ್ಗದ ಜನರು ಕನ್ನಡ ಭಾಷೆಯನ್ನು ಈಗ ಉಪಯೋಗಿಸುತ್ತಿರುವ ರೀತಿಯಲ್ಲಿ ಕನ್ನಡಕ್ಕೆ ಒಂದು ಅಪಾಯ ಕಾದಿದೆ. ನಾಗರಿಕರ ಆಡುಮಾತಿನಲ್ಲಿ ಇಂಗ್ಲಿಷ್ ಶಬ್ದಗಳ ಮಿಶ್ರಣದ ಪ್ರಮಾಣದಲ್ಲಿ ಏರುಪೇರಾಗಿದೆ. ಇದನ್ನು ಲೆಕ್ಕ ಮಾಡಿದರೆ ಶೇಕಡ ೬೦ರಷ್ಟು ಇಂಗ್ಲಿಷ್ ಶಬ್ದಗಳು ಕಾಣಬರುತ್ತಿವೆ. ಅವರು ಒಂದೇ ಒಂದು ವಾಕ್ಯವನ್ನೂ ಸಂಪೂರ್ಣವಾಗಿ ಕನ್ನಡದಲ್ಲಿ ಮಾತನಾಡುವುದಿಲ್ಲ. ಹಾಗೆ ಮಾತನಾಡಲು ಅವರಿಗೆ ಕನ್ನಡದ ಸಾಮರ್ಥ್ಯವಿದ್ದರೂ ಆ ಸಾಮರ್ಥ್ಯವನ್ನು ಉಪಯೋಗಿಸುತ್ತಿಲ್ಲ. ಇದೇ ನಿಜವಾದ ಅಪಾಯ. ಅವರು ತಾವು ಆಡುತ್ತಿರುವ ಮಾತಿನ ರೀತಿಯಲ್ಲಿರುವ ಅಪಾಯವನ್ನೂ ತಿಳಿಯದೆ ಇದ್ದಾರೆ.

...ಬೆಂಗಳೂರಿಗೆ ಬಂದ ಗ್ರಾಮೀಣ ಪ್ರದೇಶದ ಜನರಿಗೆ ಇವರ ಮಾತನ್ನು ಕೇಳಿ ದಿಗ್ಭ್ರಮೆಯಾಗುತ್ತದೆ. ಬೆಂಗಳೂರಿನಲ್ಲಿ ಕನ್ನಡ ಸಾಯುತ್ತಿದೆ ಎಂದು ಹೇಳುತ್ತಾರೆ. ಹಾಗೆ ಹೇಳುವವರಿಗೆ ಗ್ರಾಮೀಣ ಪ್ರದೇಶದಲ್ಲಿ ಅದು ಬದುಕಿ ಉಳಿಯುತ್ತದೆ ಎಂಬ ನಂಬಿಕೆಯಿದೆ. ಕನ್ನಡದ ರಾಜಧಾನಿಯಲ್ಲಿ ಕನ್ನಡ ಸತ್ತರೆ ಗ್ರಾಮೀಣ ಪ್ರದೇಶದಲ್ಲಿ ಉಳಿಯುತ್ತದೆಯೇ ?

.............

ಈಗಾಗಲೇ ಹಿಂದಿನ ಅನೇಕ ವರ್ಷಗಳಲ್ಲಿ ನಮ್ಮವೇ ಆದ ಎಷ್ಟೊಂದು ಇಂಗ್ಲಿಷ್ ಶಬ್ದಗಳಿವೆ ನೋಡಿ. ಕಾರು, ಬುಕ್ಕು, ಪೆನ್ನು, ಇಂಕು, ಪೇಪರ್ರು. ಆದರೆ ಈಗ ನುಗ್ಗಲು ಆತುರಪಡುತ್ತಿರುವ ಶಬ್ದಗಳು ಇಂಥ ಶಬ್ದಗಳಲ್ಲ; ಕನ್ನಡದಲ್ಲಿ ಸೊಗಸಾದ ಶಬ್ದಗಳಿರುವಾಗ ಅವುಗಳನ್ನೇ ತಳ್ಳಿ ಕನ್ನಡಕ್ಕೆ ಬರಲು ಪ್ರಯತ್ನಪಡುತ್ತಿರುವ ಶಬ್ದಗಳು. ಉದಾಹರಣೆ : ಚಿಲ್ಲೀಸ್, ರಾಡಿಶ್, ಬೀನ್ಸ್, ಕುಕುಂಬರ್ರು, ಕ್ಯಾಪ್ಸಿಕಮ್ಮು, ನೈಫು, ಆಯಿಲ್ಲು, ಬಟ್ಟರ್ರು, ಪೌಡರ್ರು, ಗ್ರೈಂಡು ಇತ್ಯಾದಿ. ಎಲ್ಲಾ ಅಡಿಗೆಮನೆಗೇ ನುಗ್ಗಿಬಿಟ್ಟಿವೆ. ಇದಕ್ಕೆ ಕಾರಣ ದೂರದರ್ಶನದಲ್ಲಿ 'ಹೊಸರುಚಿ'ಯ ಪ್ರದರ್ಶನ ಮಾಡುವ ಕನ್ನಡ ಮಹಿಳಾಮಣಿಗಳ ಸಂಭಾಷಣೆಯ ಪರಿಣಾಮ. ಎಫ್.ಎಂ. ರೇಡಿಯೋ, ದೂರದರ್ಶನದ ಅನೇಕ ವಾಹಿನಿಗಳ ಪ್ರಭಾವ. ವರ್ತಮಾನ ಪತ್ರಿಕೆ ಗಳಲ್ಲಿಯೂ, ದೂರದರ್ಶನದಲ್ಲಿಯೂ, ಆಕಾಶವಾಣಿ ಯಲ್ಲಿಯೂ ಪ್ರಚಾರವಾಗುವ ಇಂಥ ಪ್ರಯೋಗಗಳನ್ನು ನಿಲ್ಲಿಸಿ ನಮ್ಮಲ್ಲಿ ಪ್ರಚಾರದಲ್ಲಿರುವ ಕನ್ನಡ ಶಬ್ದಗಳನ್ನು ಉಪಯೋಗಿಸುವಂತೆ ಆಯಾ ಕೇಂದ್ರಗಳ ಅಧಿಕಾರಿಗಳು ನಿರ್ದೇಶಿಸಬೇಕು. ಯಾವ ಶಬ್ದ ಬೇಕಾದರೂ ನಿಧಾನವಾಗಿ ತಾನೇ ತಾನಾಗಿ ಬರಲಿ. ಆದರೆ ನಾವೇ ಅವುಗಳನ್ನು ಅನವಶ್ಯಕವಾಗಿ ಆಮದು ಮಾಡಿಕೊಳ್ಳ ಬಾರದು. ಹಾಗೆ ಮಾಡಿದರೆ ನಮ್ಮ ಸ್ವಂತ ಶಬ್ದಸಂಪತ್ತು ಮಾಯವಾಗಿಬಿಡುತ್ತದೆ. ನಾವು ಅವುಗಳಿಲ್ಲದೆ ಕನ್ನಡ ಶಬ್ದದರಿದ್ರರಾಗಿಬಿಡುತ್ತೇವೆ. ಸಮಾಜದ ಹಿರಿಯರು, ವಿದ್ಯಾವಂತ ಮಹಿಳೆಯರು, ಸಾಮಾಜಿಕ ಸಂಸ್ಥೆಗಳ ಕಾರ್ಯಕರ್ತರು, ವಾರ್ತಾಪತ್ರಿಕೆಗಳ ಪತ್ರಕರ್ತರು, ಕನ್ನಡ ಚಳವಳಿಯ ನಾಯಕರು ಇವರೆಲ್ಲರಿಗೂ ಈ ಬಗ್ಗೆ ತಿಳಿವಳಿಕೆಯನ್ನು ನೀಡುವ ಒಂದು ಕನ್ನಡ ಆಂದೋಳನ ನಡೆಯಬೇಕು... ಕನ್ನಡಕ್ಕೆ ಬರುವ ಶಬ್ದಗಳು ಯಾವ ಭಾಷೆಯಿಂದ ಬೇಕಾದರೂ ಬರಲಿ. ನಿಧಾನವಾಗಿ ಬರಲಿ. ನಾವೇ ಬಲವಂತವಾಗಿ ತುರುಕುವುದು ಬೇಡ, ಅಷ್ಟೆ!

ಅನೇಕ ದೂರದರ್ಶನ ವಾಹಿನಿಗಳಲ್ಲಿ– ('ಅನ್ನದಾತ', 'ಕೃಷಿದರ್ಶನ' ಮುಂತಾದ ಕಾರ್ಯಕ್ರಮಗಳಲ್ಲಿ) ಗ್ರಾಮೀಣ ರೈತರೇ ಮಾತನಾಡುವಾಗ ಎಂಥ ಒಳ್ಳೆಯ ಕನ್ನಡ ಭಾಷೆ ಪ್ರಯೋಗವಾಗುತ್ತದೆ, ನೋಡಿ. ಕನ್ನಡದ ಪ್ರಾದೇಶಿಕ ಸೊಗಡಿನಿಂದ ತುಂಬಿರುವ ಅವರ ಕನ್ನಡ ತುಂಬ ಸ್ವಾರಸ್ಯಕರ. ಅವರ ಮಾತಿನಲ್ಲಿ ಕಾಣುವ ಕನ್ನಡತನವನ್ನು ನಾವು ಮಾದರಿಯಾಗಿ ಉದಾಹರಿಸಬಹುದು.

ಕನ್ನಡವು ಸಾಯುತ್ತದೆ ಎಂಬ ಮಾತನ್ನು ಯಾರೂ ಆಡಬಾರದು. ಭಾಷಾಶಾಸ್ತ್ರಿಗಳು ತಯಾರು ಮಾಡಿರುವ ಅಂಕಿ ಅಂಶಗಳಲ್ಲಿ ಪ್ರಪಂಚದ ಪ್ರಾಚೀನ ಪ್ರಸಿದ್ಧ ಸಮೃದ್ಧ ಭಾಷೆಗಳ ಪಟ್ಟಿಯೊಂದು ಇದೆ. ಅಂಥ ಆರು ಸಾವಿರ ಭಾಷೆಗಳ ಪಟ್ಟಿಯಲ್ಲಿ ಕನ್ನಡವು ಮೊದಲ ಮೂವತ್ತು ಭಾಷೆಗಳಲ್ಲಿ ಒಂದಾಗಿದೆ. ಅದು ಸಾಯುವ ಭಾಷೆಯಲ್ಲ, ಚಂದ್ರ ಸೂರ್ಯರಿರುವ ತನಕ ಬಾಳುವ ಬೆಳೆಯುವ ಭಾಷೆ. ಕಾಲಮಾನದಲ್ಲಿ ಇದೂ ಬದಲಾವಣೆಯನ್ನು ಹೊಂದುತ್ತದೆ. ನಾವು ಈ ಬದಲಾವಣೆಯ ಕಾಲದಲ್ಲಿ ಬಾಳುತ್ತಿದ್ದೇವೆ. ನಮ್ಮ ಹೊಸ ಶಬ್ದಸಂಪತ್ತಿನ ಪ್ರಭಾವದಿಂದ ಈಗಿರುವ ಕನ್ನಡ ಶಬ್ದಸಂಪತ್ತನ್ನು ಕಳೆದುಕೊಳ್ಳಬಾರದು ಎಂಬುದನ್ನು ನಾವು ತಿಳಿದಿರಬೇಕು.

...ಉನ್ನತ ಕೈಗಾರಿಕೆಯ ಉದ್ಯಮಗಳಲ್ಲಿರುವ ಕನ್ನಡಿಗರಿಂದ ಕನ್ನಡಿಗರಲ್ಲದವರಿಗೆ ಕನ್ನಡವನ್ನು ಕಲಿಸುವ ಪ್ರಯತ್ನಗಳಾಗುತ್ತಿವೆ. ಇಂಥ ಪ್ರಯತ್ನಗಳಿಂದ ಆಗುವ ಪ್ರತಿಫಲ ಕಡಿಮೆ. ಇದಕ್ಕಿಂತ ಹೆಚ್ಚು ತೀವ್ರವಾದ ಸಾರ್ವಜನಿಕ ಪ್ರಯತ್ನಗಳಾಗಬೇಕು. ಕರ್ನಾಟಕದಲ್ಲಿರುವ ಐಟಿ, ಬಿಟಿ

## ಖೊಟ್ಟಿ ಪುಟಗಳು

ಖೊಟ್ಟಿ ಪುಟಗಳ
ಹಸಿ ಹಸಿ ಕಟ್ಟುಗಳಿಗೆ
ಬಿಸಿ ಬಿಸಿ ನೋಟುಗಳು
ಬೆನ್ನು ಹತ್ತಿವೆ.
ಸುಳ್ಳು ಸೃಷ್ಟಿಗೆ
ಮಾರುಹೋದ ದೃಷ್ಟಿಗಳು
ಓದಿ ಓದಿ ಕೃತಾರ್ಥತೆಯ
ಕೆಸರು ಮೆತ್ತಿಕೊಂಡಿವೆ.

**ಎಂ. ಡಿ. ಗೋಗೇರಿ**
ಹುಬ್ಬಳ್ಳಿ - ೨೪

ಮೊದಲಾದ ಉದ್ಯಮಗಳು ಸಾವಿರಾರು ಜನರಿಗೆ ಉದ್ಯೋಗಗಳನ್ನು ನೀಡಿವೆ. ಇವರಲ್ಲಿ ಕನ್ನಡದ ಜನ ಕಡಿಮೆ, ಹೊರಗಿನವರು ಅಧಿಕ. ಹೀಗೆ ಹೊರಗಿನಿಂದ ಬಂದು ಕರ್ನಾಟಕದಲ್ಲಿ ನೆಲೆಸಿರುವ ಉದ್ಯೋಗಿಗಳು ಕನ್ನಡವನ್ನು ಉತ್ಸಾಹದಿಂದ ಕಲಿಯುವಂತೆ ಮಾಡುವ ಕಾರ್ಯವನ್ನು ಎಲ್ಲ ಉದ್ಯಮಪತಿಗಳು ಮಾಡಲೇಬೇಕೆಂದು ನಾನು ಒತ್ತಾಯ ಮಾಡುತ್ತೇನೆ. ಹೀಗೆ ಕನ್ನಡ ಕಲಿತರೆ ಅವರು ನಮ್ಮ ಕನ್ನಡಿಗರೇ ಆಗುತ್ತಾರೆ. ಇದರಿಂದ ಸೌಹಾರ್ದ ಉಂಟಾಗುತ್ತದೆ.

...ಎಷ್ಟೋ ಭಾಷೆಗಳ ಜನ ಬೆಂಗಳೂರಿಗೆ ಬಂದು ಸೇರಿದರೂ ಆ ಭಾಷೆಯ ಜನರ ಮಕ್ಕಳಿಗೆ ವಿದ್ಯಾಭ್ಯಾಸ ಬೇಕು ತಾನೆ. ಅವರವರು ಸ್ವಂತ ಭಾಷೆಯ ಶಾಲೆಗಳನ್ನು ಮಾಡಿಕೊಂಡಿದ್ದಾರೆ. ಈ ಎಲ್ಲ ಶಾಲೆಗಳಲ್ಲಿ ಎಲ್ಲ ಮಕ್ಕಳು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕನ್ನಡವನ್ನು ಕಡ್ಡಾಯವಾಗಿ ಪ್ರಥಮ ಭಾಷೆಯಾಗಿ ಕಲಿಯಲೇಬೇಕೆಂಬ ಬಿಗಿಯಾದ ಕಾನೂನನ್ನು ಸರಕಾರ ಕೂಡಲೇ ಜಾರಿಗೆ ತರಬೇಕು. ಇದು ಸಾಧ್ಯವಾದರೆ ಹತ್ತೇ ವರ್ಷಗಳಲ್ಲಿ ಎಲ್ಲ ಪರಕೀಯರ ಮಕ್ಕಳೂ ಕನ್ನಡಿಗರಾಗಿ ಬಿಡುತ್ತಾರೆ. ಇಂಥ ಪದ್ಧತಿಗೆ ಭಾರತದ ಸರ್ವೋಚ್ಚ ನ್ಯಾಯಾಲಯವು ತಮಿಳುನಾಡಿಗೆ ಒಪ್ಪಿಗೆ ನೀಡಿದೆ. ಇಷ್ಟೆಲ್ಲ ಅವಕಾಶವಿದ್ದರೂ ನಾವು ಈ ದಿಕ್ಕಿನಲ್ಲಿ ಪ್ರಯತ್ನವನ್ನು ಮಾಡುತ್ತಿಲ್ಲ. ಬೆಂಗಳೂರಿನಲ್ಲಿ ಕನ್ನಡ ಉಳಿಯಬೇಕಾದರೆ ಮೊದಲು ಮಾಡಬೇಕಾದ ಕಾರ್ಯ ಇದು. ಇದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲ– ಸಾಮಾಜಿಕವಾಗಿ.

ನಮ್ಮ ಸರಕಾರವೇ '**ಅಲ್ಪಸಂಖ್ಯಾತರು**' ಎಂಬ ಹೆಸರಿನ ಅಡಿಯಲ್ಲಿ ಅಂಥ ಅನೇಕ ಶಾಲೆಗಳಿಗೆ ಅವಕಾಶವನ್ನು ಕಲ್ಪಿಸಿದೆ. ಈ ಅವಕಾಶವನ್ನು ಪಡೆದವರು ವೀರಭದ್ರನಂತೆ ವರ್ತಿಸುತ್ತಿದ್ದಾರೆ. ಈ ಎಲ್ಲ ಶಾಲೆಗಳವರೂ ತಮ್ಮ ಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯವಾಗಿ ಕಲಿಸಿ, ಬಹುಸಂಖ್ಯಾತ ಕನ್ನಡಿಗರೊಡನೆ ಹಾಲು ಜೇನಿನಂತೆ ಬೆರೆತು ಬಾಳುವುದನ್ನೂ ಕಲಿಸಬೇಕು. ಅದು ಸಾಧ್ಯವಾಗದೆ ಹೋದರೆ ಸರಕಾರದ ಕಾನೂನಿನ ಅಂಕುಶವನ್ನು ಪ್ರಯೋಗಿಸಬೇಕಾದ ಪರಿಸ್ಥಿತಿ ಬರಲೇಬೇಕಾಗುತ್ತದೆ. ಅದರಿಂದ ಅಲ್ಪಸಂಖ್ಯಾತರಿಗೆ ಪ್ರಯೋಜನವೇ ಹೊರತು ಅಪಕಾರವೇನೂ ಇಲ್ಲ.

...ಕನ್ನಡನಾಡಿನ ಸರಕಾರದ ಶಿಕ್ಷಣ ಇಲಾಖೆಯ ಬಗ್ಗೆ ನನ್ನದು ತೀವ್ರ ಆಕ್ಷೇಪಣೆ ಇದೆ. ಅದರಲ್ಲಿರುವ ಕೆಲವು ಅಧಿಕಾರಿಗಳು ಕನ್ನಡದ ಬಗ್ಗೆ ನಿರ್ಲಕ್ಷ್ಯದಿಂದ ಇದ್ದಾರೆ. ಒಂದೆರಡು ಉದಾಹರಣೆಗಳನ್ನು ನೀಡುತ್ತೇನೆ; ಗಮನಿಸಬೇಕು. ಕಳೆದ ಡಿಸೆಂಬರ್ ೧೮ರಂದು ಕನ್ನಡಪ್ರಭ ಪತ್ರಿಕೆಯಲ್ಲಿ ಒಂದು ಭಾರಿ ವರ್ತಮಾನ ಪ್ರಕಟವಾಗಿತ್ತು. ನಗರದ ಒಂದು ಆಂಗ್ಲ ಮಾಧ್ಯಮದ ಶಾಲೆಯಲ್ಲಿ ಶಿಕ್ಷಣ ಇಲಾಖೆಯ ಮೂಗಿನ ಕೆಳಗೇ ಕನ್ನಡದ ಮಕ್ಕಳಿಗೆ ಆಂಧ್ರದ ಪಠ್ಯಪುಸ್ತಕಗಳನ್ನು ಬೋಧಿಸಲಾಗುತ್ತಿತ್ತು. ನಮ್ಮ ನಾಡು ಯಾವುದು ? ಪ್ರಶ್ನೆ. ಉತ್ತರ : ಆಂಧ್ರಪ್ರದೇಶ. ನಮ್ಮ ರಾಜಧಾನಿ ಯಾವುದು ? ಪ್ರಶ್ನೆ. ಉತ್ತರ : ಹೈದರಾಬಾದ್. ಆ ಮಕ್ಕಳ ಪೋಷಕರು ಮುಖ್ಯಾಧ್ಯಾಪಕರನ್ನು ಕಂಡು ಪ್ರಶ್ನಿಸಿದರೆ ಅವರು 'ನಾವು ಬೋಧಿಸುವುದೇ ಹೀಗೆ. ನಿಮಗೆ ಬೇಡದಿದ್ದರೆ ಮಕ್ಕಳನ್ನು ಬೇರೆ ಶಾಲೆಗೆ ಸೇರಿಸಿ' ಎಂದು ಹೇಳಿ ಗದರಿಸಿದರಂತೆ. ಆಂಧ್ರದ ಪಠ್ಯಗಳನ್ನು ಕೊಳ್ಳಲು ಪ್ರತಿಯೊಬ್ಬ ಮಗುವಿನಿಂದ ೧೮೦೦ ರೂಪಾಯಿಗಳನ್ನು ವಸೂಲಿ ಮಾಡಿದ್ದರಂತೆ. ಅವೆಲ್ಲ ಅಹಮದಾಬಾದಿನಲ್ಲಿ ಪ್ರಕಟಿಸಿದ ಪುಸ್ತಕಗಳು. ಈ ವರ್ತಮಾನ ಬಂದಮೇಲೆ ಶಿಕ್ಷಣ ಇಲಾಖೆ ಏನು ಮಾಡಿತೆಂಬುದರ ಬಗ್ಗೆ ಸಾರ್ವಜನಿಕರಿಗೆ ವಿವರಗಳನ್ನು ಕೂಡಲೇ ತಿಳಿಸಬೇಕು. ಶಿಕ್ಷಣ ಇಲಾಖೆಯಲ್ಲಿ ವಿಷಯ ಪರೀಕ್ಷಕರುಗಳೆಂಬ ಅಧಿಕಾರಿಗಳು ಇರುತ್ತಾರೆ. ಅವರೇನು ಮಾಡಿದರು ? ಇನ್ನು ಎಷ್ಟು ಇಂಥ ಶಾಲೆಗಳಿವೆಯೋ ಬೆಂಗಳೂರು ನಗರದಲ್ಲಿ? ಇದನ್ನು ಔದಾಸೀನ್ಯದಿಂದ ಕಾಣುವ ಇಲಾಖೆಗೆ ನಾಡಿನ ಭಾಷೆಯ ಮೇಲೆ ಪ್ರೀತಿ ಇದೆ ಎನ್ನಬಹುದೆ ? ಅಂಥ ಅಧಿಕಾರಿಗಳ ಮೇಲೆ ಸರಕಾರ ಏಕೆ ಕ್ರಮ ಜರುಗಿಸಿಲ್ಲ? ಆ ಶಾಲೆಯ ಆಡಳಿತ ವರ್ಗ ಇದುವರೆಗೆ ಕನ್ನಡಿಗರ ಕ್ಷಮೆ ಯಾಕೆ ಯಾಚಿಸಿಲ್ಲ?

...ಮತ್ತೊಂದು ಕೆಲಸ ಆಗಬೇಕು. ಕನ್ನಡ ನಾಡಿನ ಸರಕಾರದ ಎಲ್ಲ ಕಚೇರಿಗಳಲ್ಲಿಯೂ ಅಧಿಕಾರಿಗಳಿಗೆ ಬರುವ ಅರ್ಜಿಗಳು **ಯಾವಾಗಲೂ ಕನ್ನಡದಲ್ಲಿಯೇ** ಇರಬೇಕು. ಕನ್ನಡದಲ್ಲಿರದ ಯಾವ ಅರ್ಜಿಯನ್ನೂ ಸ್ವೀಕರಿಸಬಾರದು. ಹಾಗೆ ಸ್ವೀಕರಿಸಿದ ಅರ್ಜಿಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು **ಯಾವಾಗಲೂ ಕನ್ನಡದಲ್ಲಿಯೇ ಇರಬೇಕು.** ಹೀಗೆ ಮಾಡದ ಅಧಿಕಾರಿಗಳಿಗೆ ಶಿಕ್ಷೆಯಾಗಬೇಕು. ಕನ್ನಡದ ಅಭಿವೃದ್ಧಿ ಪ್ರಾಧಿಕಾರವು ಅನೇಕ ಆದೇಶಗಳನ್ನು ಕಳಿಸಿದ್ದರೂ ಅಧಿಕಾರಿಗಳು ಅದನ್ನು ನಿರ್ಲಕ್ಷಿಸಿದ್ದಾರೆ. ಇದಕ್ಕೆ ಶಿಕ್ಷೆ ಇಲ್ಲದಿದ್ದರೆ ಏನು ಪ್ರಯೋಜನ ? ನಮ್ಮ ಸರಕಾರ ಈ ದಿಕ್ಕಿನಲ್ಲಿ ತೀವ್ರ ಎಚ್ಚರಿಕೆಯನ್ನು ವಹಿಸಬೇಕು.

...ಕನ್ನಡದ ನಾಡಗೀತೆಯೆಂದು ಒಂದು ಗೀತೆಯನ್ನು ಆಯ್ಕೆಮಾಡಲಾಗಿದೆ. ಕಾರ್ಯಕ್ರಮಗಳಲ್ಲಿ ಅದನ್ನು ಹಾಡುವಾಗ ಸಭೆಯ ಎಲ್ಲರೂ ನಿಲ್ಲಬೇಕೆಂದು ಸೂಚನೆಯಿದೆ. ಈ ಗೀತೆಯನ್ನು ಹಾಡುವವರು ಸಾಲುಗಳನ್ನು ಎರಡು ಮೂರು ಸಲ ಹಾಡಿ ಹೆಚ್ಚು ಕಾಲವನ್ನು ತೆಗೆದುಕೊಳ್ಳುತ್ತಾರೆ. ನಾಡಗೀತೆ ಯಾವಾಗಲೂ ಸಂಗ್ರಹವಾಗಿ ೩ ನಿಮಿಷಕ್ಕಿಂತ ಹೆಚ್ಚಿಲ್ಲದೆ ಇರಬೇಕು.

...'**ಶಾಸ್ತ್ರೀಯ ಭಾಷೆ**' ಎಂಬ ಅಬದ್ಧವಾದ ಶಬ್ದವು ಸಿಂಹಾಸನದ ಮೇಲೆ ಕುಳಿತುಬಿಟ್ಟಿದೆ. ಅದನ್ನು ಕೆಳಗಿಳಿಸಿ **ಅಭಿಜಾತ ಭಾಷೆ** ಅಥವಾ **ಸಮೃದ್ಧ ಪ್ರಾಚೀನ ಭಾಷೆ** ಎಂಬ ಶಬ್ದವನ್ನು ಉಪಯೋಗಿಸಬೇಕು. ಕೇಂದ್ರ ಸರಕಾರದಿಂದ ಕನ್ನಡಕ್ಕೆ ಅಭಿಜಾತ ಭಾಷೆಯೆಂಬ ಪಟ್ಟ ದಕ್ಕಿದೆ. ಆದರೆ ಯಾವ ಧನವೂ ನಮಗೆ ಬಂದಿಲ್ಲ. ಈ ಹಣದ ಗಳಿಕೆಯಾಗಿ ಆ ಹಣವನ್ನು ಹೇಗೆ ಉಪಯೋಗಿಸಬೇಕೆಂಬ ಒಂದು ಸ್ಪಷ್ಟ ಆಲೋಚನೆಯನ್ನು ಪರಿಷತ್ತು ರಚಿಸಬೇಕು.

...ನಮ್ಮ ರಾಷ್ಟ್ರದ ಪ್ರಸಿದ್ಧ ವೈಜ್ಞಾನಿಕ ಸಂಸ್ಥೆಗಳಲ್ಲಿ ಒಂದಾದ ರಾಷ್ಟ್ರೀಯ ವೈಮಾಂತರಿಕ್ಷ ಪ್ರಯೋಗ ಶಾಲೆಗಳು ಎಂಬ ಹೆಸರಿನ ದೊಡ್ಡ ಸಂಸ್ಥೆಯು ಕನ್ನಡದಲ್ಲಿ ವೈಜ್ಞಾನಿಕ ಲೇಖನಗಳ ಬೆಳವಣಿಗೆಗೆ ಮಾಡಿರುವಷ್ಟು ಸಹಾಯವನ್ನು ಇತರ ಯಾವ ವೈಜ್ಞಾನಿಕ ಸಂಸ್ಥೆಯೂ ಮಾಡಿಲ್ಲ. ಅದು ಕಳೆದ ಮೂವತ್ತೈದು ವರ್ಷಗಳಿಂದ 'ಕಣಾದ' ಎಂಬ ಹೆಸರಿನ ವಾರ್ಷಿಕ ವಿಜ್ಞಾನ ಪತ್ರಿಕೆಯನ್ನು ಪ್ರಕಟಮಾಡುತ್ತ ಇದೆ. 'ಕಣಾದ' ಎಂಬುದು ನಮ್ಮ ದೇಶದ ಒಬ್ಬ ಪ್ರಾಚೀನವಾದ ಮಹರ್ಷಿಯ ಹೆಸರು. ಅವನು ಅಣುವಿಜ್ಞಾನಕ್ಕೆ ಆದ್ಯಪ್ರವರ್ತಕ. ಸುಮಾರು ಎರಡು ಸಾವಿರ ವರ್ಷಗಳಿಗೂ ಹಿಂದೆ ಅಣುತತ್ವವನ್ನು ಪ್ರತಿಪಾದಿಸಿದವನು. ಆತನ ಹೆಸರನ್ನು ಆಶ್ರಯಿಸಿ ಈ ಸಂಸ್ಥೆಯಲ್ಲಿ ನಡೆಯುವ ವಿವಿಧ ಸಂಶೋಧನೆಗಳನ್ನು ಕುರಿತ ಕನ್ನಡ ಭಾಷೆಯ ಲೇಖನಗಳನ್ನು ಈ ಪತ್ರಿಕೆಯಲ್ಲಿ ಪ್ರಕಟಿಸುತ್ತಾ ಬಂದಿದ್ದಾರೆ. ಕರ್ನಾಟಕದ ವಿದ್ಯಾರ್ಥಿಗಳಲ್ಲಿ ಮೂಲವಿಜ್ಞಾನ ಮತ್ತು ವೈಮಾನಿಕ ಕ್ಷೇತ್ರ ವಿಜ್ಞಾನ ಕ್ಷೇತ್ರಗಳಲ್ಲಿ ಸಂಶೋಧನೆಗಳನ್ನು ಕೈಗೊಳ್ಳಲು ಆಸಕ್ತಿಯನ್ನು ಮೂಡಿಸುತ್ತ ಇದೆ. ...ಇದು ಇತರ ವಿಜ್ಞಾನ ಸಂಸ್ಥೆಗಳಿಗೆ ಮಾದರಿಯಾದ ಕಾರ್ಯವಾಗಿದೆ. ಆ ಸಂಸ್ಥೆಗಳು ಕನ್ನಡದ ಪ್ರೇಮವನ್ನು ಹೀಗೆ ವ್ಯಕ್ತಪಡಿಸಬೇಕು.

...ಪತ್ರಿಕಾ ವೃತ್ತಿಯು ಬಹು ಪವಿತ್ರವಾದ ವೃತ್ತಿ. ಕನ್ನಡದ ಪತ್ರಿಕಾಕರ್ತರ ಹಿಂದಿನ ಚರಿತ್ರೆಯನ್ನು ಓದಿದರೆ ಎಂಥ ಶ್ರೀಮಂತ ಮನಸ್ಸಿನ ಮೇಧಾವಿಗಳೂ, ನಿಸ್ವಾರ್ಥ ಪರೋಪಕಾರಿಗಳೂ ವೃತ್ತಿಯಲ್ಲಿ ಪ್ರಾಮಾಣಿಕತೆ, ಧರ್ಮಶ್ರದ್ಧೆ, ಸಾಮಾಜಿಕ ನ್ಯಾಯಪರತೆ ಮತ್ತು ಬಾಳಿನಲ್ಲಿ ಸಂದರ್ಶಕತೆ – ಇವುಗಳನ್ನು ಮೆರೆದಿದ್ದಾರೆ ಎಂಬುದು ಕಣ್ಮುಂದೆ ಕಟ್ಟುತ್ತದೆ. ಆ ಹಿರಿಯರ ಮಾದರಿ ಈಗಲೂ ಅನುಸರಿಸಲು ಅರ್ಹವಾಗಿದೆ. ಜನರ ತಪ್ಪನ್ನು ಜನರಿಗೆ ತಿಳಿಸಿ, ಸರಕಾರದ ತಪ್ಪನ್ನು ಸರಕಾರಕ್ಕೆ ತಿಳಿಸಿ ನವಜೀವನಕ್ಕೆ ಅವರು ಮಾರ್ಗದರ್ಶನ ಮಾಡುತ್ತಿದ್ದರು. ಈಗ ನಮ್ಮ ಪತ್ರಿಕಾಕರ್ತರು ಅದೇ ರೀತಿ ಕನ್ನಡ ಭಾಷೆಯ ಬಗ್ಗೆ ದುಡಿಯಬೇಕಾದ ಕಾಲ ಒದಗಿ ಬಂದಿದೆ.

...ಕನ್ನಡ ಭಾಷೆ ಈಗ ನಿಜವಾಗಿ ಕಷ್ಟಕ್ಕೆ ಸಿಕ್ಕಿದೆ. ಅದರ ಮೇಲೆ ಇಂಗ್ಲಿಷಿನಂಥ ಕೊಲೆಗಡುಕ ಭಾಷೆಯ ಕಣ್ಣು ಬಿದ್ದಿದೆ. ಜಾಗತೀಕರಣದ ಪರಿಣಾಮವಾಗಿ ಕನ್ನಡವನ್ನು ಮಾತನಾಡುವ ಎಲ್ಲ ಪ್ರದೇಶಗಳಲ್ಲಿಯೂ ಇಂಗ್ಲಿಷ್ ನುಗ್ಗುತ್ತ ಇದೆ. ನಮ್ಮ ಶಿಕ್ಷಣ ಇಲಾಖೆ ಕಣ್ಣುಮುಚ್ಚಿ ಕುಳಿತಿದೆ. ಪರದೇಶಗಳ ಬೋಧನ ಪದ್ಧತಿಗಳನ್ನು ಆಮದು ಮಾಡುತ್ತಾ ಸ್ವಂತಿಕೆಯನ್ನು ಶಿಕ್ಷಕರು ಕಳೆದುಕೊಳ್ಳುತ್ತಿದ್ದಾರೆ. ಶಿಕ್ಷಣದಲ್ಲಿ ಕನ್ನಡವನ್ನು ಉಳಿಸಿಕೊಳ್ಳಲಾರದೆ ಹೋದರೆ ಅಪಾಯ ತಪ್ಪಿದ್ದಲ್ಲ. ಇದನ್ನು ಎಷ್ಟು ಒತ್ತಿ ಹೇಳಿದರೂ ಸಾಲದಾಗಿದೆ. ಈ ಆಕ್ರಮಣಶೀಲತೆಯಿಂದ ನಗರಪ್ರದೇಶಗಳಲ್ಲಿ ಕನ್ನಡದ ಪ್ರಯೋಗ ಕಡಿಮೆಯಾಗುತ್ತಾ ಇದೆ. ಈ ಸ್ಥಿತಿಯನ್ನು ಒಂದು ಜನಾಂದೋಳನದ ಮೂಲಕ ಬದಲಾವಣೆ ಮಾಡಬೇಕು. ...ಕನ್ನಡ ಸಾಯುವುದಿಲ್ಲ ಎಂಬುದು ನಿಜ. ಆದರೆ ಕರ್ನಾಟಕದಲ್ಲಿ ಅದು ತನ್ನ ಪ್ರಥಮ ಸ್ಥಾನವನ್ನು ಎಂದೂ ಕಳೆದುಕೊಳ್ಳಬಾರದು. ಕರ್ನಾಟಕದಲ್ಲಿ ಕನ್ನಡವೇ ಸಾರ್ವಭೌಮ ಭಾಷೆ. ಅದನ್ನು ಸ್ಥಿರವಾಗಿ ಉಳಿಸಬೇಕು. ಕನ್ನಡ ನಾಡಿನ ಎಲ್ಲರೂ ಈ ಸ್ಥಿತಿಯನ್ನು ತೀವ್ರವಾಗಿ ಗಮನಿಸಬೇಕು. ಪತ್ರಿಕಾಕರ್ತರು, ಸಮೂಹಮಾಧ್ಯಮಗಳು, ಮುಖ್ಯವಾಗಿ ಸಿನಿಮಾಲೋಕ, ಇದನ್ನು ತಮ್ಮ ಕರ್ತವ್ಯಗಳಲ್ಲಿ ಒಂದಾಗಿ ಪರಿಗಣಿಸಬೇಕು. ಕನ್ನಡದ ಎಲ್ಲ ಸಂಘ ಸಂಸ್ಥೆಗಳೂ ಒಟ್ಟಾಗಿ ಕಾರ್ಯವನ್ನು ನಿರ್ವಹಿಸಬೇಕು. ನನ್ನ ಮಾತನ್ನು ಎಚ್ಚರಿಕೆಯ ಗಂಟೆ ಎಂದು ಭಾವಿಸಬೇಕಾಗಿ ವಿನಂತಿ.



ಈ ಸಾಲಿನ

**ಪದ್ಮಭೂಷಣ**

ಬಿರುದು

ಪಡೆದಿರುವ

**ವಿದ್ವಾನ್ ಆರ್. ಕೆ. ಶ್ರೀಕಂಠನ್**

ಅವರಿಗೆ

**ಅಭಿನಂದನೆಗಳು**

...ನಮ್ಮ ಸಮಾಜದಲ್ಲಿರುವ ಶೋಷಿತರ ಬಗ್ಗೆ ಒಂದು ಸಂಗತಿಯನ್ನು ಎಲ್ಲರ ಗಮನಕ್ಕೆ ತರಲು ಉದಾಹರಣೆಯನ್ನು ನೀಡುತ್ತೇನೆ. ೧೯೭೨ರಲ್ಲಿ ನಮ್ಮ ರಾಜ್ಯದ ಮಂತ್ರಿ ಮಂಡಲದಲ್ಲಿ ಜನಪ್ರಿಯ ಮಂತ್ರಿಯಾಗಿದ್ದ ಬಸವಲಿಂಗಪ್ಪನವರು ಕೈಗೊಂಡ ಒಂದು ತೀರ್ಮಾನ ಎಲ್ಲ ಪ್ರಜೆಗಳ ಮನಸ್ಸಿಗೆ ಸಂತೋಷವನ್ನು ಉಂಟುಮಾಡಿತು. ಶೋಷಿತ ವರ್ಗದ ಒಂದು ಪಂಗಡದವರು ಮಾನವ ಮಲವನ್ನು ತಲೆಯ ಮೇಲೆ ಹೊತ್ತು ಸಾಗಿಸುತ್ತಿದ್ದರು. ಈ ಅಭ್ಯಾಸವು ಕೂಡಲೆ ನಿಲ್ಲಬೇಕೆಂದು ಆದೇಶ ಜಾರಿಗೆ ಬಂತು. ಮಾನವ ಹಕ್ಕುಗಳನ್ನು ಚಾಲ್ತಿಗೆ ತಂದ ತೀರ್ಮಾನವಾಗಿತ್ತು ಅದು. **ಈ ಆದೇಶವು ಬಂದು ಸುಮಾರು ನಲವತ್ತು ವರ್ಷಗಳಾಗಿವೆ.**

ಈಚೆಗೆ ಕರ್ನಾಟಕ ಪ್ರದೇಶದ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಾದ ಶ್ರೀ ಎಸ್. ಆರ್. ನಾಯಕ್ ಅವರು, ೨೦೧೦ರ ಜುಲೈ ತಿಂಗಳಲ್ಲಿ ಬರೆದ ಲೇಖನದಲ್ಲಿ, ಸವಣೂರಿನಲ್ಲಿ ಅತಿ ಶೋಷಿತವರ್ಗದವರು ತಮ್ಮ ತಲೆಯ ಮೇಲೆ ಮಾನವ ಮಲವನ್ನು ಕದಡಿದ ನೀರಿನಿಂದ ಅಭಿಷೇಕ ಮಾಡಿಕೊಂಡು ಬಂಡಾಯವನ್ನು ನಡೆಸಿದ ಬಗ್ಗೆ ಬರೆದಿದ್ದರು. ಈ ವಿಚಾರದ ಬಗ್ಗೆ ೨೦೦೮ರಲ್ಲಿಯೇ ಸರಕಾರಕ್ಕೆ ಈ ಭಂಗಿ ಪದ್ಧತಿಯನ್ನು ನಿಲ್ಲಿಸಲು ಏರ್ಪಾಡು ಮಾಡಬೇಕೆಂದು ತಿಳಿಸಿ ಪತ್ರವನ್ನು ಬರೆದಿದ್ದನ್ನು ಉಲ್ಲೇಖಿಸಿದ್ದಾರೆ. ಆದರೆ ಏನೂ ಆಗಲಿಲ್ಲವೆಂದು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ಹೀಗಿದ್ದೂ ಇಂಥ ಅತಿ ಅಮಾನವೀಯವಾದ ಈ ಪದ್ಧತಿಯನ್ನು ನಿಲ್ಲಿಸುವ ಒಂದು ಕಾರ್ಯವನ್ನು ಯಾವ ಪಕ್ಷ ಮಾಡಿದ್ದರೂ ಅದರ ಕೀರ್ತಿ ಆಕಾಶಕ್ಕೇರುತ್ತಿತ್ತು. ಎಂಥ ಅವಕಾಶವನ್ನು ನಮ್ಮ ಶಾಸಕರು ಕಳೆದುಕೊಂಡರಲ್ಲ ಎಂದು ವ್ಯಥೆಯಾಗುತ್ತದೆ. ನಮ್ಮ ಕೇಂದ್ರ ಸರಕಾರವು ವಿಶ್ವಸಂಸ್ಥೆಯ ಸಾರ್ವಜನಿಕ ಸಭೆಗೆ ವರದಿಯನ್ನು ಕಳಿಸುವಾಗ ನಮ್ಮ ದೇಶದಲ್ಲಿ ಮಾನವ ಹಕ್ಕುಗಳನ್ನು ಸಂಪೂರ್ಣವಾಗಿ ಗೌರವಿಸಲಾಗಿದೆ ಎಂದೇ ಕಳಿಸುತ್ತದೆ. ಎಂಥ ವಿಪರ್ಯಾಸ. ನಾವೆಲ್ಲ ಸಾಮಾನ್ಯರಲ್ಲಿ ಸಾಮಾನ್ಯರಾದ ಜನತೆ. ಶಾಸಕರಿಗೆ ಏನು ಹೇಳಬಹುದು ?

ಈಗ ಕರ್ನಾಟಕವು ಭಾರತದಲ್ಲಿಯೇ ಅತ್ಯಂತ ಭ್ರಷ್ಟವಾದ ರಾಜ್ಯ ಎಂಬ ಹೆಸರನ್ನು ಸಂಪಾದಿಸಿಬಿಟ್ಟಿದೆ. ಭಾರತದ ಸಂವಿಧಾನವು ಒಂದು ಉತ್ಕೃಷ್ಟ ರಾಜ್ಯಧರ್ಮ ಶಾಸ್ತ್ರದಂತೆ ಇದೆ ಎಂದು ಹೆಸರು ಪಡೆದಿದೆ. ಹೀಗಿದ್ದೂ ಅದನ್ನು ತಿರಸ್ಕರಿಸಿ ರಾಜಕೀಯ ಪಕ್ಷಗಳು ಅಧಿಕಾರ ದಾಹದಿಂದ ಕಚ್ಚಾಡುತ್ತಿವೆ. ಬಯ್ಗಳು ಅಸಮರ್ಥರ ಆಯುಧ. ಅದು ದುರ್ಬಲರು ಉಪಯೋಗಿಸುವ ಚುಚ್ಚು ಗತ್ತಿ. ಅದನ್ನು ಉಪಯೋಗಿಸಬಾರದು. ಹಲವು ಶಾಸಕರ ಮಾತಿನಲ್ಲಿ, ನಡೆಯಲ್ಲಿ, ವ್ಯವಹಾರದಲ್ಲಿ, ಯಾವುದರಲ್ಲಿಯೂ ಗಾಂಭೀರ್ಯವಾಗಲಿ, ಸುಸಂಸ್ಕೃತಿಯಾಗಲಿ ಕಾಣ ಬರುತ್ತಿಲ್ಲ. ಪ್ರಜಾವರ್ಗದ ನೆಮ್ಮದಿ ಕೆಟ್ಟಿದೆ. ಗೊಂದಲದಿಂದ ಸಮಾಧಾನ ನಾಶವಾಗಿದೆ. ಪ್ರಜೆಗಳಲ್ಲಿ ಹಲವರು ನಾವೇಕೆ ಇಂಥ ಅಸಮರ್ಥರನ್ನು ಶಾಸಕರನ್ನಾಗಿ ಮಾಡಿದೆವು ಎಂದು ತಮ್ಮನ್ನೂ ಎಲ್ಲ ಪಕ್ಷಗಳನ್ನೂ ನಿಂದಿಸುತ್ತಾ ಇದ್ದಾರೆ. ಪ್ರಜೆಗಳನ್ನು ಕಾಪಾಡುವವರೇ ಕಾದಾಡಿದರೆ ಎಂಥ ವಿಪರ್ಯಾಸ.

ಈ ಕಾದಾಟ **ಪಕ್ಷದ್ವೇಷ ಅಥವಾ ಅಧಿಕಾರ ದಾಹ** ಎಂಬ ಒಂದು ದುರಂತ ನಾಟಕವಾಗಿಬಿಟ್ಟಿದೆ. ದಿನಕ್ಕೊಂದು ದೃಶ್ಯ, ವಾರಕ್ಕೊಂದು ಅಂಕ ಎಂಬಂತೆ ಇದು ಮುಂದುವರಿದಿದೆ. ನಮಗೆ ಇದು ದುರಂತ. ಇತರ ಪ್ರಾಂತಗಳವರಿಗೆ ಪ್ರಹಸನ. ಹೀಗೆ ಇಮ್ಮುಖವಾದ ಈ ನಾಟಕವು ಇನ್ನೂ ಕ್ಲೈಮಾಕ್ಸ್ ಎಂಬ ಶಿಖರ ತಲುಪಿಲ್ಲ. ಇಷ್ಟರಲ್ಲೇ ತಲುಪಬಹುದು. ಇನ್ನು ಡಿನೂಮಾ ಎಂಬ ಪರಿಣಾಮ ಏನಾಗುತ್ತದೋ ಯಾರು ಬಲ್ಲರು. ಕಾದು ನೋಡೋಣ. ನಾವೇನು ತಾನೆ ಮಾಡಬಹುದು ?

ಕನ್ನಡ ತಾಯಿ ಭುವನೇಶ್ವರಿ ನಮ್ಮ ನಾಯಕಮಣಿಗಳಾದ ಈ ರಾಜಕೀಯ ವ್ಯಕ್ತಿಗಳಿಗೆ ಸನ್ಮತಿಯನ್ನು ನೀಡಲಿ ಎಂದು ಪ್ರಾರ್ಥಿಸಬೇಕಾಗಿದೆ. ರಾಜಕೀಯ ಪಕ್ಷಗಳಿಗೆ ಅಧಿಕಾರದ ಹುಚ್ಚು ದಾಹವನ್ನು ಬಿಟ್ಟು ನಾಡಿನ ಸೌಖ್ಯಕ್ಕೆ ದುಡಿಯುವ ಬುದ್ಧಿಯು ಬರಲಿ ಎಂದು ಹಾರೈಸೋಣ.

ಪ್ರಜೆಗಳಾದ ನಾವು ಇಂಥ ವರ್ಗದಿಂದ ಬೇರೆಯಾಗಿ

***ತಲೆತುಂಬ ಕಲಿಯೋಣ***

***ತಲೆ ಎತ್ತಿ ನುಡಿಯೋಣ***

***ತಲೆಬಾಗಿ ಬಾಳೋಣ***

***ಸಿರಿಗನ್ನಡಂ ಗೆಲ್ಗೆ***

**ಪ್ರೊ|| ಜಿ. ವೆಂಕಟಸುಬ್ಬಯ್ಯ**
ನಂ. ೫೮, ೩೧ನೇ ಅಡ್ಡರಸ್ತೆ, ೭ನೇ ಬ್ಲಾಕ್, ಜಯನಗರ,
ಬೆಂಗಳೂರು - ೫೬೦ ೦೮೨

# ನಮ್ಮ 22ನೇ ಸಾಹಿತ್ಯ ಸಮ್ಮೇಳನ



22ನೇ ಕನ್ನಡ ಸಾಹಿತ್ಯ ಸಮ್ಮೇಳನ ಅದ್ದೂರಿಯಾಗಿ ನಡೆಯಿತು. ಮುಂಚೆಗಿಂತ ಈ ಸಾರಿ ಹಲವಾರು ಬದಲಾವಣೆಗಳನ್ನು ಮಾಡಲಾಗಿತ್ತು. ಮುಖ್ಯ ವೇದಿಕೆಯಲ್ಲಿ ಎಲ್.ಇ.ಡಿ. ಪರದೆ ಅಳವಡಿಸಿದ್ದು, ನೆಲದಲ್ಲಿ ಧೂಳು ಏಳದಿರಲೆಂದು ಪುಸ್ತಕದ ಅಂಗಡಿಗಳಿಗೆ ನೆಲಹಾಸು ಹಾಸಿದ್ದು, ವಿಚಾರಗೋಷ್ಠಿಗಳಲ್ಲಿ ಸಾಕಷ್ಟು ಯುವಜನರನ್ನು ಒಳಗೊಂಡಿದ್ದು ಇತ್ಯಾದಿ... ಈ ಸಾರಿ ಚರ್ಚೆಗಳೂ ಕೂಡ ಗಂಭೀರವಾಗಿ ನಡೆದವು ಮತ್ತು ಪತ್ರಿಕಾ ಮಾಧ್ಯಮಗಳೂ ಕೂಡ ಅವನ್ನು ಅಷ್ಟೇ ಮುತುವರ್ಜಿಯಿಂದ ವರದಿ ಮಾಡಿದವು. ಹತ್ತಾರು ಕಂಪ್ಯೂಟರುಗಳಿದ್ದ ಮಾಧ್ಯಮ ಕೇಂದ್ರವನ್ನೂ ಕೂಡ ಈ ಸಾರಿ ಸಮ್ಮೇಳನದಲ್ಲಿ ತೆರೆಯಲಾಗಿತ್ತು. ಹಾಗಾಗಿ ಸುದ್ದಿಗಳನ್ನು ನಿಖರವಾಗಿ ಕಳಿಸಲು ಮತ್ತು ಪಡೆಯಲು ಅನುಕೂಲವಾಯಿತು. ಎಂದಿನಂತೆ ಈ ಸಾರಿಯೂ ಊಟದ ವ್ಯವಸ್ಥೆಯಲ್ಲಿ, ವಸತಿ ವ್ಯವಸ್ಥೆಯಲ್ಲಿ ತೊಂದರೆಗಳಾದವು. ಮೊದಲ ದಿನ ನೋಂದಣಿ ಕಾರ್ಯವೇ ಸರಿಯಾಗಿ ನಡೆಯಲಿಲ್ಲ. ಇದರಿಂದ ಸಾಕಷ್ಟು ಜನ ಪ್ರತಿಭಟನೆ ಕೂಡ ನಡೆಸಿದರು. ಒಂದೆರಡು ಸಣ್ಣ ಪುಟ್ಟ ಲೋಪಗಳಿದ್ದರೂ ಸಮ್ಮೇಳನ ಈ ಸಾರಿ ಭಾರಿ ಯಶಸ್ವಿಯಾಯಿತು.

ಮೆರವಣಿಗೆ ಕೂಡ ಈ ಸಾರಿ ಅದ್ದೂರಿಯಾಗಿ ಇತ್ತು. ಮುವ್ವತ್ತಕ್ಕೂ ಹೆಚ್ಚು ಕಲಾತಂಡಗಳು ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದವು. ಇನ್ನು ಮುಂದೆ ಮೆರವಣಿಗೆಯನ್ನೂ ಒಳಗೊಂಡಂತೆ ಗೋಷ್ಠಿಗಳ ಆಯ್ದ ಭಾಗಗಳನ್ನು ಚಿತ್ರೀಕರಿಸಿ ಧ್ವನಿಸಮೇತ ಡಿ.ವಿ.ಡಿ.ಗಳನ್ನು ತಯಾರಿಸಿ ಅವನ್ನು ಪರಿಷತ್ತಿನ ಲೈಬ್ರರಿಯಲ್ಲಿ ಇಡುವಂತೆ ವ್ಯವಸ್ಥೆ ಆದರೆ ಒಳಿತು. ಇದು ನೂರು ಕಾಲಕ್ಕೂ ಉಳಿದು ಮುಂದಿನ ಜನಕ್ಕೂ ದಾಖಲೆಯಾಗಿ ಒದಗುತ್ತದೆ. ಅಷ್ಟೆ ಅಲ್ಲ, ನೆನಪಿನ ಸಂಚಿಕೆ ಮಾಡುವ ಜೊತೆಗೆ ಎಲ್ಲ ವಿಚಾರ ಗೋಷ್ಠಿಗಳ ವಿಚಾರಗಳನ್ನು ಧ್ವನಿಮುದ್ರಿಸಿ ಇಡುವ ವ್ಯವಸ್ಥೆ ಆದರೆ ಒಳಿತು. ಜೊತೆಗೆ ವಿಚಾರಗಳನ್ನು ಪುಸ್ತಕಗಳಾಗಿ ಮುದ್ರಿಸಿ ಇಟ್ಟರೆ ಅವೂ ನಾಳಿನ ಜನತೆಗೆ ದಾಖಲೆಯಾಗಿ ಒದಗುತ್ತವೆ. ಮಂಡಿತವಾದ ವಿಚಾರಗಳು ಸುಮ್ಮನೆ ಗಾಳಿಯಲ್ಲಿ ಹೋಗಬಾರದಲ್ಲ. ಇದಕ್ಕಾಗಿ ಒಂದು ಸಮಿತಿ ಮಾಡಿ ಪ್ರತ್ಯೇಕ ಬಜೆಟ್ ತಯಾರಿಸಿ ಸರ್ಕಾರದಿಂದ ಅನುದಾನ ಪಡೆದು ಕೆಲಸ ಮಾಡಬಹುದು. ಸಮ್ಮೇಳನದ ಒಟ್ಟು ಖರ್ಚಿಗೆ ಹೋಲಿಸಿದರೆ ಇದಕ್ಕೆ ಅಂತಹ ಮಹಾ ಏನೂ ಖರ್ಚಾಗುವುದಿಲ್ಲ.

ಸಮ್ಮೇಳನಕ್ಕೆ ಮೊದಲೆ ಪುಸ್ತಕದ ಅಂಗಡಿಗಳಿಗೆ ನಿಗದಿಗೊಳಿಸಿದ ೨೦೦೦ ರೂಪಾಯಿ ಜಾಸ್ತಿಯಾಯಿತು ಮತ್ತು ನಗರದ ಎಲ್ಲೆಲ್ಲೂ ಬರಿ ರಾಜಕಾರಣಿಗಳ ಫ್ಲೆಕ್ಸು ಮತ್ತು ಬ್ಯಾನರ್ರುಗಳೇ ರಾರಾಜಿಸುತ್ತಿವೆ ಎಂಬ ಕಾರಣಕ್ಕೆ ಪ್ರತಿಭಟನೆ ನಡೆಯಿತು. ಅಲ್ಲದೆ ಸಮ್ಮೇಳನಕ್ಕೆ ಮೊದಲೆ ಹಿಂದಿನ ದಿನ ಬ್ಯಾಡ್ಜ್ ಕೇಳಿ ಇಲ್ಲ ಎನ್ನಿಸಿಕೊಂಡ ಗೋಷ್ಠಿಯೊಂದರ ಅಧ್ಯಕ್ಷರೊಬ್ಬರು ಆ ಕಾರಣಕ್ಕಾಗಿ ಪ್ರತಿಭಟಿಸಿ ತಾನು ಅಧ್ಯಕ್ಷತೆ ವಹಿಸಲು ನಿರಾಕರಿಸುತ್ತೇನೆ ಎಂದು ಹೇಳಿಕೆ ಕೊಟ್ಟರು. ಆಮೇಲೆ ಯಾರೂ ಅವರನ್ನು ಕ್ಯಾರೇ ದಾಸಯ್ಯ ಎನ್ನಲಿಲ್ಲ! ಬಹು ವಿಶೇಷ ಎಂದರೆ ಚಿದಾನಂದ ಮೂರ್ತಿ ಅವರಿಗೆ ಡಾಕ್ಟರೇಟ್ ನಿರಾಕರಿಸಲಾಗಿದೆ ಎಂಬ ಕಾರಣಕ್ಕೆ ಸಮ್ಮೇಳನವು ರಾಜ್ಯಪಾಲರ ವಿರುದ್ಧದ ಪ್ರತಿಭಟನೆಯ ವೇದಿಕೆಯೂ ಆದದ್ದು. ಅದನ್ನು ರಾಜಕಾರಣಿಗಳು ತಮ್ಮ ಪಕ್ಷರಾಜಕಾರಣಕ್ಕೂ ಬಳಸಿಕೊಂಡರು. ಸಮ್ಮೇಳನದಲ್ಲಿ ಆ ಬಗ್ಗೆ ಖಂಡನಾ ನಿರ್ಣಯ ಕೂಡ ತೆಗೆದುಕೊಳ್ಳಲಾಯಿತು. ಚಿದಾನಂದಮೂರ್ತಿಗಳೇ

ಕಾರ್ಯಕ್ರಮ ಸಂಘಟಿಸುವುದು ಮತ್ತು ಭಾಷಣ ಮಾಡುವುದು ಆ ಮೂಲಕ ಕನ್ನಡದ ಜಾತ್ರೆ ಮಾಡುವುದು ನಿಜಕ್ಕೂ ಒಳ್ಳೆಯದೆ. ಇದು ಆಗಬೇಕು. ಪ್ರತಿ ವರ್ಷವೂ ಆಗುತ್ತಿರಬೇಕು. ಸರ್ಕಾರ ಬೇಕುಬೇಕಾದ ಮಠಗಳಿಗೆಲ್ಲ ಕೋಟಿ ಕೋಟಿ ಕೊಡುವಾಗ ಕನ್ನಡ ಮಠಕ್ಕೆ ಯಾಕೆ ಕೆಲವು ಕೋಟಿಗಳನ್ನು ಕೊಡಬಾರದು ? ಆದರೆ ಈ ಕನ್ನಡ ಸಾಹಿತ್ಯ ಮಠ ಅದನ್ನು ಕನ್ನಡ ಜಾತ್ರೆಗೆ ಖರ್ಚು ಮಾಡುವುದರ ಜೊತೆಗೆ ಕನ್ನಡಪರ ನಿರ್ಣಯಗಳ ಜಾರಿಗಾಗಿ ಕೂಡ ಕಾರ್ಯಯೋಜನೆ ತಯಾರಿಸಿ ಖರ್ಚು ಮಾಡುವುದು ಒಳಿತು. ಸರ್ಕಾರ ಅದಕ್ಕೂ ಖರ್ಚು ಮಾಡಬೇಕು. ಹಣ ಕೊಡಬೇಕು. ಇನ್ನಾವುದಕ್ಕೆ ನಮ್ಮ ಸಂಸ್ಕೃತಿ ಇಲಾಖೆ ಇರುವುದು ? ಈ ಕಾರ್ಯಕ್ಕೆ ಪ್ರಾಧಿಕಾರದ ಜೊತೆಗೆ ಎಲ್ಲ ಅಕಾಡೆಮಿಗಳನ್ನೂ ಒಳಗೊಳ್ಳುವುದು ಒಳಿತು. ಆಗ ಮಾತ್ರ ಸಾಹಿತ್ಯ ಸಮ್ಮೇಳನಗಳು ಯಶಸ್ವಿ ಎಂದು ಹೇಳಬಹುದು.

ಡಾ|| ರಾಮಲಿಂಗಪ್ಪ ಟಿ. ಬೇಗೂರು

ನಿಜಕ್ಕೂ ಗೌರವಯುತವಾಗಿ ವಿವಾದದ ನಂತರ ಆ ಅಗೌರವ ಡಾಕ್ಟರೇಟನ್ನು ನಿರಾಕರಿಸಿದ್ದರೆ ಅವರ ಗೌರವ ಇನ್ನಷ್ಟು ಹೆಚ್ಚುತ್ತಿತ್ತು. ಕನ್ನಡ ನಾಡು ನುಡಿ ಬಗೆಗಿನ ನಿರ್ಣಯಗಳಷ್ಟೆ ಚಿದಾನಂದಮೂರ್ತಿಗಳ ಗೌರವ ಡಾಕ್ಟರೇಟ್ ವಿಚಾರವೂ ಸಮ್ಮೇಳನದಲ್ಲಿ ಪ್ರಾಧಾನ್ಯತೆ ಪಡೆದದ್ದು ವಿಷಾದನೀಯ.

ರಾಜಕಾರಣಿಗಳು, ಮಠಾಧೀಶರು ಸಾಹಿತ್ಯ ಸಮ್ಮೇಳನಕ್ಕೆ ಬರಬೇಕೇ ಬೇಡವೇ ಎಂಬ ಬಗ್ಗೆ ಈ ಸಾರಿಯೂ ಸಾಕಷ್ಟು ವಾಗ್ಯುದ್ಧ ನಡೆಯಿತು. ಸಿನಿಮಾದವರು, ಮಾಧ್ಯಮದವರು ಬರಬಹುದಾದರೆ ರಾಜಕಾರಣಿಗಳು, ಮಠಾಧೀಶರು ಯಾಕೆ ಸಮ್ಮೇಳನಕ್ಕೆ ಬರಬಾರದು? ಅವರೇನು ನಮ್ಮ ಸಾಹಿತ್ಯದಿಂದ ಬಹಿಷ್ಕೃತರೇ? ಅಥವಾ ಅವರೆಲ್ಲ ಸಮಾಜಘಾತುಕರೋ? ಅದು ಹೌದು ಎನ್ನುವುದಾದರೆ ಸಮ್ಮೇಳನದಲ್ಲಿ ಆ ಬಗೆಗೂ ಚರ್ಚೆ ನಡೆಯಲಿ ಬಿಡಿ. ಸಮಾಜಸೇವೆ ಮತ್ತು ಮಠಾಧೀಶರು, ಮೌಲ್ಯಾಧಾರಿತ ರಾಜಕಾರಣ ಹೀಗೆ ಕೂಡ ಗೋಷ್ಠಿಗಳು ಇರಲಿ, ಯಾರು ಬೇಡ ಎನ್ನುತ್ತಾರೆ? ಹಾಗೆ ಯಾವುದೇ ಒಂದು ವರ್ಗವನ್ನು ಸಾಹಿತ್ಯ ಸಮ್ಮೇಳನದಿಂದ ಹೊರಗೆ ಇಡುವ ಅಗತ್ಯವಿಲ್ಲ. ಪ್ರತಿಯೊಂದು ವರ್ಗವೂ ಜೊತೆಗೂಡಿ ಶ್ರಮಿಸಿದರೆ ಮಾತ್ರ ನಮ್ಮ ಸಮಾಜದ ಸರ್ವಾಂಗೀಣ ಅಭಿವೃದ್ಧಿ ಸಾಧ್ಯ. ಸಾಹಿತ್ಯ ಪರಿಷತ್ತು ಕೇವಲ ಕನ್ನಡ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ಸಮಾಜ ಸೇವೆ, ರಾಜಕಾರಣಗಳನ್ನೂ ಒಳಗೊಂಡಂತೆ ಕನ್ನಡ ನಾಡು ಮತ್ತು ನುಡಿಗೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿ ಕೊಂಡಿದೆ. ಅಲ್ಲದೆ ಸಾಹಿತ್ಯ ಸಮ್ಮೇಳನ ಕೇವಲ ಸಾಹಿತ್ಯಕ್ಕೆ ಮಾತ್ರ ಇಂದು ಸೀಮಿತವಾಗಿಲ್ಲ. ಅದು ಸಮಾಜದ ಎಲ್ಲ ವಲಯಗಳನ್ನೂ ಒಳಗೊಳ್ಳುತ್ತಿದೆ. ಅಷ್ಟೇ ಅಲ್ಲ ಚಿತ್ರಕಲೆ, ಸಂಗೀತ, ಸಿನೆಮಾ, ಅಂತರ್ಜಾಲ ಲೋಕ, ಮಾಹಿತಿ ತಂತ್ರಜ್ಞಾನ, ಮಹಿಳಾ ಲೋಕಗಳೆಲ್ಲ ತಮಗೆ ಸರಿಯಾದ ಪ್ರಾಶಸ್ತ್ಯ ಸಮ್ಮೇಳನದಲ್ಲಿ ಸಿಗಲಿಲ್ಲ ಎಂದು ಕೂಗೆತ್ತಿವೆ. ಇವೆಲ್ಲವನ್ನೂ ಒಳಗೊಳ್ಳುವುದು ಸಾಹಿತ್ಯ ಪರಿಷತ್ತಿನ ಧರ್ಮ ಆಗಬೇಕು. ಹೀಗಿರುವಾಗ ರಾಜಕಾರಣಿಗಳನ್ನು ಅಥವಾ ಮಠಾಧೀಶರನ್ನು ಯಾಕೆ ಹೊರಗಿಡಬೇಕು? ಕನ್ನಡದ ವಿಚಾರದಲ್ಲಿ ಯಾರ ಯಜಮಾನಿಕೆಯೂ ಸಲ್ಲ. ಹಾಗಾಗಿ ಅವರ ಯಜಮಾನಿಕೆಯನ್ನೂ ನಾವು ಹೇರಿಕೊಳ್ಳುವುದು ಬೇಡ ಅಷ್ಟೆ.

ಮಹಿಳಾ ಗೋಷ್ಠಿಗಳಲ್ಲಿ ಪುರುಷರು ಇರಬಾರದೆಂಬಂತೆ ಈ ಸಾರಿ ಪರಿಷತ್ತು ನಡೆದುಕೊಂಡಿದೆ! ಆಶ್ಚರ್ಯ! ನಿಕಟಪೂರ್ವ ಸಮ್ಮೇಳನದ ಅಧ್ಯಕ್ಷರಾದ ಗೀತಕ್ಕನವರು ಮತ್ತು ಈ ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಮಾತನಾಡಿದ ಲಲಿತಾ ನಾಯಕ್ ಅವರು ಮಹಿಳೆಯರಿಗೆ ಸರಿಯಾದ ಪ್ರಾತಿನಿಧ್ಯ ಸಿಕ್ಕಿಲ್ಲ ಎಂದು ಆಕ್ಷೇಪ ಎತ್ತಿದ್ದಾರೆ. ಅಲ್ಲದೆ ಮಹಿಳೆಯನ್ನು ಯಾಕೆ ಪರಿಷತ್ತಿನ ಅಧ್ಯಕ್ಷರನ್ನಾಗಿ ಮಾಡಿಲ್ಲ ಎಂದೂ ಪ್ರಶ್ನಿಸಿದ್ದಾರೆ. ಯಾಕಾಗಬಾರದು ? ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನಕ್ಕೆ ಈವರೆಗೆ ಯಾಕೆ ಮಹಿಳೆಯರು ಚುನಾವಣೆಗೆ ನಿಂತೇ ಇಲ್ಲವಲ್ಲ? ಮಹಿಳೆಯರೇ ಪರಿಷತ್ತಿನ ಅಧ್ಯಕ್ಷರಾದರೆ ಇನ್ನೊಬ್ಬರನ್ನು ಕೇಳುವ ಪ್ರಶ್ನೆಯೇ ಇರುವುದಿಲ್ಲವಲ್ಲ? ಇನ್ನಾದರೂ ಮಹಿಳೆಯರು ಚುನಾವಣೆಗೆ ನಿಲ್ಲಲಿ. ಜನ ಖಂಡಿತ ಗೆಲ್ಲಿಸುತ್ತಾರೆ. ಚುನಾವಣೆಯ ಸೋಲಿಗೆ ಯಾಕೆ ಹೆದರಬೇಕು ? ಒಮ್ಮೆ ಸೋತರೆ ಇನ್ನೊಮ್ಮೆ ದುಡಿದು ಗೆಲ್ಲಬಹುದಲ್ಲ.

ಈ ಸಾರಿ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ಸಮ್ಮೇಳನವನ್ನು ನಡೆಸಲು ನಿರ್ಣಯ ತೆಗೆದುಕೊಂಡದ್ದೇ ಸರಿಯಲ್ಲ. ಆ ಪಾಟಿ ಜನರಿಗೆ ಅಲ್ಲಿ ಜಾಗ ಸಾಲಲಿಲ್ಲ. ಒಳಗೆ ಬರಲು ಮತ್ತು ಹೊರಗೆ ಹೋಗಲು ಸರಿಯಾದ ದ್ವಾರಗಳೂ ಇರಲಿಲ್ಲ. ಪುಸ್ತಕದ ಅಂಗಡಿಗಳಿಗೆ ತುಂಬ ಕಡಿಮೆ ಜಾಗ ನೀಡಲಾಗಿತ್ತು. ಹೆಚ್ಚು ಜಾಗ ನೀಡಲು ಅಲ್ಲಿ ಜಾಗ ಇದ್ದರೆ ತಾನೆ. ಬೆಂಗಳೂರಿನಂತಹ ಊರಿನಲ್ಲಿ ಸಮ್ಮೇಳನ ಮಾಡುವಾಗ ಅದನ್ನು ಅರಮನೆ ಮೈದಾನದಲ್ಲೆ ಮಾಡಬೇಕಾಗಿತ್ತು. ಎಲ್ಲಕ್ಕೂ ಜಾಗ ವಿಶಾಲವಾಗಿ ಇರುತ್ತಿತ್ತು. ಆಗ ಜನ ಊಟಕ್ಕೆ, ವಸತಿಗೆ ಬೇರೆ ಕಡೆ ಹೋಗಬೇಕಾಗೇ ಇರಲಿಲ್ಲ. ವಸತಿಗೂ ಕೂಡ ಗಂಡಸರಿಗೆ ಅಲ್ಲೆ ತಾತ್ಕಾಲಿಕ ಬ್ಯಾರಕ್ಕುಗಳನ್ನು ನಿರ್ಮಿಸಬಹುದಿತ್ತು. ಪುಸ್ತಕದ ಅಂಗಡಿಗಳಿಗೆ ಸಾಕಷ್ಟು ಜಾಗ ಸಿಗುತ್ತಿತ್ತು. ಏಳೆಂಟು ಕೋಟಿ ರೂಪಾಯಿ ವ್ಯವಹಾರ ಮಾಡುವ ಪುಸ್ತಕದ ಅಂಗಡಿಗಳಿಗೆ ಈ ಸಾರಿ ತುಂಬ ಕಡಿಮೆ ಜಾಗ ಇತ್ತು. ಅರ್ಧ ಗಂಟೆಯಲ್ಲಿ ಕೊಳ್ಳಬಹುದಾದ ಪುಸ್ತಕಗಳಿಗೆ ನೂಕುನುಗ್ಗಲಿನಲ್ಲಿ ಅರ್ಧ ದಿನ ಉಸಿರುಗಟ್ಟಿ ಪರದಾಡ ಬೇಕಾಗಿತ್ತು. ಅಲ್ಲದೆ ಈ ಸಾರಿ ಬೆಂಗಳೂರೆಂದರೆ ಬರಿ ಬಸವನಗುಡಿ ಎಂಬಂತಷ್ಟೆ ಆಗಿತ್ತು. ಇಡೀ ಬೆಂಗಳೂರಿನಲ್ಲಿ ಹಬ್ಬದ ವಾತಾವರಣ ಇರಲಿಲ್ಲ. ಕನಕಪುರ ರಸ್ತೆಗೆ ಬಂದರೆ ಸಮ್ಮೇಳನದ ವಾಸನೆಯೆ ಇಲ್ಲ, ಕೋರಮಂಗಲಕ್ಕೆ ಬಂದರೆ ಸಮ್ಮೇಳನದ ಸುದ್ದಿಯೆ ಇಲ್ಲ! ಕೃಷ್ಣರಾಜಪುರಕ್ಕೆ ಬಂದರೆ ಅದರ ಸುಳಿವೆ ಇಲ್ಲ! ನಾವು ಎಲ್ಲಿ ಸಮ್ಮೇಳನ ಮಾಡುತ್ತೇವೋ ಆ ಊರಿನ ತುಂಬ ಮತ್ತು ರಾಜ್ಯದ ಕೆಲವು ಆಯ್ದ ಜಾಗಗಳಲ್ಲಿ ಬ್ಯಾನರ್, ಬಂಟಿಂಗ್ಸ್, ಫ್ಲೆಕ್ಸ್‌ಗಳನ್ನು ಹಾಕಲು ಮತ್ತು ಆನಂತರ ಅವನ್ನು ತೆರವುಗೊಳಿಸಲು ಗುತ್ತಿಗೆ ನೀಡುವ ಕೆಲಸ ತಪ್ಪದೆ ಇನ್ನು ಮುಂದಾದರೂ ಆದರೆ ಒಳಿತು.

ಪ್ರಕಾಶಕರಿಗೆ ರಿಯಾಯಿತಿ ದರದಲ್ಲಿ ಕಾಗದ ಒದಗಿಸಬೇಕು, ನಮ್ಮಲ್ಲಿ ಸರಿಯಾದ ಒಂದು ಪ್ರಕಾಶನ ಕಾನೂನು ರೂಪಿಸಬೇಕು, ಸರಿಯಾದ ಪುಸ್ತಕ ನೀತಿ ಜಾರಿಗೆ ತರಬೇಕು, ಕಾಪಿ ರೈಟ್ ಕಾನೂನು ಜಾರಿಗೆ ತರಬೇಕು ಎಂಬ ಒತ್ತಾಯಗಳು ಗೋಷ್ಠಿಗಳಲ್ಲಿ ಕೇಳಿಬಂದವು. ಇವೆಲ್ಲ ಯುಕ್ತವಾದ ಒತ್ತಾಯಗಳೇ. ಬಹು ದಿನಗಳಿಂದ ಚರ್ಚಿತವಾಗುತ್ತಿರುವ ಪೆಂಡಿಂಗ್ ಇರುವ ಒತ್ತಾಯಗಳು. ಅಲ್ಲದೆ ನಮ್ಮಲ್ಲಿ ಒಂದು ನಿರ್ದಿಷ್ಟ ಮಾರಾಟ ನೀತಿ, ಬೆಲೆ ನೀತಿ ಕೂಡ ಇಲ್ಲ ಅಲ್ಲವೇ? ಸಮ್ಮೇಳನದಲ್ಲಂತೂ ಓದುಗರಿಗೆ ಕೆಲವರು ಬಿಲ್ಲನ್ನೆ ಕೊಡುತ್ತಿರಲಿಲ್ಲ. ಕೆಲವರು ಪುಸ್ತಕಗಳನ್ನು ನೋಡಲೂ ಸರಿಯಾಗಿ ಬಿಡುತ್ತಿರಲಿಲ್ಲ. ಅಷ್ಟೆ ಅಲ್ಲ ಎಲ್ಲರೂ ಮಾತಾಡಿಕೊಂಡವರಂತೆ ಹತ್ತು ಪರ್ಸೆಂಟ್ ಮಾತ್ರ ಸೋಡಿ ನೀಡುತ್ತಿದ್ದರು (ನವಕರ್ನಾಟಕ, ಹಂಪಿ ಇಂಥವು ಅಪವಾದ). ಕೆಲವು ಪುಸ್ತಕ ಮಾರಾಟಗಾರರಿಗೆ


ನವಕರ್ನಾಟಕ ಪುಸ್ತಕ ಮಳಿಗೆಯಲ್ಲಿ ಜಿ. ವಿ.





ಮುವತ್ತರಿಂದ ನಲವತ್ತು ಪರ್ಸೆಂಟ್ ಸೋಡಿ ನೀಡುವ ಕೆಲವರು ಓದುಗರಿಗೆ ಮಾತ್ರ ಯಾಕೆ ಈ ರಿಯಾಯಿತಿ ನೀಡುವುದಿಲ್ಲ? ಮೊದಲಿಗೆ ರಿಯಾಯಿತಿ ಎಂಬ ಮಾತೇ ವ್ಯಾಪಾರಿ ದೃಷ್ಟಿಯದ್ದು. ಮೊದಲು ಹೆಚ್ಚು ಬೆಲೆ ಇಡುವುದಾದರೂ ಯಾಕೆ, ಆಮೇಲೆ ರಿಯಾಯಿತಿ ನೀಡುವುದಾದರೂ ಯಾಕೆ? ಮೊದಲೆ ಸರಿಯಾದ ಬೆಲೆ ನಿಗದಿ ಮಾಡಬಾರದಾ ? ನಮ್ಮಲ್ಲಿ ಪುಸ್ತಕದ ಬೆಲೆ ನಿಗದಿಗೆ ಕೂಡ ಒಂದು ಸಾಮಾನ್ಯ ಸೂತ್ರ ಇಲ್ಲ. ಎಷ್ಟೋ ಮಂದಿ ಪುಸ್ತಕಗಳಿಗೆ ತಮಗೆ ಮನ ಬಂದಂತೆ ರೇಟುಗಳನ್ನು ಇಡುತ್ತಾರೆ! ಅದಕ್ಕೊಂದು ನೀತಿಯೇ ಇಲ್ಲ! ಪುಸ್ತಕ ಮಾರಾಟ ನೀತಿ, ಬೆಲೆ ನೀತಿಯೊಂದನ್ನು ನಮ್ಮಲ್ಲಿ ಜಾರಿಗೆ ತರಬೇಕಲ್ಲವೆ?

ಪತ್ರಿಕೆಗಳಲ್ಲಿ ಸಾಹಿತ್ಯದ ಒಲವು ಗೌಣವಾಗುತ್ತಿದೆ ಎಂಬ ಮಾತುಗಳು 'ಕನ್ನಡ ಪ್ರಜ್ಞೆ – ಸಮೂಹ ಮಾಧ್ಯಮಗಳು' ಎಂಬ ಗೋಷ್ಠಿಯಲ್ಲಿ ಕೇಳಿಬಂದವು. ಇದು ನಿಜ ಕೂಡ. ಹಲವಾರು ಪತ್ರಿಕೆಗಳು ಎಷ್ಟು ಪ್ರಾಮುಖ್ಯತೆಯನ್ನು ಸಾಹಿತ್ಯಕ್ಕೆ ಕೊಡಬೇಕೋ ಅಷ್ಟನ್ನು ಕೊಡುತ್ತಿಲ್ಲ. ಸಿನೆಮಾಗೆ ಇರುವಷ್ಟು ಬೆಂಬಲ ಇಂದು ಸಾಹಿತ್ಯಕ್ಕೆ ಇಲ್ಲ. ಪತ್ರಿಕೆಗಳು ಸರಿಯಾದ ಪ್ರಮಾಣದಲ್ಲಿ ಸಾಹಿತ್ಯಕ್ಕೆ ಸ್ಥಾನ ನೀಡುತ್ತಿಲ್ಲ ಸರಿ. ಆದರೆ ಟೀವಿ ಚಾನೆಲ್ಲುಗಳು? ಇವು ಸಾಹಿತ್ಯಲೋಕವನ್ನೆ ಲೆಕ್ಕಕ್ಕೆ ಇಟ್ಟಂತೆ ಕಾಣುವುದಿಲ್ಲ. ಯಾವ ಟೀವಿಯಲ್ಲೂ ಸಾಹಿತ್ಯಕ್ಕೇ ಮೀಸಲಾದ ಒಂದು ಕಾರ್ಯಕ್ರಮ ಇಂದು ಇಲ್ಲ. ಹಾಸ್ಯ ಕಾರ್ಯಕ್ರಮಕ್ಕೆ ನೀಡುವುದರಲ್ಲಿ ಹತ್ತನೇ ಒಂದು ಭಾಗದಷ್ಟೂ ಸಾಹಿತ್ಯಕ್ಕಿಂದು ದೃಶ್ಯಮಾಧ್ಯಮದಲ್ಲಿ ಜಾಗವಿಲ್ಲದಾಗಿದೆ ! ಮನರಂಜನೆಯೇ ಜನರ ಬೇಡಿಕೆ ಎಂಬಂತೆ ಚಾನೆಲ್ಲುಗಳು ಇಂದು ಅಭಿಪ್ರಾಯ ಮೂಡಿಸುತ್ತಿವೆ! ಚಿತ್ರಕಲಾಲೋಕದಲ್ಲಿ, ಸಿನೆಮಾ ಲೋಕದಲ್ಲಿ, ಸಂಗೀತ, ರಾಜಕಾರಣ ಈ ಯಾವ ಲೋಕದಲ್ಲೂ ಸಾಹಿತ್ಯಕ್ಕೆ ಸ್ಥಾನವಿಲ್ಲ. ಆದರೂ ಅವರೆಲ್ಲ ಸಾಹಿತ್ಯ ಸಮ್ಮೇಳನಗಳಲ್ಲಿ ಸ್ಥಾನಮಾನ ಬಯಸುತ್ತಾರೆ ಮಾತ್ರ! ನೀಡದಿದ್ದರೆ ಜಗಳಕ್ಕೂ ಬರುತ್ತಾರೆ ಕೂಡ. ಸಾಹಿತ್ಯವೆಂದರೆ ಕನ್ನಡ ಎಂದು ಅವರೆಲ್ಲ ಭಾವಿಸುತ್ತಾರೆ. ಆದರೆ ಅವರು ಕಾರ್ಯಕ್ರಮ ಮಾಡುವಾಗ ಸಾಹಿತ್ಯವನ್ನು ಮಾತ್ರ ಒಗ್ಗರಣೆಗೂ ನೆನಪಿಸಿಕೊಳ್ಳುವುದಿಲ್ಲ!

ಸಾಹಿತ್ಯ ಸಮ್ಮೇಳನಗಳ ಕವಿಗೋಷ್ಠಿಗಳನ್ನೋ ಕೇಳುವಂತೆಯೇ ಇಲ್ಲ ಬಿಡಿ. ಯಾವತ್ತೂ ಇಲ್ಲದ ಕವಿಗಳು ಸಮ್ಮೇಳನದ ಹೊತ್ತಿಗೆ ಹುಟ್ಟಿಕೊಂಡುಬಿಡುತ್ತಾರೆ. ಸಾಹಿತ್ಯ ಲೋಕದಲ್ಲಿ ಎಂದೂ ಒಮ್ಮೆಯೂ ಕಾಣಿಸಿಕೊಳ್ಳದವರೆಲ್ಲ ಸಮ್ಮೇಳನದ ಕವಿಗೋಷ್ಠಿಯಲ್ಲಿ ಹೇಗೋ ಬಂದು ಸೇರಿಕೊಳ್ಳುತ್ತಾರೆ. ಜಿಲ್ಲಾವಾರು ಮೀಸಲಾತಿಗಳನ್ನೂ ಕೇಳುತ್ತಾರೆ. ಎಷ್ಟೋ ಕವಿಗಳ ಹೆಸರನ್ನೆ ಒಮ್ಮೆಯೂ ನಾವು ಕೇಳಿರುವುದಿಲ್ಲ. ಸಮ್ಮೇಳನದಲ್ಲೆ ಅವರ ಹೆಸರನ್ನು ಮೊದಲಿಗೆ ಮತ್ತು ಕೊನೆಗೆ ಕೇಳುತ್ತೇವೆ. ಈ ಸಾರಿ ಕೆಲವು ಕವಿಗಳು ತಮ್ಮ ಹೆಸರನ್ನು ಕವಿಗೋಷ್ಠಿಯಲ್ಲಿ ಹಾಕಿಸಿಕೊಳ್ಳಲು ಶಾಸಕರಿಂದ ಶಿಫಾರಸ್ಸು ಪತ್ರಗಳನ್ನು ತಂದಿದ್ದರಂತೆ! ಅಮ್ಮಮ್ಮಾ ಎಲ್ಲಿಗೆ ಬಂತು ನೋಡಿ ನಮ್ಮ ಕಾವ್ಯ!

ಮಠಮಾನ್ಯಗಳಿಗೆ ಶಾಶ್ವತ ಅನುದಾನ ನೀಡುವ ಕಾನೂನು ಜಾರಿ ಮಾಡುವ ನಮ್ಮ ಮುಖ್ಯಮಂತ್ರಿಗಳು ನಲ್ಲೂರು ಪ್ರಸಾದರು ಕನ್ನಡ ಸಾಹಿತ್ಯ ಪರಿಷತ್ತಿಗೆ ಶಾಶ್ವತ ಅನುದಾನ ಕೇಳಿದರೆ ಭುವನೇಶ್ವರಿ ಪ್ರತಿಮೆಗೆ ೨೫ ಕೋಟಿ ನೀಡುತ್ತೇನೆ ಎನ್ನುತ್ತಾರೆ! ಸತ್ತ ಕನ್ನಡ ಶಾಲೆಗಳ ಮೇಲೆ ಭುವನೇಶ್ವರಿ ಪ್ರತಿಮೆ ಸ್ಥಾಪಿಸಿ ಎಂದು ಇದೇ ಸಮ್ಮೇಳನದಲ್ಲೆ ಬಿಳಿಗೆರೆ ಈ ವಿಚಾರವನ್ನು ಚೆನ್ನಾಗಿ ಜಾಡಿಸಿದ್ದಾರೆ. ಮೊದಲ ದಿನ ಭ್ರಷ್ಟ ರಾಜಕಾರಣವನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡು ಜನರಿಂದ ಚಪ್ಪಾಳೆ ಗಿಟ್ಟಿಸಿಕೊಂಡ ನಮ್ಮ ಜಿ.ವಿ. ಯವರೋ ಎರಡೇ ದಿನಕ್ಕೆ ರಾಗ ಬದಲಾಯಿಸಿದರು! 'ಕರ್ನಾಟಕವು ದೇಶದಲ್ಲೆ ಅತ್ಯಂತ ಭ್ರಷ್ಟ ರಾಜ್ಯ ಎಂಬ ಶುಕ್ರವಾರದ ಭಾಷಣದಲ್ಲಿನ ನನ್ನ ಟೀಕೆ ಯಡಿಯೂರಪ್ಪ ಅವರೊಬ್ಬರನ್ನು ಕುರಿತದ್ದಾಗಿರಲಿಲ್ಲ. ಇಲ್ಲಿನ ಭ್ರಷ್ಟಾಚಾರ ಕಳೆದ ಇಪ್ಪತ್ತು ವರ್ಷಗಳಿಂದ ಬೆಳೆದದ್ದು' ಎಂದು ಜೀವಿ ಸಾರಿಸಿಬಿಟ್ಟರು. ಕರ್ನಾಟಕ ಇಡೀ ದೇಶದಲ್ಲೆ ಭ್ರಷ್ಟ ರಾಜ್ಯ ಮತ್ತು ಇಲ್ಲಿನ ಭ್ರಷ್ಟತೆಯ ವಿಚಾರ ಇಪ್ಪತ್ತು ವರ್ಷಗಳದ್ದು ಎಂಬ ಎರಡೂ ಮಾತುಗಳು ತಳಬುಡವಿಲ್ಲದವು.

ಜಿ.ವಿ. ತಮ್ಮ ಸಂವಾದದಲ್ಲಿ 'ರಾಜ್ಯದ ಎಲ್ಲ ಶಾಲೆಗಳಲ್ಲಿ ಎಲ್ಲ ಮಕ್ಕಳಿಗೆ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು. ಜತೆಗೆ ಕೇಂದ್ರೋದ್ಯಮ, ಖಾಸಗಿ ಮತ್ತು ಬಹುರಾಷ್ಟ್ರೀಯ ಕಂಪೆನಿಗಳಲ್ಲಿ ಕನ್ನಡಿಗರಿಗೆ ಕನಿಷ್ಠ ಶೇಕಡ ೫೦ರಷ್ಟು ಮೀಸಲು ಕಲ್ಪಿಸುವಂತೆ ಸರ್ಕಾರ ಕಾನೂನು ಮಾಡಬೇಕು. ಹಿಂದೆ ಸರೋಜಿನಿ ಮಹಿಷಿ ಅವರ ವರದಿಯಲ್ಲಿ ಶಿಫಾರಸು ಮಾಡಿದಂತೆ ಕನ್ನಡಿಗರಿಗೆ ಉದ್ಯೋಗದಲ್ಲಿ ಮೀಸಲಾತಿ ಸಿಗಬೇಕು' ಎಂದದ್ದು ಮಾತ್ರ ಸ್ವಾಗತಾರ್ಹ, ಅನುಷ್ಠಾನೀಯ. ಅದೇ ಸಂವಾದದಲ್ಲಿ ಕನ್ನಡದ ಯಾವ ಅಕ್ಷರವನ್ನೂ ಬಿಡಬಾರದು ಎಂದು ಜಿ.ವಿ. ಅಪ್ಪಣೆ ಮಾಡಿದ್ದಾರೆ! ಇದೇನಿದು? ನಾವು ಸಂಸ್ಕೃತ ಪದಗಳನ್ನು ಬಳಸುತ್ತೇವೆ

## ಎನಗಿಂತ ಕಿರಿಯರಿಲ್ಲ – ಎಂದ ಬಸವಣ್ಣ!

ಬಸವಣ್ಣ ಒಬ್ಬ ಕನಸುಗಾರ, ಬುದ್ಧನಂತೆ -
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ,
ಎಂದಾಗ, ಬಸವಣ್ಣ ಒಬ್ಬ ಬುದ್ಧನಾದಾ :
ಕಲ್ಯಾಣ ಜೀವಂತವಾಯಿತ್ತು ಎಂದಿನಂತೆ ಸತ್ತು
ಆದರೂ ಕಲ್ಯಾಣವಾಗಲಿಲ್ಲ ಬುದ್ಧನ ಕನಸು
ಕನಸಾಗಿಯೇ ಉಳಿಯಿತ್ತು ಬಸವಣ್ಣನ ನನಸು
ನೇಸರುದಿಸುತ್ತಲಿದ್ದಾನೆ ಮತ್ತೆ ಮತ್ತೆ ಮತ್ತೆ ಸುತ್ತು !

ಕನಸುಗಳ ಮಾಲೆಯಲ್ಲಿ (ದೆ) ನಮ್ಮೆಲ್ಲರ ಕೊರಳ ಗತ್ತು
ಸಾಧ್ಯವಾಗುವ ಕನಸು ಮಾನವನ ನಿತ್ಯ ಮತ್ತು
ನಾಳೆ ಬರಬಹುದೆಂಬ ಶಂಕೆಯೂ ಒಂದು ಗೊತ್ತು
ಯಾರಿಗುಂಟು ಯಾರಿಗಿಲ್ಲ - ನಾಳೆಯದೇ ತುತ್ತು
ಇಲ್ಲವೆಂಬುದು ಕೂಡ ಮರ್ಯಾದೆಯ ಸ್ವತ್ತು
ಕನಸಾಗಿಯೇ ಉಳಿದೀತು ಬಸವಣ್ಣನ ಜಗತ್ತು
ಹಗಲುಗನಸಿನ ಮೇಳ ಮೇಲೋಗರದ ಮಾತು
ಬದುಕೆಂಬುದು ಕೂಡ ಒಂದಾನೊಂದು, ಗೊತ್ತು
ಬುದ್ಧ ತನ್ನ ಸಾಮ್ರಾಜ್ಯಕ್ಕೆ ಶರಣೆಂದು ಗೆಲಿದ
ಬಸವ ತನ್ನ ಕಲ್ಯಾಣಕ್ಕೆ ಶರಣು ಶರಣೆಂದು ಉಳಿದ !



ಕೆ. ವೆಂ. ರಾಜಗೋಪಾಲ, ನಂ. ೬೯, 'ಸುಜನ ಮಂದಿರ', ೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ಅನ್ನಪೂರ್ಣ ಮ್ಯಾನ್‌ಷನ್ ಎದುರು, ಅಶ್ವತ್ಥನಗರ, ಬೆಂಗಳೂರು - ೫೬೦ ೦೯೪



ಎಂದ ಮಾತ್ರಕ್ಕೆ ಋಕಾರವನ್ನು ಇಟ್ಟುಕೊಳ್ಳಬೇಕೆ? ಇದು ಮಾತ್ರ ಅನಿಷ್ಟಾನೀಯ. ಅರ್ಕಾವತ್ತು(ೞ) ಮತ್ತು ರವೊತ್ತು (ಱ) ಎರಡೂ ನಮಗೆ ಯಾಕೆ ಇರಬೇಕು ? ಶ ಮತ್ತು ಷ ಈ ಎರಡೂ ಯಾಕೆ ಇರಬೇಕು? ಇವುಗಳಲ್ಲಿ ಒಂದೊಂದನ್ನು ಬಿಡಬಹುದಲ್ಲ. ಪಂಚಮ ವ್ಯಂಜನ ಗಳಲ್ಲಿ ಙ, ಞ ಇವೆಲ್ಲ ಯಾಕೆ ಬೇಕು ? ಅನಗತ್ಯ ಅಕ್ಷರ ಮತ್ತು ಚಿಹ್ನೆಗಳಿಂದ ಭಾಷೆಗೆ ಹೊರೆ ಅಲ್ಲವೆ ? ಹಾಗಾದರೆ ಉಚ್ಚಾರದಲ್ಲಿ ನಮ್ಮ ಗ್ರಾಮೀಣರು ಫಕಾರದ ಇಂಗ್ಲಿಶ್ ಶಬ್ದಗಳನ್ನು ಬಳಸುತ್ತಾರೆ ಎಂದು ಕನ್ನಡಕ್ಕೆ ಎಫ್ ಅಕ್ಷರ ಸೇರಿಸಿಕೊಳ್ಳಲು ಆಗುತ್ತದೆಯೆ? ಕನ್ನಡದಲ್ಲಿ ಶಂಕರಭಟ್ಟರ ಸ್ಕೂಲು ಸರಿಯಾದ ದಿಕ್ಕಿನಲ್ಲಿ ಹೋಗುತ್ತಿದ್ದರೆ ಜೀವಿಯಂಥವರ ಸ್ಕೂಲು ತದ್ವಿರುದ್ಧ ದಿಕ್ಕಿನಲ್ಲಿ ಹೋಗುತ್ತಿರುವುದು ಸೋಜಿಗ !

ತಮ್ಮ ಭಾಷಣದಲ್ಲಿ ಜೀವಿ ಮೊದಲ ಅರ್ಧ ಭಾಗವನ್ನು ಕೈಬಿಟ್ಟಿದ್ದರೂ ನಡೆಯುತ್ತಿತ್ತು. ಅಲ್ಲಿನದೆಲ್ಲ ಕನ್ನಡ ಪ್ರಾಥಮಿಕ ಸಾಹಿತ್ಯ ವಿದ್ಯಾರ್ಥಿಗೂ ಗೊತ್ತಿರುವ ವಿಚಾರ. ಸಾಹಿತ್ಯದ ಚಾರಿತ್ರಿಕ ಬೆಳವಣಿಗೆಯ ಸ್ಥೂಲ ಪರಿಚಯವನ್ನು ಸಮ್ಮೇಳನದ ಅಧ್ಯಕ್ಷರ ಭಾಷಣವು ಮಾಡಿಕೊಡಬೇಕಾದ ಅಗತ್ಯವಿಲ್ಲ. ಇನ್ನು ಮುಂದಿನ ಭಾಷಣವು ಸಾರವತ್ತಾಗಿದೆ. ಕನ್ನಡವನ್ನು ಶಿಕ್ಷಣದಲ್ಲಿ ಕಡ್ಡಾಯಗೊಳಿಸುವ ಮತ್ತು ಲೋಕಸೇವಾ ಆಯೋಗದಲ್ಲಿ ಕನ್ನಡದಲ್ಲೆ ಸಂದರ್ಶನ ನಡೆಸುವ ಹಾಗೂ ಸಾಹಿತ್ಯ ಪರಿಷತ್ತು ಮತ್ತು ಕನ್ನಡಿಗರೆಲ್ಲ ಏನು ಮಾಡಬಹುದೆಂಬ ಅವರ ಕಾರ್ಯಸೂಚಿ ಯುಕ್ತವಾಗಿಯೇ ಇದೆ.

ಇನ್ನು ನಿರ್ಣಯಗಳ ವಿಚಾರ : ಸರ್ಕಾರವು ಜಿಲ್ಲಾ ಕೇಂದ್ರಗಳಲ್ಲಿ ಸಾಹಿತ್ಯಭವನ ನಿರ್ಮಿಸಲು ನಿವೇಶನ ಮತ್ತು ಧನಸಹಾಯ ನೀಡಬೇಕು; ಹಾಗೆಯೆ ತ್ರಿಭಾಷಾ ಸೂತ್ರದಂತೆ ಕನ್ನಡವನ್ನು ಒಂದು ಕಡ್ಡಾಯ ಭಾಷೆಯಾಗಿ ಕಲಿಸಬೇಕು, ಪ್ರಾಥಮಿಕ ಶಿಕ್ಷಣವನ್ನು ೧ರಿಂದ ೪ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಜಾರಿಗೊಳಿಸ ಬೇಕೆಂದು ನಿರ್ಣಯಗಳನ್ನು ಇಲ್ಲಿ ಅಂಗೀಕರಿಸಲಾಗಿದೆ. ಅಲ್ಲದೆ ಹೈದರಾಬಾದು ಕರ್ನಾಟಕ ಪ್ರದೇಶವನ್ನು ಸಂವಿಧಾನದ ೩೭೧ನೇ ವಿಧಿಯಂತೆ ವಿಶೇಷವಾಗಿ ಅಭಿವೃದ್ಧಿ ಪಡಿಸಬೇಕು ಎಂದೂ ನಿರ್ಣಯಿಸಲಾಗಿದೆ. ಇವೆಲ್ಲವೂ ಒಳ್ಳೆಯ ನಿರ್ಣಯಗಳು. ಇಂತಹ ನಿರ್ಣಯ ಗಳನ್ನು ಕನ್ನಡ ಸಾಹಿತ್ಯ ಸಮ್ಮೇಳನ ತೆಗೆದುಕೊಳ್ಳುತ್ತದೆ. ಆದರೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಜಂ ಜಂ ಅಂತ ಕನ್ನಡದ ತೇರು ಹರಿಸುತ್ತದೆ. ಅದರಿಂದ ಯಾರಿಗೆ ಏನು ಪ್ರಯೋಜನ? ಪ್ರಾಧಿಕಾರ ಇಂತಹ ನಿರ್ಣಯಗಳನ್ನು ತೆಗೆದುಕೊಂಡು ಅವನ್ನು ಜಾರಿ ಆಗಿಸಲು ಕಾರ್ಯ ಯೋಜನೆಗಳನ್ನು, ಭಾಷಾಯೋಜನೆಗಳನ್ನು ತಯಾರಿಸ ಬೇಕಲ್ಲವೆ? ಅದನ್ನು ಬಿಟ್ಟು ಕನ್ನಡದ ತೇರು ಹರಿಸುವ ಕಾರ್ಯಗಳಿಂದ ಕನ್ನಡಕ್ಕೆ ಲೌಕಿಕವಾಗಿ ಏನು ಪ್ರಯೋಜನ ಆಗುತ್ತದೆ ಹೇಳಿ.

ವಿಶೇಷವೆಂದರೆ ಇದುವರೆಗೂ ನಡೆದ ೭೬ ಸಮ್ಮೇಳನಗಳಲ್ಲಿ ತೆಗೆದುಕೊಂಡ ಪ್ರಮುಖ ನಿರ್ಣಯಗಳು ಜಾರಿಯಾಗಿಲ್ಲ. ಆ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರಲು ಸರ್ಕಾರ ಸಹಕರಿಸಬೇಕು ಎಂದು ಈ ಸಮ್ಮೇಳನದಲ್ಲಿ ಒಂದು ನಿರ್ಣಯ ತೆಗೆದು ಕೊಳ್ಳಲಾಗಿದೆ. ಸರ್ಕಾರ ಯಾಕೆ ಸಹಕರಿಸುವುದಿಲ್ಲ? ಅದೇನು ಇಂಗ್ಲೆಂಡಿನ ಸರ್ಕಾರವೆ? ಈ ಹಿಂದಿನ ಗದಗು ಸಮ್ಮೇಳನದಲ್ಲಿ ಕೂಡ ಇದುವರೆಗಿನ ನಿರ್ಣಯಗಳನ್ನು ಜಾರಿಗೆ ತರುವ ಒಂದೇ ನಿರ್ಣಯವನ್ನು ತೆಗೆದು ಕೊಳ್ಳಲಾಗಿತ್ತು. ನಿರ್ಣಯಗಳನ್ನು ಕೇವಲ ತೆಗೆದು ಕೊಂಡರೆ ಅವು ಜಾರಿಯಾಗುತ್ತವೆಯೊ? ನಿರ್ಣಯ ತೆಗೆದುಕೊಳ್ಳುವುದು ಬರಿ ನಿರ್ಣಯ ತೆಗೆದು ಕೊಳ್ಳುವುದಷ್ಟೆ ಅಲ್ಲವೆ? ಅವನ್ನು ಜಾರಿ ಆಗಿಸಲು ಬೇರೆಯೆ ಕಾರ್ಯಯೋಜನೆ ಮತ್ತು ಕಾರ್ಯತಂತ್ರ, ಕಾರ್ಯಶೀಲತೆ ಮತ್ತು ಅದಕ್ಕಾಗಿ ಒಂದು ನಿರ್ದಿಷ್ಟ ಪಡೆ – ಬಜೆಟ್ ಎಲ್ಲ ಬೇಕಲ್ಲವೆ? ಈ ನಿಟ್ಟಿನಲ್ಲಿ ಕನ್ನಡ ಸಂಘಟನೆಗಳು ಯೋಚಿಸುವುದು ಒಳಿತು. ಇದಕ್ಕಾಗಿ ಒಂದು ವಿಶೇಷ ಕಾರ್ಯಪಡೆ ಮತ್ತು ಯೋಜನೆ ಹಾಗೂ ಬಜೆಟ್ಟನ್ನು ತಯಾರಿಸುವ ಕೆಲಸವನ್ನು ಕನ್ನಡ ಸಾಹಿತ್ಯ ಪರಿಷತ್ತು ಮಾಡಬೇಕಾಗಿದೆ. ಅದು ಬಿಟ್ಟು ನಿರ್ಣಯಗಳು ಜಾರಿಯಾಗುತ್ತಿಲ್ಲ ಎಂದು ಬೊಬ್ಬೆ ಹೊಡೆದರೆ ಅಥವಾ ನಿರ್ಣಯಗಳ ಜಾರಿಗಾಗಿ ನಿರ್ಣಯಗಳನ್ನು ತೆಗೆದುಕೊಂಡರೆ ಅವೂ ಕೂಡ ತೆಗೆದುಕೊಂಡ ನಿರ್ಣಯಗಳಾಗಿ ಉಳಿಯುತ್ತವೆ ಅಷ್ಟೆ ಏನೂ ಜಾರಿ ಆಗುವುದಿಲ್ಲ. ಈ ನಿಟ್ಟಿನಲ್ಲಿ ಸಾಕಷ್ಟು ಕನ್ನಡ ಕಾಳಜಿ ಉಳ್ಳ ಮತ್ತು ಕನ್ನಡ ಬಳಗ ಉಳ್ಳ ಕರ್ನಾಟಕ ರಕ್ಷಣಾ ವೇದಿಕೆ ಕೂಡ ಕಾರ್ಯಶೀಲ ಆಗಬೇಕಿದೆ.

ಕಾರ್ಯಕ್ರಮ ಸಂಘಟಿಸುವುದು ಮತ್ತು ಭಾಷಣ ಮಾಡುವುದು ಆ ಮೂಲಕ ಕನ್ನಡದ ಜಾತ್ರೆ ಮಾಡುವುದು ನಿಜಕ್ಕೂ ಒಳ್ಳೆಯದೆ. ಇದು ಆಗಬೇಕು. ಪ್ರತಿ ವರ್ಷವೂ ಆಗುತ್ತಿರಬೇಕು. ಸರ್ಕಾರ ಬೇಕು ಬೇಕಾದ ಮಠಗಳಿಗೆಲ್ಲ ಕೋಟಿ ಕೋಟಿ ಕೊಡುವಾಗ ಕನ್ನಡ ಮಠಕ್ಕೆ ಯಾಕೆ ಕೆಲವು ಕೋಟಿಗಳನ್ನು ಕೊಡಬಾರದು? ಆದರೆ ಈ ಕನ್ನಡ ಸಾಹಿತ್ಯ ಮಠ ಅದನ್ನು ಕನ್ನಡ ಜಾತ್ರೆಗೆ ಖರ್ಚು ಮಾಡುವುದರ ಜೊತೆಗೆ ಕನ್ನಡಪರ ನಿರ್ಣಯಗಳ ಜಾರಿಗಾಗಿ ಕೂಡ ಕಾರ್ಯಯೋಜನೆ ತಯಾರಿಸಿ ಖರ್ಚು ಮಾಡುವುದು ಒಳಿತು. ಸರ್ಕಾರ ಅದಕ್ಕೂ ಖರ್ಚು ಮಾಡಬೇಕು. ಹಣ ಕೊಡಬೇಕು. ಇನ್ನಾವುದಕ್ಕೆ ನಮ್ಮ ಸಂಸ್ಕೃತಿ ಇಲಾಖೆ ಇರುವುದು? ಈ ಕಾರ್ಯಕ್ಕೆ ಪ್ರಾಧಿಕಾರದ ಜೊತೆಗೆ ಎಲ್ಲ ಅಕಾಡೆಮಿಗಳನ್ನೂ ಒಳಗೊಳ್ಳುವುದು ಒಳಿತು. ಆಗ ಮಾತ್ರ ಸಾಹಿತ್ಯ ಸಮ್ಮೇಳನಗಳು ಯಶಸ್ವಿ ಎಂದು ಹೇಳಬಹುದು.

ಏನೇ ಆದರೂ ಈ ಸಾರಿಯ ಸಮ್ಮೇಳನ ಎಲ್ಲ ಅರೆಕೊರೆಗಳ ನಡುವೆ 'ಚೆನ್ನಾಗಿ' ನಡೆದಿದೆ. ಮುಂದೆ ಇನ್ನೂ ಚೆನ್ನಾಗಿ ನಡೆಯಲಿ. ಇನ್ನಾದರೂ ನಿರ್ಣಯಗಳ ಜಾರಿಗೆ ಒಂದು ಬಜೆಟ್ ತಯಾರಾಗಲಿ, ಅದಕ್ಕಾಗಿ ಒಂದು ಕಾರ್ಯಪಡೆ ರಚನೆಯಾಗಲಿ. ಸರ್ಕಾರ ಬೆಚ್ಚುವಂತೆ ಮತ್ತು ಸದಾ ಕನ್ನಡಕ್ಕಾಗಿ ಎಚ್ಚರ ಗೊಳ್ಳುವಂತೆ ಆ ಪಡೆ ಕಾರ್ಯಶೀಲವಾಗಲಿ.

**ಡಾ|| ರಾಮಲಿಂಗಪ್ಪ ಟಿ. ಬೇಗೂರು**
ಸಂಖ್ಯೆ ೩೫, ೬ನೇ ಬ್ಲಾಕ್, ಬನಗಿರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಸರಿಸಾಟಿಯಿಲ್ಲದ ಭೀಮಸೇನ್ ಜೋಶಿ

ಹಿಂದುಸ್ತಾನಿ ಸಂಗೀತದ ದಿಗ್ಗಜ ಪಂಡಿತ್ ಭೀಮಸೇನ್ ಜೋಶಿಯವರಿಗೆ ರಾಷ್ಟ್ರದ ಅತ್ಯುನ್ನತ ಪ್ರಶಸ್ತಿಯಾಗಿರುವ ಭಾರತರತ್ನ ದೊರಕಿದ ಸಂತಸದ ಸಂಭ್ರಮದಲ್ಲಿ ಕನ್ನಡದ ಪತ್ರಕರ್ತರೊಬ್ಬರು ''ಕನ್ನಡಿಗನೊಬ್ಬನಿಗೆ ಎರಡನೇ ಬಾರಿ ಗೌರವ ಸಂದಿದೆ, ನಿಮಗೇನನಿಸುತ್ತದೆ ?'' ಎಂದು ಕೇಳಿದಾಗ ಜೋಶಿಯವರು ಒಂದು ಮಾತು ಹೇಳಿದರು : ''ಸಂಗೀತಕ್ಕೆ ಜಾತಿ, ಭಾಷೆ, ಧರ್ಮದ ಹಂಗಿಲ್ಲ.'' : ಈ ಮಾತನ್ನು ಪಂಡಿತಜೀ ಆಗಾಗ ಹೇಳುತ್ತಲೇ ಬಂದರು. ಉಸ್ತಾದ ಅಬ್ದುಲ್ ಕರೀಮ್ ಖಾನರ ಕಿರಾನ ಘರಾಣದಿಂದ ಸ್ಫೂರ್ತಿ ಪಡೆದ ಅವರು ಈ ವಿಶ್ವಮಾನವತೆಯ ಸಂದೇಶವನ್ನು ನಿರಂತರವಾಗಿ ನೀಡುತ್ತಲೇ ಬಂದರು.

ಬಾಲ್ಯದಲ್ಲಿ ಗದುಗಿನ ಅಂಗಡಿಯೊಂದರ ಬಳಿ ಕುಳಿತಾಗ ರೇಡಿಯೋದಿಂದ ಹರಿದುಬರುತ್ತಿರುವ ಉಸ್ತಾದ ಅಬ್ದುಲ್ ಕರೀಮ್ ಖಾನರ ರಾಗದ ಮೋಡಿಗೆ ಮಂತ್ರಮುಗ್ಧರಾದ ಭೀಮಸೇನ್ ಜೋಶಿ ತಾನು ಅವರಂತೆ ದೊಡ್ಡ ಉಸ್ತಾದನಾಗಬೇಕೆಂದು ಗುರುವನ್ನು ಅರಸಿ ಮನೆ ಬಿಟ್ಟು ಹೊರಟರು. ಟಿಕೇಟಿಲ್ಲದೆ ಬಿಜಾಪುರದ ರೈಲನ್ನು ಹತ್ತಿದ ಅವರಿಗೆ ಅಲ್ಲಿ ಹೋದಾಗ ನಿರಾಶೆ ಕಾದಿತ್ತು. ಯಾರೋ ಒಬ್ಬರು ಹೇಳಿದರು : ಮಧ್ಯಪ್ರದೇಶದ ಗ್ವಾಲಿಯರ್‌ಕ್ಕೆ ಹೋದರೆ ಸಂಗೀತ ಕಲಿಸುವ ಗುರುಗಳಿದ್ದಾರೆ, ಎಂದು. ಅದನ್ನು ಕೇಳಿಸಿಕೊಂಡ ಭೀಮಸೇನ ಅಲ್ಲಿ ಹೋಗಿ ಉಸ್ತಾದ ಹಫಿಜ್ ಖಾನರ ಗರಡಿಯಲ್ಲಿ ಶಿಷ್ಯತ್ವ ಪಡೆದು ಸಂಗೀತ ಕಲಿಯಲು ಮುಂದಾದರು.



ಅದೂ ಅವರ ಹಸಿವನ್ನು ಹಿಂಗಿಸಲಿಲ್ಲ. ಮತ್ತೆ ವಾಪಸ್ಸು ಬಂದು ಅಬ್ದುಲ್ ಕರೀಮ್ ಖಾನರ ಶಿಷ್ಯ ಕುಂದುಗೋಳದ ಸವಾಯಿ ಗಂಧರ್ವರ ಬಳಿ ಸಂಗೀತಾಭ್ಯಾಸ ಮುಂದುವರಿಸಿ ಈ ಎತ್ತರಕ್ಕೆ ಬೆಳೆದರು.

ಮಗನಿಗೆ ಸಂಗೀತದ ಹುಚ್ಚಿದೆ ಎಂದು ಭೀಮಸೇನರ ತಂದೆ ಗುರುರಾಜರಿಗೆ ಗೊತ್ತಾಯಿತು. ಆಗಲೇ ಅವರು ಗದುಗಿನ ಬಳಿಯ ಕುರ್ತಕೋಟಿಯಿಂದ ಬಟ್ಟೆ ತೊಳೆಯಲು ಬರುತ್ತಿದ್ದ ಅಗಸರ ಚೆನ್ನಪ್ಪನಿಂದ ಸಂಗೀತದ ಮೊದಲ ಪಾಠ ಹೇಳಿಸಿದರು. ಹೀಗೆ ಸಂಗೀತಕ್ಕೆ ಜಾತಿ ಧರ್ಮವಿಲ್ಲವೆಂಬ ಸತ್ಯವನ್ನು ಜೋಶಿಯವರು ಬಾಲ್ಯದಲ್ಲೇ ತಿಳಿದುಕೊಂಡರು. ಬದುಕಿನುದ್ದಕ್ಕೂ ಅದೇ ರೀತಿ ನಡೆದುಕೊಂಡರು. ಪ್ರತಿ ವರ್ಷ ಪುಣೆಯಲ್ಲಿ ತಮ್ಮ ಗುರು ಸವಾಯಿ ಗಂಧರ್ವರ ನೆನಪಿಗಾಗಿ ನಡೆಸುತ್ತಿದ್ದ ಸಂಗೀತೋತ್ಸವದಲ್ಲಿ ದೇಶದ ನಾನಾ ಭಾಗಗಳ ಸಂಗೀತ ಶ್ರೇಷ್ಠರನ್ನು ಆಹ್ವಾನಿಸಿ ಕಾರ್ಯಕ್ರಮ ಏರ್ಪಡಿಸುತ್ತಿದ್ದರು. ಪ್ರತಿ ವರ್ಷ ಅವರ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಿದ್ದ ಖ್ಯಾತ ಸರೋದ ವಾದಕ ಅಮ್ಜದ್ ಅಲಿ ಖಾನ್ ಅವರನ್ನು ವೇದಿಕೆಗೆ ಆಹ್ವಾನಿಸಿ ತನ್ನ ಗುರುವಿನ ಮಗ ಎಂದು ಸಭಿಕರಿಗೆ ಪರಿಚಯಿಸುತ್ತಿದ್ದರು.

ಇಂಥ ಭೀಮಸೇನ್ ಜೋಶಿ ಈಗ ನಮ್ಮನ್ನು ಅಗಲಿದ್ದಾರೆ. ಹಿಂದುಸ್ತಾನಿ ಸಂಗೀತದ ಕೇಂದ್ರವೆಂದು ಹೆಸರಾದ ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯಲ್ಲಿ ಆ ಕಾಲದಲ್ಲಿ ಹಿಂದುಸ್ತಾನಿ ಸಂಗೀತದ ಘಟಾನುಘಟಿಗಳೇ ಹೊರಹೊಮ್ಮಿದರು. ಪಂಡಿತ್ ಮಲ್ಲಿಕಾರ್ಜುನ ಮನಸೂರ, ಬಸವರಾಜ ರಾಜಗುರು, ಕುಮಾರಗಂಧರ್ವ, ಗಂಗೂಬಾಯಿ ಹಾನಗಲ್ ಇಂತಹ ಮಹಾನ್ ಚೇತನಗಳು ತಮ್ಮ ಸಂಗೀತ ಸುಧೆಯಿಂದ ಜಗತ್ತಿನಲ್ಲಿ ಹೆಸರು ಮಾಡಿದರು. ಭೀಮಸೇನ್ ಜೋಶಿ ಆ ಪೀಳಿಗೆಯ ಕೊನೆಯ ಕೊಂಡಿ.

ಭೀಮಸೇನ್ ಜೋಶಿಯವರೇನು ನಾಸ್ತಿಕ ವಿಚಾರವಾದಿಯಲ್ಲ. ಅವರು ಕೂಡ ಮಂತ್ರಾಲಯದ ರಾಘವೇಂದ್ರನ ಭಕ್ತರು. ಕಾವೇರಿ ರಂಗನ ಬಗ್ಗೆ ಭಾವುಕವಾಗಿ ಹಾಡಿದವರು. ಆದರೆ ಈ ಭಕ್ತಿ ಭಾವುಕತೆ ಎಂದೂ ಧರ್ಮಾಂಧತೆಯಾಗಲಿಲ್ಲ. ಅನ್ಯಮತೀಯರನ್ನು, ಜಾತಿಯವರನ್ನು ಅವರೆಂದೂ ದ್ವೇಷಿಸಲಿಲ್ಲ. ಗದುಗಿನ ಮಾಧ್ವ ಬ್ರಾಹ್ಮಣ ಮನೆತನದಲ್ಲಿ ಜನಿಸಿದರೂ, ''ಸಂಗೀತಗಾರನಾದ ನನಗೆ ಜಾತಿ ಧರ್ಮದ ಹಂಗಿಲ್ಲ'' ಎಂದು ಘಂಟಾಘೋಷವಾಗಿ ಘೋಷಿಸಿದರು. ಜೋಶಿಯವರ ಈ ಮಾತು ಕೇಳಿದಾಗ ಇದೇ ಮಧ್ವಾಚಾರ್ಯರ ಪರಂಪರೆಗೆ ಸೇರಿದ ಉಡುಪಿ ಪೇಜಾವರ ಶ್ರೀಗಳ ನೆನಪಾಗುತ್ತದೆ. ಅವರು ಪದೇ ಪದೇ ಸಂಘಪರಿವಾರದವರ ಜೊತೆಗೆ ಸೇರಿ ಅಲ್ಪಸಂಖ್ಯಾತರ ಬಗ್ಗೆ ಆಡುತ್ತಿರುವ ಮಾತುಗಳನ್ನು ಕೇಳಿದರೆ ಆತಂಕ ಉಂಟಾಗುತ್ತದೆ. ಆದರೆ ಭೀಮಸೇನ ಜೋಶಿ ವೈಯಕ್ತಿಕವಾಗಿ ಧಾರ್ಮಿಕ ಶ್ರದ್ಧೆಯ ವ್ಯಕ್ತಿಯಾಗಿದ್ದರೂ ಇತರ ಧರ್ಮೀಯರ ಬಗ್ಗೆ ಎಂದೂ ಇಂತಹ ಮಾತನ್ನು ಆಡಲಿಲ್ಲ. ಬಾಲ್ಯದಲ್ಲೇ ಸಂಗೀತದ ಹುಚ್ಚು ಹತ್ತಿಸಿಕೊಂಡ ಜೋಶಿಯವರು ಊರು ಬಿಟ್ಟು ಹೋದಾಗ ಛೇಡಿಸಿದ ಅನೇಕರ ಬಗ್ಗೆ ಅವರಿಗೆ ದ್ವೇಷವಿರಲಿಲ್ಲ. ಮುಂದೆ ಜೋಶಿಯವರು ಅಂತರರಾಷ್ಟ್ರೀಯ ಮಟ್ಟದ ಸಂಗೀತಗಾರರಾದ ನಂತರ ಆತ ನಮ್ಮವನು ಎಂದು ಅವರ ಜಾತಿಯವರೆ ಸಂಭ್ರಮ ಪಟ್ಟರೂ ಭೀಮಸೇನರು ಅದಕ್ಕಾಗಿ ಹಿಗ್ಗಿ ಉಬ್ಬಿಹೋಗಲಿಲ್ಲ. ಅವರಿಗೆ ಜಾತಿಯ ಏಣಿ ಅಗತ್ಯವಿರಲಿಲ್ಲ. ಅದನ್ನು ಎಡಗಾಲಿನಿಂದ ಒದ್ದು ಸಂಗೀತದ ಸಾಗರದಲ್ಲಿ ಈಜುತ್ತಾ ಈಜುತ್ತಾ ಉತ್ತುಂಗದ ಶಿಖರವನ್ನು ತಲುಪಿದರು.

ಇಂಥ ಭೀಮಸೇನ್ ಜೋಶಿಯವರ ಹೆಸರನ್ನು ನಾನು ಮೊದಲ ಬಾರಿ ಕೇಳಿದ್ದು ನನ್ನ ಹದಿನಾರನೇ ವಯಸ್ಸಿನಲ್ಲಿ. ನನ್ನ ಜಿಲ್ಲೆ ಬಿಜಾಪುರದಲ್ಲಿ ನರಸಿಂಗರಾವ್ ಕುಲಕರ್ಣಿ ಎಂಬ ಹಿಂದುಸ್ತಾನಿ ಸಂಗೀತದ ಗಾಯಕರಿದ್ದರು. ಮೂಲತಃ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನವರಾದ ಅವರಿಗೆ ಎರಡೇ ಆಸಕ್ತಿ. ಒಂದು ಹಿಂದುಸ್ತಾನಿ ಸಂಗೀತ. ಇನ್ನೊಂದು ಸಮತಾವಾದ. ಎಪ್ಪತ್ತರ ದಶಕದ ಆರಂಭದ ಆ ದಿನಗಳಲ್ಲಿ ನಾವು ಕೆಲವು ಯುವಕರು ಮಾರ್ಕ್ಸ್‌ವಾದದ ಪಾಠ ಕೇಳಲು ಬಿಜಾಪುರದ ಲಕ್ಷ್ಮೀಗುಡಿ ರಸ್ತೆಯಲ್ಲಿದ್ದ ಅವರ 'ಸಂಗೀತ ಸಾಧನಾ'ಕ್ಕೆ ಹೋಗುತ್ತಿದ್ದವು. ಹಾಗೆ ಹೋದಾಗಲೆಲ್ಲಾ ತಮ್ಮ ಸಂಗೀತ ಪಾಠ ಮುಗಿಸಿ ಅವರು ನಮ್ಮೊಂದಿಗೆ ಮಾತಿಗೆ ಕುಳಿತುಕೊಳ್ಳುತ್ತಿದ್ದರು. ಅನೇಕ ಬಾರಿ ಗೋಳಗುಮ್ಮಟದ ಬಳಿ ಇರುವ ಉದ್ಯಾನಕ್ಕೂ ಕರೆದುಕೊಂಡು ಹೋಗಿ ಅತ್ಯಂತ ಭಾವುಕರಾಗಿ ವರ್ಗಸಂಘರ್ಷದ ಪಾಠ ಹೇಳಿಕೊಡುತ್ತಿದ್ದರು.

ಈ ನರಸಿಂಗರಾವ್ ಕುಲಕರ್ಣಿಯವರು ಮಾತಿನ ನಡುವೆ ಆಗಾಗ್ಗೆ ಭೀಮಸೇನ್ ಜೋಶಿಯವರ ಬಗ್ಗೆ ಪ್ರಸ್ತಾಪಿಸುತ್ತಿದ್ದರು. ಜೋಶಿಯವರ ಶಿಷ್ಯ ಮಾಧವ ಗುಡಿ ಅವರ ಜೊತೆಗೆ ಇವರಿಗೆ ಒಡನಾಟವಿತ್ತು. ಜೋಶಿಯವರನ್ನು ಭೇಟಿಯಾಗಿದ್ದಾಗಿ ಹೇಳುತ್ತಿದ್ದರು. ಹೀಗೆ ಸಮತಾವಾದದ ಪಾಠ ಕೇಳಲು ಹೋದ ನಾವು ಅಲ್ಪಸ್ವಲ್ಪ ಮಾರ್ಕ್ಸ್‌ವಾದದ ಜೊತೆಗೆ ಸಂಗೀತದಲ್ಲೂ ಆಸಕ್ತಿ ಬೆಳೆಸಿಕೊಂಡೆವು. ಮುಂದೆ ನಾನು 'ಸಂಯುಕ್ತ ಕರ್ನಾಟಕ'ದಲ್ಲಿ ಕೆಲಸಕ್ಕೆ ಸೇರಿ ಹುಬ್ಬಳ್ಳಿಗೆ ಬಂದೆ.

ಹುಬ್ಬಳ್ಳಿಗೆ ಬಂದನಂತರ ಭೀಮಸೇನ ಜೋಶಿಯವರನ್ನು ಕಾಣುವ ಅನೇಕ ಸಂದರ್ಭಗಳು ಬಂದವು. ಒಮ್ಮೆ ಅವರು ಧಾರವಾಡಕ್ಕೆ ಬಂದಾಗ ಭೇಟಿ ಮಾಡಿ ಪರಿಚಯಿಸಿಕೊಂಡೆ. ಸಂಯುಕ್ತ ಕರ್ನಾಟಕದಲ್ಲಿ ಕೆಲಸ ಮಾಡುತ್ತಿದ್ದೇನೆ ಎಂದು ಹೇಳಿದಾಗ ತುಂಬ ಹೆಮ್ಮೆಪಟ್ಟುಕೊಂಡರು. ''ರಾಯರು ಹೇಗಿದ್ದಾರೆ'' ಎಂದು ಕೇಳಿದರು. ಅವರು ಕೇಳಿದ್ದು ರಂಗರಾವ್ ದಿವಾಕರರ ಬಗ್ಗೆ. ಪತ್ರಿಕೆ ಹೇಗಿದೆಯೆಂದು ಕೇಳುತ್ತಿದ್ದರು. ಇನ್ನೊಮ್ಮೆ ಬೆಂಗಳೂರಿನಲ್ಲಿ ಕೆನರಾ ಬ್ಯಾಂಕ್ ಅಧಿಕಾರಿಗಳ ಸಂಘ ಏರ್ಪಡಿಸಿದ್ದ ಕಾರ್ಯಕ್ರಮಕ್ಕೆ ಬಂದಿದ್ದ ಅವರು ಪಂಚತಾರಾ ಹೋಟೆಲು ಒಂದರಲ್ಲಿ ಸಂಗೀತ ಕಾರ್ಯಕ್ರಮ ನೀಡಿದರು. ಆಗಲೂ ಅವರನ್ನು ಭೇಟಿ ಮಾಡಿದ್ದೆ. ಹೀಗೆ ಅನೇಕ ಬಾರಿ ಭೇಟಿ ಮಾಡಿದಾಗಲೂ ನಾನು ಅವರಲ್ಲಿ ಗುರುತಿಸಿದ್ದು ಸರಳತೆ ಮತ್ತು ಸಜ್ಜನಿಕೆ. ಜಾಗತಿಕ ಮಟ್ಟದ ಈ ಮಹಾನ್ ಸಂಗೀತಗಾರ ನನ್ನಂತಹ ಯುವಕನೊಂದಿಗೆ ಮಾತನಾಡುವಾಗಲೂ ಉತ್ತರ ಕರ್ನಾಟಕದ ಆಡುಭಾಷೆಯಲ್ಲೇ ಅತ್ಯಂತ ಗೌರವದಿಂದಲೇ ಮಾತನಾಡುತ್ತಿದ್ದರು. ಅಯೋಧ್ಯೆ ಘಟನೆಯ ನಂತರ ಒಮ್ಮೆ ಧಾರವಾಡದಲ್ಲಿ ಸಿಕ್ಕಿದಾಗ ಆ ಬಗ್ಗೆ ಕೇಳಿದೆ. ''ಅದು ಸ್ವಾದಗೇಡಿಗಳ ಕೆಲಸ'' (ಅವಿವೇಕಿಗಳು) ಎಂದು ಉತ್ತರ ಕರ್ನಾಟಕ ಭಾಷೆಯಲ್ಲಿ ಹೇಳಿ ನಕ್ಕುಬಿಟ್ಟರು.

ಒಮ್ಮೆ ಭೇಟಿಯಾದಾಗ ''ನೀವು ಕರ್ನಾಟಕ ಬಿಟ್ಟು ಪುಣೆಯಲ್ಲಿ ಏಕೆ ಹೋಗಿ ನೆಲೆಸಿದ್ದೀರಿ ?'' ಎಂದು ಕೇಳಿದಾಗ ''ಅಲ್ಲಿ ಅವಕಾಶ ಸಿಕ್ಕಿತು ಹೋದೆ. ನನ್ನ ಶರೀರ ಪುಣೆಯಲ್ಲಿದ್ದರೂ ನನ್ನ ಜೀವ ಧಾರವಾಡದಲ್ಲಿದೆ'' ಎಂದು ಜೋಶಿ ಹೆಮ್ಮೆಯಿಂದ ಹೇಳಿಕೊಂಡರು. ಇಂತಹ ಮಹಾನ್ ಸಂಗೀತಗಾರ ಮತ್ತೊಮ್ಮೆ ಬರಲು ಸಾಧ್ಯವಿಲ್ಲ. ಉಸ್ತಾದ ಕರೀಮ್ ಖಾನರಂತೆ ಹಾಡುವುದು ಕರೀಮ್ ಖಾನರಿಂದ ಮಾತ್ರ ಸಾಧ್ಯ ಎಂದು ಭೀಮಸೇನ್ ಜೋಶಿ ಆಗಾಗ ಹೇಳುತ್ತಿದ್ದರು. ಅದೇ ರೀತಿ ಜೋಶಿಯವರಂತೆ ಹಾಡಬೇಕಾದರೆ ಮತ್ತೆ ಜೋಶಿಯವರೇ ಹುಟ್ಟಿಬರಬೇಕು.

**ಸನತ್‌ಕುಮಾರ ಬೆಳಗಲಿ**

ಎಲ್.ಎಫ್. ೧೭/೬, ಬಿಡಿಎ ಫ್ಲ್ಯಾಟ್ಸ್, ಬಿ.ಟಿ.ಎಮ್. ಲೇಔಟ್, ಬೆಂಗಳೂರು - ೫೬೦ ೦೭೬



# ದೇಶದ ಎಲ್ಲ ನೈಸರ್ಗಿಕ ಸಂಪತ್ತು ಜನತೆಗೆ ಸೇರಿದುದು

## ನ್ಯಾ. ಮೂ. ಸುದರ್ಶನ ರೆಡ್ಡಿ

ಈಚೆಗೆ ನೈಸರ್ಗಿಕ ಸಂಪನ್ಮೂಲಗಳು, ಅವುಗಳ ಒಡೆತನ ಹಾಗೂ ನಿರ್ವಹಣೆಗೆ ಸಂಬಂಧಿಸಿ ಸರ್ವೋಚ್ಚ ನ್ಯಾಯಾಲಯದ ಮುಂದೆ ಒಂದು ಮೊಕದ್ದಮೆ ದಾಖಲಾಗಿದ್ದಿತು. ರಿಲಯನ್ಸ್ ಇಂಡಸ್ಟ್ರೀಸ್ ಲಿಮಿಟೆಡ್ (ಆರ್‌ಐಎಲ್) ಮತ್ತು ರಿಲಯನ್ಸ್ ನ್ಯಾಚುರಲ್ ರಿಸೋರ್ಸಸ್ ಲಿಮಿಟೆಡ್ (ಆರ್‌ಎನ್‌ಆರ್‌ಎಲ್) ಸಂಸ್ಥೆಗಳ ನಡುವೆ ನೈಸರ್ಗಿಕ ಅನಿಲ ಸಂಪತ್ತಿನ ಒಡೆತನ ನಿರ್ವಹಣೆಗೆ ಸಂಬಂಧಿಸಿದುದಾಗಿದ್ದತು ಆ ಮೊಕದ್ದಮೆ. ಅದರ ವಿಚಾರಣೆಯ ಸಮಯದಲ್ಲಿ ಭಾರತ ಸರಕಾರದ ಪ್ರತಿನಿಧಿಯು ಮುಂದಿಟ್ಟ ವಾದವೂ ಈ ವಿಷಯದಲ್ಲಿ ಸರ್ವೋಚ್ಚ ನ್ಯಾಯಾಲಯ ಅಂತಿಮವಾಗಿ ನೀಡಿದ ತೀರ್ಪೂ ಗಮನಾರ್ಹವಾಗಿವೆ.

ನೈಸರ್ಗಿಕ ಸಂಪನ್ಮೂಲಗಳು ರಾಷ್ಟ್ರಕ್ಕೆ ಸೇರಿದ ಸ್ವತ್ತು. ಅವನ್ನು ಯಾವ ರೀತಿ ನಿರ್ವಹಿಸಬೇಕು ಎಂಬುದು ಭಾರತ ಸರಕಾರಕ್ಕೆ ಸೇರಿದ ಸಂಗತಿ. ಅವನ್ನು ಖಾಸಗಿ ಒಡೆತನದ ಸಂಸ್ಥೆಗಳು ತಮ್ಮ ನಡುವಿನ ಸಮಾಲೋಚನೆಗಳ ಮೂಲಕ ನಿರ್ಧರಿಸುವುದು ಸಾಧ್ಯವಿಲ್ಲ. ಹಾಗಾಗಿ ಭಾರತ ಸರಕಾರ ನಿರ್ಧರಿಸಿದ ಬೆಲೆಗಳಿಗೆ ಖಾಸಗಿ ಗುತ್ತಿಗೆದಾರರೂ ಬದ್ಧರಾಗಿರಬೇಕು. ಅವರು ಅವುಗಳಿಗೆ ಸವಾಲು ಒಡ್ಡುವ ಹಾಗಿಲ್ಲ – ಸರ್ವೋಚ್ಚ ನ್ಯಾಯಾಲಯದ ಈ ತೀರ್ಪು ಗಮನಾರ್ಹ.

ಅನಿಲವು ಜನರಿಗೆ ಅತ್ಯಗತ್ಯವಾದ ಒಂದು ನೈಸರ್ಗಿಕ ಸಂಪನ್ಮೂಲ. ಅದಕ್ಕೆ ಆರ್‌ಐಎಲ್ ಅಥವಾ ಆರ್‌ಎನ್‌ಆರ್‌ಎಲ್ ಒಡೆಯರಾಗಲು ಸಾಧ್ಯವಿಲ್ಲ. ದೇಶದ ಜನರಿಗೆ ಅನುಕೂಲವಾಗುವಂತೆ ಬಳಸಲೋಸುಗ ಭಾರತ ಸರಕಾರವೇ ಅದನ್ನು ತನ್ನ ಕೈಗಳಲ್ಲಿ ನ್ಯಾಸವನ್ನಾಗಿ ಇರಿಸಿಕೊಂಡಿದೆ. ದೇಶದ ಸಂವಿಧಾನವೂ ಈ ಅಂಶವನ್ನು ಒತ್ತಿ ಹೇಳಿದೆ. ಇದಕ್ಕೆ ಸಂಬಂಧಿಸಿ ಪಬ್ಲಿಕ್ ಟ್ರಸ್ಟ್ ಡಾಕ್ಟ್ರಿನ್ (ಪಿಟಿಡಿ) ಎಂಬ ಒಂದು ಸಿದ್ಧಾಂತವೇ ರೂಪುಗೊಂಡಿದೆ. ಇದು ಭಾರತ ದೇಶದ ಶಾಸನ ವ್ಯವಸ್ಥೆಯ ಒಂದು ಭಾಗವೇ ಆಗಿದೆ. ಹಾಗಾಗಿ ನೈಸರ್ಗಿಕ ಸಂಪನ್ಮೂಲಗಳಿಗೆ ಸಂಪೂರ್ಣ ರಕ್ಷಣೆ ಒದಗಿಸುವುದು, ಅವು ಭಾರತೀಯ ಪ್ರಜೆಗಳಿಗೆ ಪ್ರಯೋಜನವಾಗುವ ರೀತಿಯಲ್ಲಿ ಬಳಸಲ್ಪಡುವುದನ್ನು ಖಚಿತಪಡಿಸುವುದು, ಭಾರತೀಯ ಜನರ ನ್ಯಾಸಧಾರಿಯಾದ ಭಾರತ ಸರಕಾರದ ಕರ್ತವ್ಯವಾಗಿದೆ. ಅನಿಲವನ್ನು ಗುತ್ತಿಗೆದಾರರ ವಶಕ್ಕೆ ನೀಡುವ ಮುನ್ನವೇ ಅದರ ಬೆಲೆಯನ್ನು ಭಾರತ ಸರಕಾರವೇ ನಿರ್ಧರಿಸತಕ್ಕುದೆಂದು ಸಂವಿಧಾನದ ಸೂತ್ರಗಳು ನಿರ್ದೇಶಿಸುತ್ತವೆ.

ಒಂದು ರಾಷ್ಟ್ರವಾಗಿ ಪರಿಗಣಿತರಾದ ಜನರೇ ದೇಶದ 'ನೈಸರ್ಗಿಕ ಸಂಪತ್ತು ಹಾಗೂ ಸಂಪನ್ಮೂಲ'ಗಳ ನಿಜವಾದ ಮಾಲೀಕರೆಂಬುದು ನ್ಯಾಯಶಾಸ್ತ್ರದ ಒಂದು ಸುಸ್ಥಾಪಿತ ನಿಯಮವಾಗಿದೆ. ಅನಿಲ ಬಳಕೆಗೆ ಸಂಬಂಧಿಸಿ ಭಾರತ ಸರಕಾರ ಗೊತ್ತುಪಡಿಸಿರುವ ನೀತಿಗನುಗುಣವಾಗಿಯಷ್ಟೆ ಗುತ್ತಿಗೆದಾರರು ತಮ್ಮ ಮಾರಾಟ ಸ್ವಾತಂತ್ರ್ಯವನ್ನು ಚಲಾಯಿಸಲು ಸಾಧ್ಯ.

ನೈಸರ್ಗಿಕ ಸಂಪನ್ಮೂಲಗಳು ರಾಷ್ಟ್ರಕ್ಕೆ ಸೇರಿದ ಸ್ವತ್ತು. ಅವನ್ನು ಯಾವ ರೀತಿ ನಿರ್ವಹಿಸಬೇಕು ಎಂಬುದು ಭಾರತ ಸರಕಾರಕ್ಕೆ ಸೇರಿದ ಸಂಗತಿ. ಅವನ್ನು ಖಾಸಗಿ ಒಡೆತನದ ಸಂಸ್ಥೆಗಳು ತಮ್ಮ ನಡುವಿನ ಸಮಾಲೋಚನೆಗಳ ಮೂಲಕ ನಿರ್ಧರಿಸುವುದು ಸಾಧ್ಯವಿಲ್ಲ. ಹಾಗಾಗಿ ಭಾರತ ಸರಕಾರ ನಿರ್ಧರಿಸಿದ ಬೆಲೆಗಳಿಗೆ ಖಾಸಗಿ ಗುತ್ತಿಗೆದಾರರೂ ಬದ್ಧರಾಗಿರಬೇಕು. ಅವರು ಅವುಗಳಿಗೆ ಸವಾಲು ಒಡ್ಡುವ ಹಾಗಿಲ್ಲ – ಸರ್ವೋಚ್ಚ ನ್ಯಾಯಾಲಯದ ಈ ತೀರ್ಪು ಗಮನಾರ್ಹ.

ನ್ಯಾಷನಲ್ ಥರ್ಮಲ್ ಪವರ್ ಕಾರ್ಪೊರೇಷನ್ (ಎನ್‌ಟಿಪಿಸಿ) ೧೨.೦೫.೨೦೦೫ರ ''ಅನಿಲ ಮಾರಾಟ - ಕೊಳ್ಳಿಕೆ ಒಪ್ಪಂದದಲ್ಲೂ ಅನಿಲ ಪ್ರಮಾಣ ಅವಧಿ ಹಾಗೂ ಬೆಲೆಗೆ ಸಂಬಂಧಿಸಿ ಸರಕಾರದ ಸಮ್ಮತಿ ಅತ್ಯವಶ್ಯ'' ಎಂದು ಒತ್ತಿ ನುಡಿದಿದ್ದರೂ ಆರ್‌ಎನ್‌ಆರ್‌ಎಲ್ ಈಗ ಅನಿಲ ಸರಬರಾಜಿಗೆ ಸಂಬಂಧಿಸಿ ಸರಕಾರೀ ಸಮ್ಮತಿ ಅನವಶ್ಯ ಎಂದು ಹೇಳುವುದು ಎಷ್ಟು ಉಚಿತ ?

ಗುತ್ತಿಗೆದಾರ ಅನಿಲವನ್ನು ಮಾರಾಟ ಮಾಡುವ ಬೆಲೆಗೆ ಸರಕಾರದ ಸಮ್ಮತಿ ಅವಶ್ಯವೆಂದು ಉತ್ಪಾದನೆಯಲ್ಲಿ ಪಾಲ್ಗೊಳ್ಳಲು ಮಾಡಿಕೊಂಡ ಗುತ್ತಿಗೆಯೇ ತಿಳಿಸಿಲ್ಲವೇ ?

ಉತ್ಪಾದಿತ ಅನಿಲದ ವಿತರಣೆಯನ್ನು ನಿಯಂತ್ರಿಸುವ ಹಕ್ಕು ಸರಕಾರಕ್ಕೆ ಇದೆಯೆ ? ಯಾವ ವಿಭಾಗದಲ್ಲಿ ಯಾವ ಬಳಕೆದಾರರಿಗೆ ಆದ್ಯತೆ ನೀಡಬೇಕೆಂದು ಸರಕಾರ ಆರ್‌ಐಲ್‌ಗೆ ತಿಳಿಯಪಡಿಸಿರುವುದು ಸರಿಯೆ ?

ಅನಿಲ ಉತ್ಪಾದನೆ ಹಾಗೂ ಉಳಿಕೆಯಲ್ಲಿ ಪಾಲ್ಗೊಂಡ ಗುತ್ತಿಗೆದಾರ ತನ್ನ ಸ್ವಂತ ಇಚ್ಛೆಯ ಮೇರೆಗೆ ಅದನ್ನು ವ್ಯವಹರಿಸಬಹುದೆ ?

– ಇವೇ ಮುಂತಾದ ಪ್ರಶ್ನೆಗಳನ್ನು ಪರಿಶೀಲಿಸಿ ಸರ್ವೋಚ್ಚ ನ್ಯಾಯಾಲಯ ಸೂಕ್ತ ಉತ್ತರಗಳನ್ನು ನೀಡಿದೆ.

ಅನಿಲವು ಸರಬರಾಜು-ಸ್ಥಳ ತಲುಪುವವರೆಗೂ ಸರಕಾರೀ ಸ್ವತ್ತಾಗಿರುವುದರಿಂದ ಆರ್‌ಪಿಎಲ್ ಸಂಸ್ಥೆಯು ನಿರ್ದಿಷ್ಟ ಪ್ರಮಾಣದ ಅನಿಲ ಸರಬರಾಜು ಮಾಡುವುದಾಗಿ ಆರ್‌ಎನ್‌ಆರ್‌ಎಲ್ ಸಂಸ್ಥೆಯೊಂದಿಗೆ, ಸರಕಾರೀ ಅನುಮತಿ ಇಲ್ಲದೆ, ಒಪ್ಪಂದ ಮಾಡಿಕೊಳ್ಳಲಾಗದು. ನೈಸರ್ಗಿಕ ಅನಿಲವು ವಿಧಿ ೩೯(ಬಿ) ಪ್ರಕಾರ ಒಂದು ವಸ್ತುಕ ಸಂಪನ್ಮೂಲ.

ಸ್ಪಷ್ಟವಾಗಿ ಹೇಳುವುದಾದರೆ, ಅನಿಲ ಬಳಕೆ ನೀತಿಗೆ ಅನುಗುಣವಾಗಿಯೂ ಉತ್ಪಾದನೆಯಲ್ಲಿ ಪಾಲ್ಗೊಳ್ಳುವ ಕರಾರಿಗೆ (ಪಿಎಸ್‌ಸಿ) ತಕ್ಕಂತೆಯೂ ಭಾರತದ ಕಾರ್ಯಾಕಾರಿ ಶಕ್ತಿಯಾಗಿ ಕೇಂದ್ರ ಸರಕಾರವು ನೈಸರ್ಗಿಕ ಅನಿಲದ ಮಾರಾಟ ಹಾಗೂ ಹಂಚಿಕೆಯ ವಿಧಾನವನ್ನು ನಿಯಂತ್ರಿಸಬಲ್ಲುದು; ದೇಶದ ಹಿತಕ್ಕೆ ಅತ್ಯುತ್ತಮವಾಗಿ ಸರಿ ಹೊಂದುವಂತೆ ಮಾರಾಟ-ಪಾಲುಗಳನ್ನು ಹಂಚಬಲ್ಲುದು, ಮಾರಾಟ-ಪ್ರಮಾಣಗಳನ್ನು ನಿಗದಿಪಡಿಸಬಲ್ಲುದು.

ಅನಿಲದ ಮೌಲ್ಯ ನಿರ್ಧರಿಸುವ ಸೂತ್ರಕ್ಕೆ ಸಂಬಂಧಿಸಿಯೂ ಬೆಲೆಗೆ ಸಂಬಂಧಿಸಿಯೂ ಸೂಕ್ತ ನಿರ್ಧಾರ ಕೈಗೊಳ್ಳುವಲ್ಲಿ ಸರಕಾರವು ಸ್ವತಂತ್ರವಾಗಿರುವುದೇ ನೀತಿಬದ್ಧವಾದುದು. ಆದ್ದರಿಂದ, ಮೇಲಿನ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಹೇಳುವುದಾದರೆ, ವಿದ್ವನ್ಮಾನ್ಯ ಸಾಲಿಸಿಟರ್ ಜನರಲ್ ಅವರು ಸುಸ್ಪಷ್ಟವಾಗಿ ತಿಳಿಸಿಕೊಟ್ಟಿರುವಂತೆ, ಉತ್ಪಾದನೆಯಲ್ಲಿ ಪಾಲ್ಗೊಳ್ಳುವ ಕರಾರಿಗೆ (ಪಿಎಸ್‌ಸಿ) ಸಂಬಂಧಿಸಿದಂತೆ ಸರಕಾರದ ವ್ಯಾಖ್ಯಾನ ಔಚಿತ್ಯಪೂರ್ಣವಾಗಿದೆ. ಹಾಗಾಗಿ ಪಿಎಸ್‌ಸಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅನಿಲದ ಮೌಲ್ಯ ಹಾಗೂ ಬೆಲೆ ನಿರ್ಣಯಿಸುವ ಪೂರ್ಣ ಅಧಿಕಾರ ಸರಕಾರಕ್ಕಿದೆ.

ಸರಕಾರವು ಅನುಮೋದಿಸಿದ ಬೆಲೆ ಸೂತ್ರಕ್ಕೆ ಅನುಗುಣವಾಗಿಯಷ್ಟೆ, ಅನಿಲ ಬಳಕೆಯ ನೀತಿಗನುಗುಣ ವಾಗಿಯಷ್ಟೆ, ಅನಿಲವನ್ನು ಮಾರಾಟ ಮಾಡುವುದು ಸಾಧ್ಯ. ಬಳಕೆದಾರರನ್ನು ತಲಪುವವರೆಗೂ ಸರಕಾರವೇ ಅನಿಲದ ಮಾಲೀಕನಾಗಿರುತ್ತದೆ. ನೈಸರ್ಗಿಕ ಸಂಪನ್ಮೂಲಗಳು ರಾಷ್ಟ್ರೀಯ ಸ್ವತ್ತು. ಇವು ಭಾರತ ಸರಕಾರದ ಸುಪರ್ದಿನಲ್ಲಿರುತ್ತವೆ. ಇವನ್ನು ಹೇಗೆ ನಿರ್ವಹಿಸಬೇಕೆಂಬುದನ್ನು ಯಾವುದೇ ಪಕ್ಷ ಖಾಸಗಿ ಸಂಧಾನಗಳ ಮೂಲಕ ನಿರ್ಧರಿಸುವುದು ಸಾಧ್ಯವಿಲ್ಲ. ಭಾರತ ಸರಕಾರ ನಿರ್ಧರಿಸಿದ ಬೆಲೆಗಳಿಗೇ ಎಲ್ಲ ಗುತ್ತಿಗೆದಾರರೂ ಬದ್ಧರಾಗಿರಬೇಕು. ಯಾವ ಪಕ್ಷವೂ ಇದರ ವಿರುದ್ಧ ಸವಾಲು ಎತ್ತುವಂತಿಲ್ಲ.

ಸಂವಿಧಾನ ನಿರ್ದೇಶಿಸಿರುವಂತೆ ದೇಶದ ನೈಸರ್ಗಿಕ ಸಂಪನ್ಮೂಲಗಳು ದೇಶದ ಜನರ ಸ್ವತ್ತು. ಇಡೀ ದೇಶದ ಜನರು ನೈಸರ್ಗಿಕ ಅನಿಲದ ನಿರ್ವಾಹಕರು. ಅದರ ಬಳಕೆ ಇಡೀ ದೇಶಕ್ಕೆ ಪ್ರಯೋಜನಕಾರಿಯಾಗಿರಬೇಕು.

ವಾಯು, ಸಮುದ್ರ, ನೀರು, ಕಾಡುಗಳು ಮುಂತಾದ ಸಂಪನ್ಮೂಲಗಳು ಇಡೀ ಜನತೆಗೆ ಅತ್ಯಂತ ಅವಶ್ಯಕವಾದವುಗಳು. ಅವನ್ನು ಖಾಸಗಿ ಒಡೆತನಕ್ಕೆ ಒಳಪಡಿಸುವುದು ಎಷ್ಟು ಮಾತ್ರವೂ ಸಮರ್ಥನೀಯವಲ್ಲ. ಸರಕಾರವು ಈ ಸಂಪನ್ಮೂಲಗಳನ್ನು ಸಾರ್ವಜನಿಕರ ಬಳಕೆಗಾಗಿ ಸಂರಕ್ಷಿಸಬೇಕೇ ಹೊರತು ಅವನ್ನು ಖಾಸಗಿ ಒಡೆತನಕ್ಕೆ ಒಳಪಡಿಸಲಾಗದು ಅಥವಾ ವಾಣಿಜ್ಯೋದ್ದೇಶ ಗಳಿಗಾಗಿ ಬಳಸಲಾಗದು.

ನಮ್ಮ ನ್ಯಾಯಾಂಗ ವ್ಯವಸ್ಥೆಯು ಆಂಗ್ಲರ ಸಾಮಾನ್ಯ ಶಾಸನದ ಮೇಲೆ ಆಧರಿತವಾದುದು. ಅದರ ಪ್ರಕಾರ ರಾಜ್ಯವೇ ಎಲ್ಲ ನೈಸರ್ಗಿಕ ಸಂಪನ್ಮೂಲಗಳ ನ್ಯಾಸಧಾರಿ. ಈ ಸಂಪನ್ಮೂಲಗಳು ಸ್ವಭಾವತಃ ಸಾರ್ವಜನಿಕ ಬಳಕೆಗೆ ಹಾಗೂ ಉಪಭೋಗಕ್ಕೆ ಮೀಸಲಾದುವು. ರಾಜ್ಯವು ಅವನ್ನು ಸಾರ್ವಜನಿಕರ ಪ್ರಯೋಜನಾರ್ಥ ಸಂರಕ್ಷಿಸ ಬೇಕು. ಅದು ರಾಜ್ಯದ ಕರ್ತವ್ಯ.

ಭಾರತ ಸಂವಿಧಾನದ ಪ್ರಕಾರ ಅನಿಲ ನಿಕ್ಷೇಪಗಳ ಅನ್ವೇಷಣೆ, ಹೊರತೆಗೆಯುವಿಕೆ ಹಾಗೂ ಸರಬರಾಜು ಸರಕಾರದ ಕರ್ತವ್ಯಗಳ ಕೆಳಗೆ ಬರುತ್ತವೆ. ಆದರೆ ಇವಕ್ಕಾಗಿ ಸರಕಾರದ ಬಳಿ ಸಾಕಷ್ಟು ನಿಧಿ ಇರದಿದ್ದಾಗ ಅವನ್ನು ಖಾಸಗಿ ಸಂಸ್ಥೆಗಳಿಗೆ ವಹಿಸಿಕೊಟ್ಟಿರಲಾಗಿದೆ. ಆದರೂ ಈ ಖಾಸಗಿ ಸಂಸ್ಥೆಗಳು ಸರಕಾರಕ್ಕೆ ಜವಾಬ್ದಾರಿಯುತ ವಾಗಿರಬೇಕು. ಈ ಕಾರ್ಯ ನಿರ್ವಹಣೆಯಲ್ಲಿ ಸರಕಾರ ಯಾವ ಸೂತ್ರಗಳಿಗೆ ಬದ್ಧವಾಗಿರಬೇಕೋ ಖಾಸಗೀ ಸಂಸ್ಥೆಗಳೂ ಅವೇ ಸೂತ್ರಗಳಿಗೆ ಬದ್ಧವಾಗಿರಬೇಕು. ನೈಸರ್ಗಿಕ ಸಂಪನ್ಮೂಲಗಳನ್ನು ಯಾವತ್ತೂ ಸಾರ್ವಜನಿಕ ಹಿತಕ್ಕಾಗಿ ಬಳಸಬೇಕೇ ಹೊರತು ಎಂದಿಗೂ ಖಾಸಗಿ ಹಿತರಕ್ಷಣೆಗೆ ಬಳಸಲಾಗದು.

ನಮ್ಮ ರೀತಿಯ ಸಂವಿಧಾನಾತ್ಮಕ ಪ್ರಜ್ಞಾಪ್ರಭುತ್ವದಲ್ಲಿ ರಾಷ್ಟ್ರೀಯ ಸ್ವತ್ತುಗಳು ಜನರಿಗೆ ಸೇರಿದವು. ಸರಕಾರವು ನ್ಯಾಸಧಾರಿಯಷ್ಟೆ. ಅದು ಅಂತಹ ಸ್ವತ್ತುಗಳನ್ನು ಜನಹಿತಕ್ಕಾಗಿ ವಿಕಾಸಗೊಳಿಸಬೇಕು. ಪ್ರಸಕ್ತ ಪ್ರಸಂಗದಲ್ಲಿ ಅನಿಲವು ಬಳಕೆದಾರನನ್ನು ತಲುಪುವವರೆಗೂ ಸರಕಾರದ ಒಡೆತನದಲ್ಲಿರುತ್ತದೆ. ಸರಕಾರಕ್ಕೂ ಖಾಸಗಿ ಗುತ್ತೇದಾರರ ನಡುವೆಯೂ ಪಿಎಸ್‌ಸಿ ವ್ಯವಸ್ಥೆಯ ಪ್ರಕಾರ ಕೆಲವು ನಿಯಮಬದ್ಧ ಕರ್ತವ್ಯಗಳು ನಮೂದಿತವಾಗಿರುತ್ತವೆ.

ಈಚೆಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ತೀರ್ಪು ನೀಡುತ್ತ ನ್ಯಾಯಮೂರ್ತಿ ಬಿ. ಸುದರ್ಶನ ರೆಡ್ಡಿಯವರೂ ಮೇಲಿನ ಅಂಶ ಗಳನ್ನು ತುಂಬ ಪರಿಣಾಮಕಾರಿಯಾಗಿ ಸಮರ್ಥಿಸಿದ್ದಾರೆ.

''ರಾಜಕೀಯ ಪ್ರಜಾಪ್ರಭುತ್ವವು ಸಾಮಾಜಿಕ ಪ್ರಜಾಪ್ರಭುತ್ವದ ಬುನಾದಿ ಇಲ್ಲದೆ ಇರಲಾಗದು... ಭಾರತದಲ್ಲಿ ಪ್ರಸ್ತುತದಲ್ಲಿ ನಮ್ಮ ಸಮಾಜವು ಅಸಮಾನತೆಯ ಸೂತ್ರ ಅನುಸರಿಸುತ್ತಿದೆ. ಒಂದು ಕಡೆ ಅಪಾರ ಸಂಪತ್ತಿನ ಐಶ್ವರ್ಯವಂತರಿದ್ದಾರೆ. ಇನ್ನೊಂದೆಡೆ ಕಡು ಬಡತನದ ಜನರಿದ್ದಾರೆ. ಈ ವೈರುಧ್ಯವನ್ನು ನಾವು ಎಲ್ಲಿತನಕ ಸಹಿಸಿ ಕೊಂಡಿರಬೇಕು ? ನಮ್ಮ ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಎಲ್ಲಿತನಕ ಸಮಾನತೆಯನ್ನು ನಿರಾಕರಿಸುತ್ತ ಹೋಗಲು ಸಾಧ್ಯ ? ಸಮಾನತೆಯನ್ನು ದೀರ್ಘಕಾಲ ನಿರಾಕರಿಸುತ್ತ ಹೋದರೆ

ರಾಜಕೀಯ ಪ್ರಜಾಸತ್ತೆ ಸಂಕಷ್ಟಕ್ಕೊಳಗಾಗುತ್ತದೆ. ಈ ವೈರುಧ್ಯವನ್ನು ಆದಷ್ಟು ಬೇಗ ತೊಡೆದು ಹಾಕದಿದ್ದಲ್ಲಿ ಅಸಮಾನತೆಯಿಂದ ಕಷ್ಟಕ್ಕೊಳಗಾಗಿರುವವರು ರಾಜಕೀಯ ಪ್ರಜಾಸತ್ತೆಯನ್ನೇ ಧ್ವಂಸ ಮಾಡಿಬಿಡಬಹುದು'' ಎಂಬ ಡಾ॥ ಅಂಬೇಡ್ಕರ್ ಅವರ ಮಾತುಗಳು ಇಲ್ಲಿ ಉಲ್ಲೇಖನಾರ್ಹ.

ಲಿಖಿತ ಸಂವಿಧಾನವೊಂದಿದ್ದರಷ್ಟೆ ಸಾಲದು. ಅದನ್ನು ಆಚರಣೆಯಲ್ಲಿ ಜಾರಿಗೆ ತರುವ ಜನರೂ ಪ್ರಾಮಾಣಿಕರಾಗಿರಬೇಕು. ಧ್ಯೇಯ ಆದರ್ಶಗಳನ್ನು ಸಾಧಿಸುವಲ್ಲಿ ನಮ್ಮ ಸಂಸ್ಥೆಗಳ ನ್ಯಾಯನಿಷ್ಠೆಯನ್ನು ಪರಿಶೀಲಿಸಲು ಸಂವಿಧಾನವನ್ನು ಒಂದು ಮಸೂರವನ್ನಾಗಿ ಬಳಸಬೇಕು.

ರಾಜ್ಯದಲ್ಲಿ ಅಡಗಿರುವ ಶಕ್ತಿ ಎಲ್ಲ ಜನರ ಶಕ್ತಿ, ಕೇವಲ ಕೆಲವೇ ಶ್ರೀಮಂತರ ಶಕ್ತಿಯಲ್ಲ. ಈ ಶಕ್ತಿಯು ಸಂವಿಧಾನದ ಗುರಿಗಳ ಪೂರೈಕೆಗೆ ಬಳಕೆಯಾಗಬೇಕು. ಅದು ಸಮಸ್ತ ಜನರ ಹಿತರಕ್ಷಣೆಗೆ ಬಳಕೆಯಾಗದೆ ಕೆಲವೇ ಜನರ ಪ್ರಯೋಜನಾರ್ಥ ಬಳಕೆಯಾದರೆ ರಾಜ್ಯದ ಪರಿಣಾಮಕಾರಿ ಕಾರ್ಯಶೀಲತೆ ಕುಂದಿದಂತೆ ಆಗುತ್ತದೆ. ಇತಿಹಾಸ-ಜ್ಞಾನ ಇರುವ ಹಾಗೂ ಅದರಿಂದ ಕಲಿಯುವ ಮನೋಧರ್ಮವುಳ್ಳ ಜನ ಅವಶ್ಯವಾಗಿಯೇ ಇಂದಿನ ಪರಿಸ್ಥಿತಿಯ ಬಗೆಗೆ ಮತ್ತು ಅದರ ಸಂಭಾವ್ಯ ಭವಿಷ್ಯತ್ತಿನ ಬಗೆಗೆ ಕಾಳಜಿ ಹೊಂದಿರುವುದು ಸಹಜವೇ.

ಜೀವನದ ಎಲ್ಲ ವಲಯಗಳಲ್ಲೂ ಸ್ವಾತಂತ್ರ್ಯ, ಸಮಾನತೆ ಮತ್ತು ನ್ಯಾಯಪರತೆಗಳನ್ನು ಖಚಿತಪಡಿಸುವುದನ್ನೇ ಗುರಿಯಾಗುಳ್ಳ ಸಂವಿಧಾನವು ಸಾಮೂಹಿಕ ಮಾನವ ಪ್ರಜ್ಞೆಯ ಸಾರಭೂತ ಸುಸ್ಪಷ್ಟ ಅಭಿವ್ಯಕ್ತಿಯಾಗಿದೆ. ಇದನ್ನು ಮಿತಿಗೊಳಿಸುವ ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳನ್ನು ನಿವಾರಿಸುವುದು ರಾಜ್ಯದ ಪರಮ ಕರ್ತವ್ಯವಾಗಿರಬೇಕು. ಈ ಕರ್ತವ್ಯ ನಿರ್ವಹಣೆಯಲ್ಲಿ ಹಾಗೂ ವೈರುಧ್ಯಗಳ ನಿವಾರಣೆಯಲ್ಲಿ ರಾಜ್ಯ ಅನಾದರ ತೋರಿದಲ್ಲಿ ಕ್ಷಿಪ್ರದಲ್ಲೇ ಸ್ಫೋಟಕ ಪರಿಸ್ಥಿತಿ ಉಲ್ಬಣಿಸುವುದು ಖಚಿತ ಎಂಬುದು ಸ್ವಾತಂತ್ರ್ಯ ಹೋರಾಟದ ಆರಂಭ ದಿನಗಳಲ್ಲೇ ಮಾನ್ಯಗೊಂಡಿದ್ದಿತು.

ಸರ್ವಜನರ ವಿಶಾಲ ಒಳಿತಿನ ಸಾಧನೆಗಾಗಿ ಬಿಡಿ ವ್ಯಕ್ತಿಗಳ ತರ್ಕಬದ್ಧ ಮೂಲಭೂತ ಹಕ್ಕುಗಳನ್ನೂ ನ್ಯಾಯಯುತವಾಗಿ ಮೊಟಕುಗೊಳಿಸುವ ಸ್ವಾತಂತ್ರ್ಯ ಮತ್ತು ಅಧಿಕಾರವನ್ನು ರಾಜ್ಯಕ್ಕೆ ನೀಡಲಾಗಿದೆ. ದೇಶದ ಸಂಪತ್ತನ್ನು ಪರಿಣಾಮಕಾರಿಯಾಗಿ ಪುನರ್ ಹಂಚಿಕೆ ಮಾಡಲು, ವಸ್ತು ಸಂಪನ್ಮೂಲಗಳು ಎಲ್ಲರಿಗೂ ಸಮಾನವಾಗಿ ದೊರೆಯುವಂತೆ ಮಾಡಲು, ಸಾಮಾಜಿಕ-ಆರ್ಥಿಕ ಶಾಸನ ಮಾಡುವುದು ರಾಜ್ಯದ ಕರ್ತವ್ಯವಾಗಿದೆ. ರಾಜ್ಯವು ಈ ಅಧಿಕಾರ ಮತ್ತು ಸವಲತ್ತುಗಳನ್ನು ದುರ್ಬಳಕೆ ಮಾಡಬಾರದಷ್ಟೆ.

ಸಂವಿಧಾನಾತ್ಮಕ ಪ್ರಜಾಪ್ರಭುತ್ವವಾಗಿ ಬೆಳೆಯುವ ಭಾರತದ ಈ ಪ್ರಯೋಗ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎಂಬ ಬಗೆಗೆ ವಿದ್ವಾಂಸರ ನಡುವೆ, ಅದರಲ್ಲೂ ಪಾಶ್ಚಿಮಾತ್ಯ ದೇಶಗಳಲ್ಲಿ, ಕಾಳಜಿ ಉಂಟಾಗಿರುವುದು ಸಹಜವೇ. ಆದರೂ ಸ್ವಾತಂತ್ರ್ಯದ ಈ ಏಳನೆಯ ದಶಕದಲ್ಲಿ, ಒಂದು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಪ್ರಜಾಸತ್ತಾತ್ಮಕ ಗಣತಂತ್ರವಾಗಿ ಸಂವಿಧಾನ ರೂಪಿಸಿಕೊಂಡಿರುವ ಈ ಅರವತ್ತು ವರ್ಷಗಳಲ್ಲಿ ನಾವು ಸಾಕಷ್ಟು ಪ್ರಗತಿ ಸಾಧಿಸಿದ್ದೇವೆಂದೇ ಹೇಳಬಹುದು. ಇದಕ್ಕೆ ಸ್ವಲ್ಪಮಟ್ಟಿಗೆ ನಮ್ಮನ್ನು ಸರಿದಾರಿಯಲ್ಲಿ ಕರೆದೊಯ್ದ ಆರಂಭಿಕ ನಾಯಕತ್ವ ಕಾರಣವೆಂದು ಹೇಳಬಹುದಾದರೂ ಹೆಚ್ಚಿನ ಪ್ರಶಸ್ತಿ ಜನರಿಗೇ – ಪ್ರತಿ ಚುನಾವಣೆಯಲ್ಲೂ ಅಧಿಕ ಸಂಖ್ಯೆಯಲ್ಲಿ ಮತಗಟ್ಟೆಗಳಿಗೆ ತೆರಳುವ, ಬಾಳಿನಲ್ಲಿ ನಾನಾ ಸಂಕಷ್ಟಗಳು ತಲೆದೋರಿದರೂ ಪ್ರಜಾಪ್ರಭುತ್ವದ ಮೂಲಸೂತ್ರಗಳಲ್ಲಿ ನಂಬಿಕೆಯನ್ನು ಇರಿಸಿಕೊಂಡಿರುವ ಜನರಿಗೇ – ಸಲ್ಲಬೇಕು. ಜನರ ಸಂಕಷ್ಟಗಳನ್ನು ದೂರಮಾಡಲು ರಾಜ್ಯ ಕೈಗೊಂಡ ಯತ್ನಗಳನ್ನೆಲ್ಲ ಕೇವಲ ಜನಾನುರಾಗ ಗಳಿಕೆಯ ಯತ್ನಗಳೆಂದು ದೇಶದ ಕೆಲವು ಗಣ್ಯ ಜನರು ವಿವರಿಸುತ್ತಿರುವುದೂ ಇಂದಿನ ಒಂದು ವಿಪರ್ಯಾಸವಾಗಿದೆ.

## ಹಕ್ಕಿಗಳಿಗೆ ವೀಸಾ ಕೊಟ್ಟವರ್ಯಾರು



ತಲೆ ಮೇಲೆ ಗ್ರೀನ್‌ವಿಚ್ ಪಟ್ಟಿ,
ಎರಡು ಹುಣ್ಣಿಮೆ ಕಣ್ಣುಗಳು,
ರೆಕ್ಕೆ ಪೂರ್ವ ಪಶ್ಚಿಮ ದಿಕ್ಕು -
ಧ್ರುವಗಳ ಅಣಕಿಸುವ ಬಾಲದೊಂದಿಗೆ
ಕಣ್ಣುಗಳಲ್ಲಿ ಸೂರ್ಯನ ಬೆಳಕ ತುಂಬಿ,
ದಿಕ್ಕುಗಳಿಗೆ ಹಾರುವ ಹಕ್ಕಿಗಳ
ರೆಕ್ಕೆಗಳಲ್ಲಿ ಜಿಪಿಎಸ್ ಇಟ್ಟವರ್ಯಾರು ?

ಭೌಗೋಳಿಕ ಹದ್ದುಗಳಿಲ್ಲದೆ
ಕಾಲ ದೇಶಗಳ ಕೊಕ್ಕಿನಲ್ಲಿಡಿದು
ಗಾಳಿ ಬೆಳಕಿನೊಳಗೆ ತೂರಿ -
ಸಮಭಾಜಕ ಆಚೆ ಈಚೆ, ಉದ್ದಕ್ಕೂ -
ಉತ್ತರ ದಕ್ಷಿಣ ಧ್ರುವಗಳವರೆಗೂ;
ಹವಾಮಾನ ವೈಪರೀತ್ಯಗಳ ಮೀರಿ
ಸಾವಿರಾರು ಕಿ.ಮೀ. ದೂರ
ಒಂದೇ ಸಮನೇ ಹಾರುವ ಹಕ್ಕಿಗಳ
ಜುಟ್ಟಿನಲ್ಲಿ ಉತ್ತರಮುಖಿ ಇಟ್ಟವರ್ಯಾರು ?

ನಿತ್ಯ ಹರಿದ್ವರ್ಣ ಜಾಡುಗಳ ನೋಡುತ್ತ -
ಮರುಭೂಮಿಗಳ ಮೇಲೆ ಹಾರುತ್ತ ,
ಹಿಮಾಚ್ಛಾದಿತ ಪರ್ವತ ಶ್ರೇಣಿಗಳ ದಾಟಿ ಹೋಗುತ್ತ ;
ಪರಾಗಸ್ಪರ್ಶ, ಬೀಜ ಪ್ರಸಾರ ಮಾಡುವ
ಹಕ್ಕಿಗಳು ಯಾವ ಗುರುಕುಲದಲ್ಲಿ
ವಿದ್ಯಾಭ್ಯಾಸ ಮಾಡಿದವು ?

ಆಹಾರ ಹುಡುಕುತ್ತ -
ಜಲಚರ, ಕೀಟಗಳ ಕುಕ್ಕುತ್ತ
ಹಣ್ಣು ಹಂಪಲಗಳ ತಿನ್ನುತ್ತ
ಹಿತಕರ ಹವೆ ಅನುಭವಿಸುತ್ತ
ದೇಶ ಕಾಲ – ನಿಲ್ದಾಣಗಳಲ್ಲಿ ವಿಹರಿಸುತ್ತ
ಗೂಡು ಕಟ್ಟಿ ಸಂತಾನ ವೃದ್ಧಿಮಾಡುತ್ತ
ಕಳ್ಳಕಾಕರು, ಬೇಟೆಗಾರರಿಂದ
ಮರಿ ಹಕ್ಕಿಗಳ ರಕ್ಷಿಸುತ್ತ ದೇಶ ವಿದೇಶ
ಸುತ್ತಿ ಬರಲು ಹಕ್ಕಿಗಳಿಗೆ
ವೀಸಾ ನೀಡಿದವರ್ಯಾರು ?

**ಡಾ॥ ಎಂ. ವೆಂಕಟಸ್ವಾಮಿ**
ಸಂಖ್ಯೆ ೫೭೮, ೪ನೇ ಬ್ಲಾಕ್, ಸಿ.ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್, ಟೈಪ್-೫
ಹೆಚ್. ಎಸ್. ಆರ್. ಲೇಔಟ್, ಬೆಂಗಳೂರು - ೫೬೦ ೧೦೨

ದೇಶದ ಯುವ ಜನರು ಆರ್ಥಿಕತೆಗೂ ಸಮಾಜಕ್ಕೂ ಹೆಚ್ಚು ಪ್ರಯೋಜನಕಾರಿಯಾಗಬಹುದು. ಆದರೆ ಅವರು ನಿರುದ್ಯೋಗಿಗಳಾದರೆ ಅಥವಾ ಅಲ್ಪೋದ್ಯೋಗಿಗಳಾದರೆ, ಅಪೌಷ್ಟಿಕತೆಯಿಂದ ನರಳುತ್ತ ಗೌರವಯುತ ಬಾಳುವೆ ನಡೆಸಲಾರರಾದರೆ, ಅವರು ದೇಶಕ್ಕೆ ಎಲ್ಲ ಶಕ್ತಿಗಳಿಗಿಂತ ಹೆಚ್ಚು ಅಪಾಯಕಾರಿಯಾಗಬಲ್ಲರು.

ನಮ್ಮ ಜನಸಂಖ್ಯೆಯ ಒಂದು ಸಣ್ಣ ಭಾಗದ ಜನ ಕಳೆದ ಎರಡು ದಶಕಗಳಿಂದ ಜನಸಮುದಾಯಕ್ಕೆ ಸೇರಿದ ವಸ್ತುಸಂಪನ್ಮೂಲಗಳನ್ನು ಹೆಚ್ಚು ಖಾಸಗೀಕರಿಸಬೇಕೆಂದು ನಿರಂತರವಾಗಿ ಜಪಿಸುತ್ತಿದ್ದಾರೆ ಮತ್ತು ಸಮಾನತೆ ಹಾಗೂ ಸಾಮಾಜಿಕ ನ್ಯಾಯಪರತೆಯ ಗುರಿಗಳನ್ನು ನೇರವಾಗಿ ಈಡೇರಿಸಲು ಸಾಧ್ಯವೇ ಎಂದು ಸಂಶಯ ವ್ಯಕ್ತಪಡಿಸುತ್ತಿದ್ದಾರೆ. ಆರ್ಥಿಕ ಪ್ರಗತಿಯು ನಿಧಾನವಾಗಿ ಕೆಳಮಟ್ಟದಲ್ಲಿರುವವರನ್ನೂ ತಲುಪಿ ಅವರನ್ನು ಮೇಲೆತ್ತುವುದು ಎಂದವರು ವಾದಿಸುತ್ತಾರೆ. ಆದರೆ ರಾಷ್ಟ್ರವು ಇದನ್ನು ಅಸಾಧ್ಯವೆಂದು ಬಿಟ್ಟುಕೊಟ್ಟಿದೆ ಎಂದು ಆರ್ಥಿಕ ಹಾಗೂ ಸಾಮಾಜಿಕ ಪಿರಮಿಡ್ಡಿನ ತಳಸ್ತರದಲ್ಲಿರುವವರು ಭಾವಿಸುತ್ತಾರೆ. ಇಂದಿನ ನವ-ಉದಾರವಾದಿ ಕಾರ್ಯಕ್ರಮವು ಕೆಲವೇ ಜನಸ್ತೋಮದವರಿಗೆ ಭಾರಿ ಲಾಭ ತಂದುಕೊಟ್ಟು ಬಹುಮತೀಯ ಜನವಿಭಾಗವನ್ನು ಹಿಂದೆ ಬಿಟ್ಟುಕೊಟ್ಟಿರುವಂತಾಗಿದೆ. ಇಂತಹ ಅಸಮತೋಲನ ನೈತಿಕವಾಗಿ ಅನಂಗೀಕಾರಾರ್ಹ ಹಾಗೂ ರಾಜಕೀಯವಾಗಿ ಅಸಿಂಧು.

ಮುಕ್ತ ಮಾರುಕಟ್ಟೆ ಹಾಗೂ ಮಾರುಕಟ್ಟೆಗೆ ಸ್ವಾತಂತ್ರ್ಯ ಎಂಬ ಮಾತನ್ನು ನಾವು ತುಂಬ ಕೇಳುತ್ತಿದ್ದೇವೆ. ಮುಕ್ತ ಮಾರುಕಟ್ಟೆಯ ಪ್ರಮುಖ ಪ್ರತಿಪಾದಕರಲ್ಲೊಬ್ಬರಾದ ಜಡ್ಜ್ ರಿಚರ್ಡ್ ಪೋಸ್ನರ್ ಈಚೆಗಿನ ಜಾಗತಿಕ ಹಣಕಾಸು ಮುಗ್ಗಟ್ಟಿನ ಬಗೆಗೆ ಹೀಗೆ ಹೇಳುತ್ತಾರೆ: ''ಈ ಮುಗ್ಗಟ್ಟು ಸರಕಾರೀ ನೀತಿಯ ವೈಫಲ್ಯದ ಪರಿಣಾಮವಲ್ಲ, ಆದರೆ ಮಾರುಕಟ್ಟೆಯ ವೈಫಲ್ಯದ ಪರಿಣಾಮ... ಬಂಡವಾಳವಾದೀ ಆರ್ಥಿಕತೆ ಮಾದರಿಯು ಹಳಿ ತಪ್ಪದಂತೆ ನೋಡಿಕೊಳ್ಳುವಂಥ ಸರಕಾರ ನಮಗೀಗ ಬೇಕಿದೆ...''

ಅನಿಯಂತ್ರಿತ ದುರಾಸೆ ಹಾಗೂ ಅನಿಯಂತ್ರಿತ ಮಾರುಕಟ್ಟೆ ಅಪಾರ ಅನರ್ಥಕ್ಕೆ ದಾರಿಮಾಡಿಕೊಡುತ್ತವೆಂದು ಇತಿಹಾಸ ಪದೇಪದೇ ತೋರಿಸಿಕೊಟ್ಟಿದೆ. ಎಲ್ಲಿಯವರೆಗೆ ಅಪಾರ ಲಾಭ ಮಾಡುವ ಸಾಧ್ಯತೆಗಳಿರುತ್ತವೆಯೋ ಅಲ್ಲಿಯವರೆಗೆ ಲಾಭಕೋರ ಸ್ಪರ್ಧಿಗಳು ಅವನ್ನು ಕಬಳಿಸುತ್ತಾರೆಂಬ ಅಂಜಿಕೆಯು ವ್ಯಾಪಾರ ವಹಿವಾಟುಗಳನ್ನು ಹೆಚ್ಚು ಹೆಚ್ಚಿನ ಅಪಾಯಕಾರಿ ಕಾರ್ಯ ಕೈಗೊಳ್ಳುವಂತೆ ದೂಡುತ್ತದೆ. ಇಂದು ಜಾಗತಿಕ ಮಾರುಕಟ್ಟೆಗಳ ವೈಫಲ್ಯಕ್ಕೆ ಅವುಗಳ ಮೇಲಿನ ನಿಯಂತ್ರಣ ತಪ್ಪಿರುವುದೇ ಮುಖ್ಯ ಕಾರಣ.

ಬಂಡವಾಳವಾದದ ದರೋಡೆಕೋರ ನೀತಿಯು ಚಾರಿತ್ರಿಕವಾಗಿ ಬೆಳೆದುಬಂದುದು ಅಕ್ಷಯವಾದ ನೈಸರ್ಗಿಕ ಸಂಪನ್ಮೂಲಗಳನ್ನೆಲ್ಲ– ನೀರು, ಕಾಡು, ಖನಿಜ, ತೈಲ, ಇವುಗಳನ್ನೆಲ್ಲ– ಖಾಸಗೀಕರಣಗೊಳಿಸುವುದು, ಅವುಗಳನ್ನೆಲ್ಲ ಸ್ವಾರ್ಥಕ್ಕೆ ಬಳಸುವುದು ಬಂಡವಾಳವಾದದ ಅಂತರ್ಗತ ಸಹಜ ನೀತಿ ನಡವಳಿಕೆ. ಆದ್ದರಿಂದಲೇ ಇಂದು ಅನೇಕ ಸಿರಿವಂತ ಸಂಪನ್ಮೂಲಭರಿತ ದೇಶಗಳೂ ಅಷ್ಟು ಸಂಪನ್ಮೂಲಗಳಿಲ್ಲದ ಕೆಲವೇ ದೇಶಗಳಿಗಿಂತ ಕಳಪೆ ಪ್ರಗತಿ ಸಾಧಿಸುತ್ತಿರುವುದು.

ಭಾರತದ ಉದಾಹರಣೆಯನ್ನೇ ತೆಗೆದುಕೊಳ್ಳಬಹುದು. ನೈಸರ್ಗಿಕ ಸಂಪನ್ಮೂಲಗಳ ದೃಷ್ಟಿಯಿಂದ ನಮ್ಮದು ಬಡದೇಶವೆಂದು ಹೇಳಲಾಗದು. ಆದರೆ ದೇಶದೊಳಗಿನ ಪ್ರಗತಿಯ ಕಡೆಗೆ ದೃಷ್ಟಿ ಹರಿಸಿದಾಗ, ಸಿರಿವಂತ ಸಂಪನ್ಮೂಲಗಳಿರುವ ಪ್ರಾಂತಗಳಲ್ಲೇ ಹೆಚ್ಚಿನ ಸಾಮಾಜಿಕ ಕ್ಷೋಭೆ ಹಾಗೂ ತಳಮಟ್ಟದ ಮಾನವ ಪ್ರಗತಿಯನ್ನು ಕಾಣುತ್ತೇವೆ. ಇದಕ್ಕೆ ಮುಖ್ಯ ಕಾರಣ ರಾಜ್ಯದ ಸೂಕ್ತ ನಿಯಂತ್ರಣ ಹಾಗೂ ಉಸ್ತುವಾರಿ ಇಲ್ಲದಿರುವುದು, ಸಂಪತ್ತಿನ ಸಮಾನ ವಿತರಣೆ ಇಲ್ಲದಿರುವುದು, ಶೋಷಣೆ ಅತ್ಯಧಿಕವಾಗಿರುವುದು. ತೈಲ ಕೈಗಾರಿಕೆಯನ್ನೇ ತೆಗೆದುಕೊಳ್ಳಿ. ಆರಂಭದಲ್ಲಿ ಇದು ರಾಜ್ಯ ಮಾಲೀಕತ್ವದಲ್ಲೇ ಇದ್ದಿತು. ಆದರೆ ನಿರ್ವಹಣೆಯಲ್ಲಿ ತೋರಿದ ಅನಾದರ ಹಾಗೂ ಕಳಪೆ ಪ್ರವೃತ್ತಿಗಳ ಫಲವಾಗಿ ಕಳೆದ ಎರಡು ದಶಕಗಳಲ್ಲಿ ಈ ಸಂಪನ್ಮೂಲ ಖಾಸಗಿ ಒಡೆತನದ ಕೈಸೇರಿದೆ.

ಕಾನೂನು ಇರುವುದು ಜನರ ಹಿತಸಾಧನೆಗಾಗಿ. ಕಾನೂನು ಸದಾಕಾಲವೂ ಪೂರ್ಣ ಪ್ರಮಾಣದಲ್ಲಿ ಕಾರ್ಯ ಜರುಗಿಸದೆ ಹೋದರೂ ಜನಹಿತ ದೃಷ್ಟಿಯಿಂದ ನೈತಿಕ ಅಧಿಕಾರ ಚಲಾಯಿಸುವ ಸಾಮರ್ಥ್ಯವನ್ನಾದರೂ ಪಡೆದಿರುತ್ತದೆ. ದೇಶದ ಆರ್ಥಿಕ ಬೆಳವಣಿಗೆಯಲ್ಲಿ ಖಾಸಗಿ ಮಾರುಕಟ್ಟೆಯ ಪಾತ್ರ ಇಲ್ಲವೆಂದು ಹೇಳಲಾಗದು. ಆದರೆ ಅದರ ಮೇಲೆ ಸಾರ್ವಜನಿಕ ನಿಯಂತ್ರಣವಿರಬೇಕಷ್ಟೆ. ಮಾರುಕಟ್ಟೆಗಳು ಒಂದು ರೀತಿಯ ಯಂತ್ರ-ಮುಟ್ಟು ಇದ್ದಂತೆ. ಮಾನವ ಹಿತಕ್ಕೆ ಅನುಕೂಲಕರವಾಗಿದ್ದರೆ ಈ ಮಾರುಕಟ್ಟೆಗಳನ್ನು ಬಳಸಬೇಕು, ಇಲ್ಲದಿದ್ದರೆ ಅವನ್ನು ತ್ಯಜಿಸಬೇಕು. ಮುಕ್ತ ಮಾರುಕಟ್ಟೆ ಸಂರಕ್ಷಣೆಗಿಂತ ಸಾಮಾಜಿಕ ನ್ಯಾಯ ಸಾಧನೆಯೇ ಆದ್ಯತೆ ಪಡೆಯಬೇಕು.




ಸಂಪನ್ಮೂಲಗಳ ಅಸಮ ವಿತರಣೆ, ಕೆಲವೇ ವ್ಯಕ್ತಿಗಳ ಕೈಗಳಲ್ಲಿ ಅವುಗಳ ಕೇಂದ್ರೀಕರಣ – ಇವು ಪ್ರಜಾಸತ್ತೆಗೂ ಸಮಾನತೆಯ ಮೌಲ್ಯಗಳಿಗೂ ಪ್ರತಿಕೂಲವಾದುವು, ಎಂದು ಸಂವಿಧಾನ ಪ್ರತಿಪಾದಿಸುತ್ತದೆ. ಬೃಹತ್ ಪ್ರಮಾಣದ ಖಾಸಗಿ ಆರ್ಥಿಕ ಸಂಘಟನೆಗಳು ಕೆಲವೊಂದು ರೀತಿಯ ಕಾರ್ಯಭಾರಗಳನ್ನು ಈಡೇರಿಸಲು ಅವಶ್ಯವಾದರೂ, ಅವೇ ರಾಜ್ಯದ ಕಾರ್ಯಭಾರಗಳನ್ನು ವಹಿಸಿಕೊಳ್ಳದಿರುವಂತೆ, ಅದರಲ್ಲೂ ನೀತಿ ನಿರ್ವಹಣೆಯಲ್ಲಿ ಅಡ್ಡಗಾಲು ಹಾಕದಿರುವಂತೆ, ರಾಜ್ಯ ಅವುಗಳ ಮೇಲೆ ಸದಾ ನಿಗಾ ಇರಿಸಿರಬೇಕು.

ಈಗ ಬಹಳ ಕಾಲದಿಂದ ಆರ್‌ಎನ್‌ಆರ್‌ಎಲ್‌ನಂಥ ಖಾಸಗಿ ಕಂಪನಿಗಳು ಆರ್ಥಿಕ ಹಾಗೂ ಸಾಮಾಜಿಕ ವಲಯಗಳಲ್ಲಿನ ಬೃಹತ್ ಕೈಗಾರಿಕಾ ಕಾರ್ಪೊರೇಷನ್‌ಗಳ ಮೇಲೆ ನಿಯಂತ್ರಣ ಇರಿಸಿಕೊಂಡಿರುವುದು ದೇಶದ ಭಾರಿ ಜನಸ್ತೋಮದ ಬಾಳಿನ ಮೇಲೆ ಅವಶ್ಯವಾಗಿಯೇ ವಿಶಾಲ ಪ್ರಭಾವ ಬೀರುತ್ತಿದೆ. ಹಾಗಾಗಿ ಸಾರ್ವಜನಿಕ ಕಾನೂನು ವ್ಯವಸ್ಥೆ ಅದಕ್ಕೆ ಸಂಬಂಧಿಸಿ ಸೂಕ್ತ ವಿಚಾರಣೆ ಹಾಗೂ ತೀರ್ಮಾನ ಕೈಗೊಳ್ಳುವುದು ತುಂಬ ಉಚಿತವೇ ಆಗಿದೆ. ಲಕ್ಷಾಂತರ ಸಾಮಾನ್ಯ ಜನರನ್ನು ಷೇರುದಾರರನ್ನಾಗುಳ್ಳ ಕಂಪನಿಗಳು ಎಷ್ಟು ಪ್ರಮಾಣದಲ್ಲಿ ಮೌಲ್ಯ ವರ್ಗಾವಣೆ ಮಾಡುತ್ತಿವೆ ಎಂಬುದನ್ನು ಹೊರಗೆಡಹದಿರುವುದು ಸಹಜವಾಗಿಯೇ ಕಾರ್ಪೊರೇಟ್ ಕಾನೂನಿಗೆ ವಿರುದ್ಧವಾಗಿರುತ್ತದೆ.

ನೈಸರ್ಗಿಕ ಅನಿಲವು ಭಾರತದ ಜನರಿಗೆ ಸೇರಿದುದು. ಇಡೀ ದೇಶದ ಒಳಿತಿಗಾಗಿ ಬಳಸುವ ಉದ್ದೇಶದಿಂದ ದೇಶದ ಸರಕಾರದ ವಶದಲ್ಲಿರುತ್ತದೆ. ಅಂಥ ಸಂಪನ್ಮೂಲಗಳು ದೇಶದ ಬೆಳವಣಿಗೆಗೆ ವಿರುದ್ಧವಾದ ರೀತಿಯಲ್ಲಿ ವಿತರಣೆಯಾಗುವುದನ್ನು ತಪ್ಪಿಸುವಂತೆ ನೀತಿ ರೂಪಿಸಬೇಕೆಂದು ಭಾರತದ ಸಂವಿಧಾನವು ಸರಕಾರಕ್ಕೆ ಆದೇಶ ನೀಡುತ್ತದೆ. ಅಂತಿಮವಾಗಿ, ಯಾವುದೇ ಕಂಪನಿಯ ಷೇರುದಾರರೇ ಆ ಕಂಪನಿಯ ಮಾಲೀಕರಾಗಿರುತ್ತಾರೆ. ಕಂಪನಿಯೂ, ಕಾಂಟ್ರಾಕ್ಟ್ ರೀತ್ಯಾ ಪಡೆದ ಆಸ್ತಿಗಳನ್ನೂ ಒಳಗೊಂಡಂತೆ ಅದರೆಲ್ಲ ಆಸ್ತಿಗಳೂ ಯಾವ ಸ್ಥಿತಿಯಲ್ಲಿವೆ ಎಂಬುದನ್ನು ತಿಳಿಯುವ ಹಕ್ಕು ಅವರಿಗಿದೆ. ಅವರ ಪರಿಗಣನೆಗಾಗಿ ನೀಡಲಾದ ಸಲಹೆಯ ಬಗೆಗೆ ಪ್ರಾಜ್ಞ ನಿರ್ಧಾರ ಕೈಗೊಳ್ಳಲು ಇದರಿಂದ ಅವರಿಗೆ ಸಾಧ್ಯವಾಗುತ್ತದೆ. ಕಂಪನಿಯೊಂದಕ್ಕೆ ತಮ್ಮ ಸಂಪತ್ತನ್ನೂ, ಸಂಪನ್ಮೂಲಗಳನ್ನೂ ನಂಬಿಕೆಯೊಂದಿಗೆ ನೀಡಿದಂಥವರ ರಕ್ಷಣೆ ಮಾಡುವುದು ಕಾರ್ಪೊರೇಟ್ ಕಾನೂನಿನ ಪ್ರಧಾನ ಗುರಿಯಾಗಿದೆ. ಕಾರ್ಪೊರೇಟ್ ಕಾನೂನು ವಿಕಾಸಗೊಂಡ ಕಳೆದ ಮುನ್ನೂರು ವರ್ಷಗಳಿಂದಲೂ ಇದು ಹೀಗೆ ಇದ್ದುಕೊಂಡು ಬಂದಿದೆ. ಕಂಪನಿಗಳ ಮ್ಯಾನೇಜ್‌ಮೆಂಟ್‌ಗಳೂ ಬೋರ್ಡ್ ಆಫ್ ಡೈರೆಕ್ಟರುಗಳೂ ಷೇರುದಾರರಿಗೆ ನ್ಯಾಸ ರಕ್ಷಕ ಜವಾಬ್ದಾರಿಯುತರಾಗಿರುತ್ತಾರೆ. ಷೇರುದಾರರ ಹಿತಗಳನ್ನು ರಕ್ಷಿಸುವ, ಕಾನೂನುರೀತ್ಯಾ ರೂಪುಗೊಂಡ, ಗುರಿಗಳನ್ನಾಗಲೀ ಪ್ರಕ್ರಿಯೆಗಳನ್ನಾಗಲೀ ಕುಂಠಿತಗೊಳಿಸುವುದು ಕೂಡದು.

*(ಆಧಾರ: ಸರ್ವೋಚ್ಚ ನ್ಯಾಯಾಲಯದಲ್ಲಿ (೨೦೧೦) ಜರುಗಿದ ಮೊಕದ್ದಮೆಗಳಲ್ಲಿ ಮಂಡಿಸಲ್ಪಟ್ಟ ವಾದವಿವಾದಗಳ ಮತ್ತು ತೀರ್ಪುಗಳ ಸಂಗ್ರಹ.)*

ಸಂಗ್ರಹಾನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಅಡ್ಡರಸ್ತೆ, ಸಿ. ಟಿ. ಬೆಡ್, ಬನಶಂಕರಿ ೨ನೇ ಹಂತ
೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಮಾಟಕ್ಕೆದರಿ ನಗ್ನ ಆದ!

■ ಎಚ್. ಎಲ್. ಕೇಶವಮೂರ್ತಿ

**ಪಾ**ಪ ಯಡ್ಯೂರಪ್ನೋರು ಹಸುಗೂಸಿನಂತೋರು ಅಂದ್ರೆ, ''ಯಾಕೆ ಅವರ್ಗಿನ್ನೂ ಬುದ್ಧಿ ಬಲ್ತಿಲ್ವ'' ಅನ್ನೋ ಪೋಕರಿ ಮುಂಡೇಮಕ್ಳು ಇತ್ತೀಚೆಗೆ ಹೆಚ್ತಾ ಅವೆ : ಇಂಥೋರ ಕಣ್ಗೆ ಅವರು ಕಂಡಕಂಡ ದೇವರ ಮಾಡೋದು, ಮಠಾಧೀಶರು ಕರೆದ ಕಡೆ ಹೋಗೋದು, ಕೈಬಿಚ್ಚಿ ದೇಣಿಗೆ ನೀಡೋದು ಬೀಳೋದೆ ಇಲ್ಲ; ಸದಾ ಜಪಿಸೋ ಅಭಿವೃದ್ಧಿ ಮಂತ್ರ ಕಿವಿಗೆ ಕೇಳ್ಸೋದೆ ಇಲ್ಲ. ಇವುಗಳ ಹುಟ್ಟೇ ಹಂಗಿರಬೇಕು. ಯಾರು ಮುಂದೆ ಬಂದ್ರೂ ಸಹಿಸ್ಲಾರೊ. ಯಡ್ಯೂರಪ್ನೋರ್ಗೆ ಕೊಡಬಾರದ ಕಾಟ ಕೊಡ್ತಾ ಬಿದ್ದವೆ. ಈ ಸಲದ ಚುನಾವಣೇಲಿ ಏನಾಯ್ತು ಅಂತೀರಿ. ಗೆದ್ದುಬಂದ್ರೆ ಅಭಿವೃದ್ಧಿ ಮಾಡಿದ್ದೂ ಮಾಡೋನೇಯ ಹಂಗೆ ಮಾಡೇಬುಟ್ರೆ ನಂಗತಿ ಏನು ಅಂತಾವ ಅವರ್ನ ಮುಗಿಸಲೇ ಮಸಲತ್ತು ಮಾಡಿದ್ರು. ಶಿಕಾರಿಪುರದ ಹೆಲಿಪ್ಯಾಡ್‌ಗೆ ಮಾಟ ಮಾಡ್ಸಿದ್ರು, ಹೆಲಿಕ್ಯಾಪ್ಟರ್ ಸಮೇತ ಸುಟ್ಹೋಗ್ಲಿ ಅಂತಾವ. ಅದೆಂಗೆ ಅವರ್ಗೇ ಮಾಡಿಸಿದ್ದು ಅಂತ ಗೊತ್ತಾಯ್ತು ಅಂದ್ರೆ ಮಾಟ ಮಾಡಿದ ವಸ್ತುಗಳ ಹತ್ತಿರ ಒಂದು ಚೆಡ್ಡಿ ಸಿಕ್ಕಿತ್ತು! ಅರೆ, ಅವರ ಬಿಟ್ರೆ ಆ ಊರಲ್ಲಿ ಯಾರೂ ಚೆಡ್ಡೀನೆ ಹಾಕಲ್ವ, ಅದು ಯಡ್ಯೂರಪ್ಪನವರ ಚೆಡ್ಡೀನೆ ಅಂತ ಹೆಂಗೆ ಹೇಳ್ತೀರಿ ಅಂದ್ರೆ ಉರೋರೆಲ್ಲ ''ಇದು ಯಡ್ಯೂರಪ್ನೋರ ಚೆಡ್ಡೀನೇಯ'' ಎಂದು ಪ್ರಮಾಣ ಮಾಡಿದ್ರು! ಊರೋರ್ಗೆಲ್ಲ ಅವರ ಚೆಡ್ಡಿ ಪರಿಚಯ ಹೆಂಗಾಯ್ತು ಅಂದ್ರೆ ಏನು ಹೇಳಾನ. ಹೆಂಗೋ ಆಗಿರ್ತದೆ. ಅದ್ನೆಲ್ಲ ಕೆದುಕ್ತ ಕುಂತ್ರೆ ಎಲ್ಲೆಲ್ಲಿಗೋ ಹೋಗಬೇಕಾಯ್ತದೆ ಅಷ್ಟೇಯ ಅಂತ ಯಾರೂ ಅಂತಹ ಚೆಡ್ಡಿ ಸಂಶೋಧನಾ ಸಾಹಸ ಮಾಡದೇ ಇರಬಹುದು.

ಮಾಟ ಮಾಡಿದವರು ಯಾರು ಎಂಬುದು ತಿಳಿಯದಿದ್ದರೂ ಮಾಟ ಮಾಡಿಸಿದವರು ಯಾರು ಎಂದು ಯಡ್ಯೂರಪ್ನೋರಿಗೆ ತಿಳೀತಂತೆ. ಅದೇ ಅದ್ಯಾರು ಅಂದ್ರೆ ಇನ್ಯಾರಿದಾರ್ರೀ ? ದೇವೇಗೌಡರು ಮತ್ತು ಅವರ ಮಕ್ಕಳೂ ಅನ್ನೋದ್ನ ಬಿಡಿಸಿಹೇಳಬೇಕಾ? ವಾಮಾಚಾರದ ಹೋಲ್‌ಸೇಲ್ ಏಜೆನ್ಸಿ ಅವರತ್ರ ಅದೆ ಅಂತ ಊರಿಗೆಲ್ಲ ತಿಳಿದಿರೋದೇಯ. ಇನ್ನು ಯಡ್ಯೂರಪ್ನೋರ್ಗೆ ತಿಳೀದೆ ಇರ್ತದಾ. ಅದು ತಿಳಿದೇಟ್ಗೆ ಅವರೇನು ಮಾಡಿದ್ರು ಅಂದರೆ ಹಿಂಗಿಂಗೆ ಇಂತೋರು ನನಗೆ ಮಾಟ ಮಾಡ್ಸವ್ರೆ. ನಾನು ಸತ್ತರೆ ನನ್ನ ಸಾವಿಗೆ ಇಂತಿಂತೋರೇ ಹೊಣೆ ಅಂತ ವಿಲ್ ಬರೆದುಬಿಡ್ತೀನಿ ಅಂದುಬಿಟ್ರು. ಬರೀ ಅಂದ್ಬುಟ್ರೆ ಸಾಕಾ, ಅದು ಯಾರಿಗೆ ತಲುಪಬೇಕೊ ಅವರಿಗೆ ತಲುಪಬ್ಯಾಡ್ವಾ... ಅದ್ಕೇ ಮಾಧ್ಯಮಗಳಲ್ಲಿ ಬರೋಹಂಗೆ ನೋಡ್ಕಂಡ್ರು. ಅಗೇನಾಯ್ತು ಮಾಟ ಮಾಡ್ಸಿದ್ರಲ್ಲಾ ಅವುರ್ಗೆ ಪೀಕಲಾಟ ಶುರು ಆಯ್ತು. ಅಯ್ಯೋ ಶೀವನೆ ಇದೆಂಥ ಪರೀಕ್ಷೆ. ಯಪ್ಪಾ, ಇವನು ನೆಗೆದು ಬಿದ್ದೇಹೋದ್ರೆ ನಾವು ಪರಪ್ಪನ ಅಗ್ರಹಾರ ಕಾಣಬೇಕಾಯ್ತದಲ್ಲ ಅಂತಾವ ಇವನು ಚುನಾವಣೆ ಮುಗಿಯೋವರ್ಗೂ ಬದುಕಿರ್ಲಿ ಅಂತ ಹರಕೆ ಹೊತ್ತರೋ ಅಥ್ವಾ ಮಾಡಿಸಿದ ಮಾಟನ ಹಿಂದಕ್ಕೆ ಪಡೆದರೋ ಸರಿಯಾಗಿ ತಿಳಿಯದು. ಅಂತೂ ಯಡ್ಯೂರಪ್ನೋರು ಬದುಕುಳಿದೇಬಿಟ್ಟರು !



ಇದೊಂದು ಆಯಿತಾ. ಯಡ್ಯೂರಪ್ನೋರು ಮುಖ್ಯಮಂತ್ರಿ ಆಗಿ ಅಭಿವೃದ್ಧಿ ಮಂತ್ರ ಜಪಿಸುತ್ತಲೇ ಇದ್ರಲ್ಲಾ, ಅವರ ಈ ಅಭಿವೃದ್ಧಿ ಕಂಡರೆ ಆಗದೋರು ಜೊತೆ ಸೇರ್ಕಂಡ್ರು. ಇದ್ಕೆ ಕೊನೆ ತೆರೆ ಎಳೀಲೇ ಬೇಕು ಅಂತಾವ ''ನಿಮ್ಮ ಆಡಳಿತದಲ್ಲಿ ನಮಗೆ ವಿಶ್ವಾಸ ಇಲ್ಲ, ವಿಶ್ವಾಸಮತ ಯಾಚಿಸಿ'' ಅಂತ ಕುಂತ್ಗಂಡ್ರು. ಇದೇನಯ್ಯ ಇದಿಂಗಾಯ್ತದ ಅದಲ್ಲ ಕತೆ, ಎತ್ತೆತ್ಲಾಗೋ ಸುತ್ತಿಕೊಂಡೋಯ್ತಾ ಅದಲ್ಲ ಅಂದ್ಕಂಡು ಯಡ್ಯೂರಪ್ನೋರು ಜ್ಯೋತಿಸಿ ಕರ್ಸಿ ಈತರಕೆ ಈತರ ಆಗದೆ. ನನ್ ಕುರ್ಚೀಗೇ ಬಂದು ಕುಂತದಲ್ಲ, ಇದ್ಕೆ ಯಾವ ಗ್ರಹ ಕಾರಣ ಅಂತ ಕೇಳಿದ್ರು. ಆ ಜ್ಯೋತಿಷಿಯೇನು ಸಾಮಾನ್ಯನಲ್ಲ. ಗ್ರಹಗತಿ ನೋಡೋದ್ರಲ್ಲಿ ಬೋ ಫೇಮಸ್ಯಾದೋನು. ಅವನೇನು ಮಾಡ್ದ, ಎಲ್ಲಾನೂ ಒಂದ್ಕಡೆಯಿಂದ ಸ್ಕ್ಯಾನ್ ಮಾಡ್ಕೊಂಡ್ಬಂದ ಅಲ್ಲೇನಾಗದೆ ಸೂರ್ಯ ಅನ್ನೋನು ಯಡ್ಯೂರಪ್ನೋರ ಮೇಲೆ ಕ್ರೂರದೃಷ್ಟಿ ಬೀರ್ತಾ ಕುಂತವ್ನೆ! ಇದೇ ಕಾರಣ ಅಂತ ತಿಳಿದ ಮೇಲೆ ಪರಿಹಾರ ಹುಡುಕದೆ ಬಿಟ್ಟಾರ ! ಅದ್ನೂ ಹುಡುಕಿದ್ರು. ಈತರಕೆ ಈತರ ಆಗೋಗದೆ. ಸೂರ್ಯ ಹುಟ್ಟೋದು ಪೂರ್ವದಲ್ಲಲ್ವಾ. ವಿಧಾನಸೌಧದ ಪೂರ್ವದ ಗೇಟ್ ಬಂದ್‌ಮಾಡಿದ್ರೆ ಅವನ ವಕ್ರದೃಷ್ಟೀನೂ ಬಂದ್ ಆಯ್ತದೆ

ಅಂದ್ರು! ಅರೆರೆ ಅದೆಂಗಾಯ್ತದೆ? ಹೇಳಿಕೇಳಿ ಸಾರ್ವಜನಿಕರು ಓಡಾಡೋ ಜಾಗ ಅದು. ಜನ ಎಲ್ಲ ಬಾಯಿಗೆ ಬಂದಂಗೆ ಉಗೀತಾರಲ್ಲ ಅನ್ನೊ ಸಂಕಟ ಒಂದು ಕಡೆ ಆದ್ರೆ ಮುಖ್ಯಮಂತ್ರಿ ಗದ್ದುಗೇನೆ ಬಿದ್ದೋದ್ರೇನಪ್ಪ ಗತಿ ಅನ್ನೋದು ಇನ್ನೊಂದು ಕಡೆ ಕಾಡ್ತು. ಅಡಕೆ ಕತ್ತರಿ ನಡುವಿನ ಗೋಟಡಿಕೆ ತರ ಆಯ್ತು ಯಡ್ಯೂರಪ್ನೋರ ಪರಿಸ್ಥಿತಿ. ಏನಪ್ಪಾ ಮಾಡೋದು ಅಂತಾವ ಏನೇನೋ ಅಂದ್ಕಂಡು ದೊಡ್ಡ ದೊಡ್ಡ ಕುರ್ಚೀಲಿ ಕುಂತಿದ್ರಲ್ಲಾ ಅವರ್ನ ಕೇಳಿದ್ರು. ಅವರೂ ಎಷ್ಟೇ ಆಗಲಿ ಬುದ್ಧಿವಂತರು. ಬದುಕೋ ದಾರಿ ಕಲ್ತಿರೋರು. ಆ ಜಾಣರೆಲ್ಲ ಸೇರ್ಕಂಡು ಏನು ಹೇಳಿದ್ರು ಅಂದ್ರೆ... ನಾಳೀಕೆ ಹೆಂಗಾರು ವಿಸ್ವಾಸಮತ ಐತಲ್ಲಾ ಭಾರೀ ಜನ ಬಂದ್ರೆ ಗಲಾಟೆ ಆಯ್ತದೆ. ಅದು ತಡೆಯಾಕೆ ಹಿಂಗೆ ಮಾಡ್ತಿದೀವಿ ಅಂತ ಗೇಟಿಗೆ ಬೀಗ ಜಡಿಸಿ ಅಂದ್ರು. ಸೈಕಣ್ರಯ್ಯ ನೀವು ಹೇಳಿದ್ದು ಅಂತಾವ ಹಂಗೆ ಮಾಡ್ಸಿ ಸೂರ್ಯನ ಕಾಟದಿಂದ ಪಾರಾದೆ ಅಂದ್ಕಂಡು ಮನೇಗೋಗಿ ಮನಿಕ್ಕಂಡಿದ್ರಲ್ಲಾ... ಒಂದೊತ್ತಲಿ ಸರಕ್ಕನೆ ಎಚ್ಚರ ಆಯ್ತು. ಏನೋ ಯಡವಟ್ಟಾಗಿರಂಗೈತೆ ಅಂತ ಒಳಮನಸ್ಸು ಹೇಳ್ತಾ ಕುಂತ್ಕಂತು. ಸೀದಾ ವಿಧಾನಸೌಧಕ್ಕೆ ಬಂದು ನೋಡ್ತಾರೆ... ಅಲ್ಲಿ ಯಾವೋ ರಾಕ್ಷಸ ಮುಂಡೇವು 'ಮಾಟ' ಮಾಡ್ಸವೆ! ಒಂದು ಕಳೆಯಾನ ಅನ್ನೊ ಅಷ್ಟರಲ್ಲಿ ಇನ್ನೊಂದು ಆಯ್ತಾ ಅದಲ್ಲ ಆ ದೇವರೇ ಗತಿ ಅಂತಾವ ಆದಷ್ಟು ದೇವರ ಗುಡಿಗಳಿಗೆ ಹೋಗಿ ''ಕಾಪಾಡಪ್ಪ ದೇವ್ರೆ'' ಅಂತ ಎಲ್ಲಾ ದೇವರನ್ನು ಕೇಳಿಕೊಂಡ್ರು. ಅವರು ಸಲ್ಲಿಸಿದ ಸೇವೆ ವೇಸ್ಟೇನೂ ಆಗ್ಲಿಲ್ಲ. ಅದ್ಯಾವುದೋ ದೇವರು ವಿಧಾನಸಭೆ ಅಧ್ಯಕ್ಷರ ತಲೆ ಒಳಕ್ಕೆ ಹೋಗಿ ಹಿಂಗಿಂಗಾದಂತಲ್ಲ, ನೀನು ಮುಖ್ಯಮಂತ್ರಿ ಕುರ್ಚಿ ಕಾಯಲೇಬೇಕು ಅಂತ ಹೇಳಿದಾಂತ ಕಾಣ್ತದೆ. ಅದೆಂಗೋ ವಿಶ್ವಾಸಮತ ಗೆದ್ದು ಕುರ್ಚಿ ಉಳಿಸಿಕೊಂಡರು ಅನ್ನಿ.

ಮಾಟ ಪರೀಕ್ಷೆಯಲ್ಲಿ ಪಾಸ್. ಮಾರ್ಕ್ಸ್‌ನಲ್ಲೊ, ಗ್ರೇಸ್‌ಮಾರ್ಕ್‌ನಲ್ಲೊ ಗೆದ್ದು ಬಂದವರಲ್ಲಾ ಇವ ಇದ್ಕೆಲ್ಲ ದಕ್ಕೋನಲ್ಲ ಅಂತ ತಿಳ್ಕಂಡು ತೆಪ್ಪನಿರಬಾರ್ದಾ ಆ ಅಭಿವೃದ್ಧಿ ಸಹಿಸ್ದೋವು. ಉಹುಂ, ಹಂಗಿರಲೇ ಇಲ್ಲ. ಮತ್ತೆ ಅವರ್ಗೆ ಮಾಟ ಮಾಡ್ಸವ್ರಂತೆ. ಅದೂ ಅಂತಿಂತಹ ಮಾಟ ಅಲ್ವಂತೆ. ಯಡ್ಯೂರಪ್ನೋರ ಸಾಯಿಸೋಕೇ ಮಾಡಿರೋ ಮಾಟ ಅಂತೆ ಅದು! ಮಲೆಯಾಳಿ ಮಾಟ ಅಂದ್ರ ಎಂಥೋರ್ಗೂ ಜೀವ ಹಿಂಡ್ತದೆ. ಅವರ್ಗೂ ಹಂಗೇ ಆಗದಂತೆ. ಮನೆಯಿಂದ ವಿಧಾನಸೌಧಕ್ಕೆ ಬಂದ್ರೆ ಮತ್ತೆ ಮನೆ ಹಿಂತಿರುಗುತ್ತೇನೋ ಇಲ್ವೊ ಅನ್ನೊ ಹೆದರಿಕೆಯಂತೆ. ಹಂಗಂತ ಅವರೇ ಮೈಸೂರಿನಲ್ಲಿ ತಮಗಾಗುತ್ತಿರುವ ಭಯವನ್ನು ಬಿಚ್ಚಿಕೊಂಡವ್ರೆ.

ಈ ಶತ್ರು ನಿರ್ಮೂಲನಾ ಮಾಟವನ್ನು ಯಾರು ಮಾಡಿಸಿರಬಹುದು ಎನ್ನುವ ಬಗ್ಗೆ ಯಾರಿಗೂ ಅನುಮಾನ ಇಲ್ಲ. ಯಾಕೆಂದರೆ ಅದರ ಹೋಲ್‌ಸೇಲ್ ಏಜೆನ್ಸಿ ಯಾರ ಬಳಿ ಇದೆ ಎನ್ನುವುದು ಪ್ರಪಂಚಕ್ಕೇ ತಿಳಿದ ಸಂಗತಿಯಾಗಿದೆ. ಆದರೆ... ಅದು ಅವರಲ್ಲವಂತೆ! ಸಿದ್ಧರಾಮಯ್ಯ ಅಂತೆ! ಅರೆರೆ ಇದೇನು ಹಿಂಗಾಗಿದೆಯಲ್ಲ. ಮಾಟದ ಮೂಲಕ ಶತ್ರು ನಿರ್ಮೂಲ ಮಾಡಬಹುದು ಎಂಬ ದಿವ್ಯ ಮಂತ್ರವು ಇವರಿಗೆ ತಿಳಿದಿದ್ದಾದರೂ ಹೇಗೆ ಎಂದು ಯಾರೂ ತಲೆ ಕೆಡಿಸಿಕೊಳ್ಳಬೇಕಿಲ್ಲ. ಈ ಕುರಿತು ಸನ್ಮಾನ್ಯ ಮುಖ್ಯಮಂತ್ರಿಗಳೇ ವಿವರಿಸಿದ್ದಾರೆ. ಈ ಸಿದ್ಧರಾಮಯ್ಯ ಅದೆಷ್ಟೋ ವರ್ಷ ದೇವೇಗೌಡರ ಹತ್ತಿರ ಇದ್ದೋರಲ್ವಾ. ಆಗ ಅವರ ಎಲ್ಲಾ ವಿದ್ಯೇನೂ ಕರಗತ ಮಾಡಿಕೊಂಡವ್ರಂತೆ. ಏನ್ರಿ ಸಿದ್ಧರಾಮಯ್ಯನವರೆ ಹಿಂಗಿಂಗಂತಲ್ಲ ಅಂದ್ರೆ, ''ಅವರ ಮೇಲೆ ಮಾನನಷ್ಟ ಮೊಕದ್ದಮೆ ಹೂಡ್ತೀನಿ'' ಅಂತಾರೆ. ಅಲ್ಲ ಪ್ರಾಣ ಹೋಗ್ಲಿ ಅಂತ ಮಾಟ ಮಾಡ್ಸವ್ರೆ. ಪ್ರಾಣಾನೇ ಹೋದಮೇಲೆ ಯಾರ ಮೇಲೆ ಮಾನನಷ್ಟ ಕೇಸಾಕ್ತಾರೋ ತಿಳೀದು. ಒಂದು ವೇಳೆ ಯಡ್ಯೂರಪ್ನೋರ್ನೆ ಕೇಳಾನ ಅಂದ್ರೆ ''ನಾನು ಸಿದ್ಧರಾಮಯ್ಯ ಮಾಟ ಮಾಡ್ಸವ್ರೆ ಅಂತ ಹೇಳೇ ಇಲ್ಲ. ಇಂತಹ ಆಪಾದನೆ ತಮ್ಮ ಕುಟುಂಬದ ಮೇಲೆ ಬಂದ್ರೆ ಮಹಾಜನತೆ ಸುಲಭವಾಗಿ ನಂಬುವಂತಹ ಕೀರ್ತಿ ನಮ್ಮ ವಂಶದ್ದಾದ್ದರಿಂದ ಅವರ ಹೆಸರಿನಲ್ಲಿ ದೇವೇಗೌಡ ಕುಟುಂಬ ಮಾಡಿಸಿದ್ದಾರೆ ಎಂದು ಹೇಳಿದ್ದೆ. ಮಾಧ್ಯಮಗಳು ಸರಿಯಾಗಿ ವರದಿ ಮಾಡಿಲ್ಲ'' ಅಂದರೂ ಅನ್ನಬಹುದೇನೋ!

ಈ ಮಾಟದ ಶಕ್ತಿ ಎಷ್ಟು ಪ್ರಬಲ ಆಗಿದೆ ಅಂದ್ರೆ ಅದು ತನ್ನ ಜಾಲವನ್ನು ಎಲ್ಲೆಲ್ಲೂ ಬೀಸ್ತಾ ಕುಂತದೆ. ೨-ಜಿ ತರಂಗಾಂತರ ಹಂಚಿಕೆ ಹಗರಣದಲ್ಲಿ ಎ. ರಾಜಾ ಕಂಬಿ ಎಣಿಸಬೇಕಾಗಿ ಬಂದದ್ದು ಯಾಕೆ ಅಂತೀರಿ. ಈ ಮಾಟದ ಜಾಲದಿಂದ! ಅದ್ಕೂ ಇದ್ಕೂ ಏನ್ರಿ ಸಂಬಂಧ ಅಂದ್ರೆ ಅಲ್ಲಿ ಅವರು ಅರೆಸ್ಟ್ ಆಗ್ತಿದ್ದಂಗೆ ಇಲ್ಲಿ ಇವರ ಕತ್ತಿಗೆ ಹಾಕಿರೊ ಹಗ್ಗದ ಕುಣಿಕೆ ಬಿಗಿಯಾಗುತ್ತೆ. ಅವರ ಪರಮಾಪ್ತರನ್ನೂ ಬಿಟ್ಟಿಲ್ಲ. ಶೋಭಕ್ಕಾಗೆ ರಾತ್ರಿ ಸರೊತ್ನಲ್ಲಿ ಫೋನ್ ಮಾಡಿ ಗ್ಯಾಸ್ ಸಿಲಿಂಡರ್ ತಂಟೆಗೆ ಬಂದ್ರೆ ಜೀವ ತೆಗೀತೀವಿ ಅಂತ ಹೆದರುಸ್ತಾ ಅದೆ. ಹೆಂಗೋ ನಿಭಾಯಿಸಾನ ಅಂದ್ರೆ ವಿಧಾನಸೌಧಕ್ಕೆ ಮತ್ತೆ ಯಾವೋ ಮಾಟ ಮಾಡ್ಯವೆ! ಮಾಟದ ವಿಧಾನಸೌಧದಲ್ಲಿ ಯಡ್ಯೂರಪ್ನೋರು ಬದುಕಿರೋದೆ ಒಂದು ಪವಾಡ ಅನ್ಸುತ್ತೆ!

ಯಡ್ಯೂರಪ್ನೋರು ದಾವಣಗೆರೇಲಿ ಭಾಗ್ಯಲಕ್ಷ್ಮಿಯರಿಗೆ ಸೀರೆ ಹಂಚೋ ಸಮಾವೇಶದಲ್ಲಿ ಗಲಾಟೆ ಆಯ್ತು ಅಂತ ಪೊಲೀಸ್ನೋರ ಮೇಲೆ ''ನೀವೇನ್ ಕತ್ತೆ ಕಾಯ್ತಿದೀರ'' ಅಂತೆಲ್ಲ ರೇಗಾಡಿದ್ದರು. ಅವರ ಆಶಯವನ್ನೇ ನೆರವೇರಿಸುತ್ತಿದ್ದಾರೇನೋ, ಇಲ್ಲದಿದ್ದರೆ ರಾಜ್ಯದ ದೊರೆಗೆ ಜೀವಭಯ ಹುಟ್ಟಿಸುತ್ತಿರೋರ್ನ ಹಿಡಿದು ಕೇಸ್ ಜಡೀತಿರ್ಲಿಲ್ವಾ ಅನ್ನುವವರೂ ಇದ್ದಾರೆ. ದಕ್ಷ ಸೆಕ್ಯೂರಿಟಿ ಇಟ್ಕಳ್ಳಿ ಅಂತ ಬಿಟ್ಟಿ ಸಲಹೆ ಕೊಡುವವರೂ ಇದ್ದಾರೆ. ಜಿ. ಪರಮೇಶ್ವರ್ ಅಂತೋರು ಲಾಠಿ ಹಿಡ್ಕೊಂಡು ರಕ್ಷಣೆ ನೀಡೋಕೆ ಸೇವಾದಳದ ಕಾರ್ಯಕರ್ತರು ತಯಾರಿದಾರೆ ಅಂತಾರೆ. ನಿಮ್ ಲಾಠಿ ಯಾಕೆ, ಆರೆಸ್ಸೆಸ್ ಲಾಠೀನೆ ಇದೆಯಲ್ಲ ಅಂದ್ರೆ ನಮ್ದು ಶತಮಾನದ ಲಾಠಿ ಅಂತ ಬಾಲಿಷವಾಗಿ ಮಾತಾಡ್ತಾರೆ. ಪಾಪ ಅವರಿಗೆ ತಿಳೀದು. ಹಿಂಗೆಲ್ಲ ಸತಾಯಿಸುತ್ತಿರೋವು ಅಲೌಕಿಕ ಶಕ್ತಿಗಳು ಕಣ್ರೆ, ಲೌಕಿಕ ಶಕ್ತಿಗಳಲ್ಲ. ಅವನ್ನೆಂಗೆ ಹಿಡಿದು ಬಡೀತೀರಿ. ಅದಕ್ಕೇನಿದ್ರೂ ಅಲೌಕಿಕ ಶಕ್ತಿಗಳನ್ನೇ ಪ್ರತಿಸ್ಪರ್ಧಿಯಾಗಿ ಬಿಡಬೇಕಾಯ್ತದೆ. ಪೊಲೀಸ್ನೋರ್ಗೆ ಇದು ತಿಳಿದಿದೆ. ಅದ್ಕೇ ಮಾಧ್ಯಮಗಳು ಇಷ್ಟೆಲ್ಲ ರಣರಂಪ ಮಾಡಿದ್ರೂ ಅವರು ಇನ್ನೂ ಯಾವ ಕೇಸನ್ನು ದಾಖಲಿಸಿಕೊಂಡಿಲ್ಲವಂತೆ!

ಮತ್ತೆ ಇದನ್ನೆಂಗಪ್ಪ ನಿಭಾಯಿಸೋದು ಅಂದ್ರೆ... ದಿಗಿಲಾಗಬೇಕಿಲ್ಲ. ಯಡ್ಯೂರಪ್ನೋರ ಆಸ್ಥಾನ ಜ್ಯೋತಿಷಿಗಳ ಹತ್ತಿರ ಪರಿಹಾರ ಇದೆ. ಅದೇನಪ್ಪ ಅಂದ್ರೆ... ಯಡ್ಯೂರಪ್ನೋರ್ದು ವೃಶ್ಚಿಕ ರಾಶಿ ಅಂತೆ. ಅದರ ಮೇಲೆ ಕೇತುವಿನ ವಕ್ರದೃಷ್ಟಿ ಬಿದ್ದಿದೆಯಂತೆ. ಅದು ಅವರ ರಾಶಿ ಪ್ರವೇಶಿಸುತ್ತಂತೆ. ರಾಹು ಆ ರಾಶಿ ಹೊಕ್ಕಲು ಮಾಟವೇ ಕಾರಣವಿರಬಹುದೇನೋ! ಗ್ರಹಗಳ ಚಲನ ಪಥವನ್ನೇ ನಿಯಂತ್ರಿಸಬೇಕಾದರೆ ಅದು ಸರಿಯಾದ ಮಾಟವೇ ಇರಬೇಕು! ಇದರಿಂದ ಕೆಟ್ಟದ್ದಾಗಬಾರದು ಅಂದ್ರೆ... ಕೇತು ಪ್ರವೇಶಿಸಿದ ರಾಶಿಯವರು ಅಮಾವಾಸ್ಯೆ ಮುನ್ನ ಮೂರು ದಿನ ನಗ್ನರಾಗಿ ಮಲಗಬೇಕು. ಆನಂತರ ನದಿ ದಡದಲ್ಲಿ ಒಂದು ದಿನ ಸೂರ್ಯ ನಮಸ್ಕಾರ ಮಾಡಬೇಕು. ಅದೂ ನಗ್ನವಾಗೇನ ಅಂತ ಕೇಳ್ತೀರಲ್ರಿ. ಹೋಗಿ ಕಣೆ ಕೇಳಿ. ನೀವೊಂದು... ಎಲ್ಲ ನಗ್ನವಾಗೇ ನಡೀಬೇಕು ಕಣ್ರೆ. ಹೀಗೆ ಸೂರ್ಯ ನಮಸ್ಕಾರ ಮಾಡಿದರೆ ಅವನು ಸಂತೃಪ್ತನಾಗಿ ದುಷ್ಟಶಕ್ತಿಗಳಿಂದ ಪಾರುಮಾಡುತ್ತಾನಂತೆ! ರಾಜ್ಯದ ದೊರೆ ಪ್ರಜೆಗಳ ಹಿತಕ್ಕಾಗಿ ನಗ್ನರಾಗಿ ಏನು ಮಾಡಲೂ ಸಿದ್ಧರಿರಬಹುದು! ...ಅದ್ಸರಿ ನಗ್ನವಾಗೇ ಯಾಕೆ ನಮಸ್ಕಾರ ಮಾಡು ಅಂತಾನೆ ಸೂರ್ಯ ಅಂದ್ರೆ ಹೋಗಿ ಅವನ್ನೇ ಕೇಳ್ರಿ. ತಲೆಹರಟೆ ಮುಂಡೇವು. ಸೂರ್ಯದೇವನಿಗೆ ಯಾವ ರೀತಿ ತೃಪ್ತಿ ಸಿಗುತ್ತೋ ಹಾಗೆ ಮಾಡಿಸ್ಕೋತಾನೆ ಇವ್ನೇನೂಂತೀನಿ...

ನಗ್ನವೊ ಪಗ್ನವೋ ಹೆಂಗಾದರೂ ಆಗಲಿ. ಯಡ್ಯೂರಪ್ನೋರ ಜೀವ ಉಳೀಲಿ ಅಂತ ಇದ್ದರೆ ''ಅದೇನು ಕುರ್ಚಿ ಅಳ್ಳಾಡಿದಾಗೆಲ್ಲ ಮಾಟ ಬತ್ತದಲ್ಲ'' ಅಂತಾವಲ್ಲ ಯಾವೋ ಪೋಕರಿಗಳು...

**ಎಚ್. ಎಲ್. ಕೇಶವಮೂರ್ತಿ**
ಸಂಖ್ಯೆ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್
ಅಗ್ನಿಶಾಮಕ ಠಾಣೆ ಎದುರು, ಗುತ್ತಲು ಅಂಚೆ, ಮಂಡ್ಯ - ೫೭೧ ೪೦೩

## ತಂದೆಗೆ ಮಗನ ಪ್ರಶ್ನೆ



ಭ್ರಷ್ಟರ ಕೈಯಾಗ ಸಿಕ್ಕು
ನಾನು ಬಳಲುತ್ತಿರುವಾಗ
ಎಲ್ಲಿ ಅಡಗಿದ್ದೋ ತಂದೆ
ಕಾಣದ ಸಂದ್ಯಾಗ
ಹಲ್ಲು ಮುರಿದ ಹಾವಿನ್ಹಾಂಗ
ಕಲ್ಲು ಇರದ ಕವಣೆ ಹಾಂಗ
ಇರೋದಕ್ಕಿಂತ ಚಲೊ ಅನಿಸ್ತು
ಮನಿಗೆ ಬಂದಾಗ

**ಎಂ. ಡಿ. ಗೋಗೇರಿ**
ನವ ಅಯೋಧ್ಯಾ ನಗರ, ಹುಬ್ಬಳ್ಳಿ - ೨೮

# ಆಪರೇಷನ್ ಹಮಲಾ ಅರ್ಥಾತ್ ಗೋಣಿಚೀಲದಲ್ಲಿ ಎಷ್ಟಿದೆ?

ಎಂ. ಡಿ. ಗೋಗೇರಿ

**ಪಾತ್ರ ಪರಿಚಯ**

೧. ನಿಂಗಣ್ಣ : ಆಡಳಿತ ಪಕ್ಷದ ಶಾಸಕ
೨. ಮಂಗೇಶ : ವಿರೋಧ ಪಕ್ಷದ ಶಾಸಕ
೩. ತುಂಗಮ್ಮ : ಮಂಗೇಶನ ಮಡದಿ

*(ಫೋನಿನ ಮುಖಾಂತರ ಅವರವರ ಮನೆಯಲ್ಲಿ ಮಾತನಾಡುತ್ತಾರೆ.)*

**ನಿಂಗಣ್ಣ :** ಹಲೊ, ಹಲೊ, ಹಲೊ.

**ತುಂಗಮ್ಮ :** ಹಲೊ, ಯಾರು ತಾವು ?

**ನಿಂಗಣ್ಣ :** ನಾನು ನಿಂಗಣ್ಣ ಅಮ್ಮಾವ್ರೆ. ನಿಮ್ಮ ಪತಿ ಮಂಗೇಶ ಅವರ ಗೆಳೆಯ. ಚಿತ್ತೋಡ ತಾಲೂಕಿನ ಎಂ.ಎಲ್.ಎ.

**ತುಂಗಮ್ಮ :** ಹೋ ! ನಮಸ್ಕಾರ ಅಣ್ಣ. ಒಳಗೆ ಇದ್ದಾರೆ ಕೊಡ್ತೀನಿ.

**ನಿಂಗಣ್ಣ :** ಅಯ್ಯೋ ! ತಾಯಿ, ನೀವ್ಯಾಕೆ ಕೊಡ್ತೀರಿ ? ನಾನೇ ಕೊಡಲಿಕ್ಕೆ ತಯಾರಿಗಿದ್ದೀನಿ.

**ತುಂಗಮ್ಮ :** ಫೋನು ಕೊಡ್ತಿನಣ್ಣ. ನೀವೇನು ಕೊಡ್ತಿರೊ ಕೊಡ್ರಿ. ಏಟ ಕೊಡ್ತಿರೊ ಕೊಡ್ರಿ. ಹೆಂಗೂ ದೊಡ್ಡ ದೊಡ್ಡ ಹಬ್ಬ ಬಂದಾವು. ರೀಽಽ, ನಿಮ್ಮ ಗೆಳೆಯಾರು ನಿಂಗಣ್ಣ ಎಂ. ಎಲ್ಲೇರು ಫೋನು ಮಾಡಿದಾರೆ ತಕ್ಕೊಳ್ಳಿ.

**ಮಂಗೇಶ :** ಹಲೊ, ಹಲೋ ನಿಂಗಣ್ಣ, ನಮಸ್ಕಾರ.

**ನಿಂಗಣ್ಣ :** 'ನಿಂಗಣ್ಣ' 'ನಿಂಗಣ್ಣ' ಅಂತಾ ಅನಬೇಡಪಾ, ನಂಗಣ್ಣ ? ಅಂತಾ ಕೇಳು. ಕೊಡಲಿಕ್ಕೆ ಫೋನ ಮಾಡಿದೀನಿ.

**ಮಂಗೇಶ :** ಹೇಳಣ್ಣ, ನಸುಕಿನಲ್ಲೇ ಫೋನ ಮಾಡಿದಿಯಲ್ಲ? ಏನ ಸಮಾಚಾರ ?

**ನಿಂಗಣ್ಣ :** ನಿಮಗೆ ಅರಿಯದ್ದೇನು ಅಲ್ಲ ಮಂಗೇಶರೆ, ಆಡಳಿತ ಪಕ್ಷಕ್ಕೆ ಅಲುಗಾಟ ಬಂದರೆ ಗಟ್ಟಿಯಾಗಿ ನಿಲ್ಲಿಸಬೇಕಾಗುತ್ತೆ ಅದಕ್ಕೇ 'ಆಪರೇಶನ್ ಹಮಲಾ, ಅರ್ಥಾತ್ ಗೋಣಿಚೀಲದಲ್ಲಿ ಎಷ್ಟಿದೆ ?' ಎಂಬೊ ಯೋಜನೆ ಹಾಕಿದ್ದೀವಿ. ಆ ಮಹತ್ತರ ಯೋಜನೆ ಅಡಿಯಲ್ಲಿ ತಮಗೆ ಫೋನ್ ಮಾಡಿದ್ದೀನಿ. ನಿಮ್ಮ ಕೂಡ ಮಾತಾಡ ಬೇಕಿದೆ. ಅಲ್ಲದೆ, ನೀವು ನಮ್ಮ ಕುಲಬಾಂಧವರು ಅನ್ನೊ ಅಭಿಮಾನ. ಲಾಭ ಆದ್ರೆ ನಿಮಗೂ ಆಗಲಿ ಅಂತಾ.

**ಮಂಗೇಶ :** ಇದು ಎಂಥ ಯೋಜನೆ ಮಹರಾಯ ? ಇದರ ಹೆಸರೆ ಒಂದು ನಮೂನೆ ಬೇರೆ ಬೇರೆ ಇದೆಯಲ್ಲಾ. ನನಗೆ ಅರ್ಥವೇ ಆಗ್ತಾಯಿಲ್ಲ.

**ನಿಂಗಣ್ಣ :** ನಮ್ಮ ಪಕ್ಷದ ವರಿಷ್ಠರ ನಿರ್ದೇಶನದಲ್ಲಿ ಈ ಕಾರ್ಯಕ್ಕೆ ಕೈ ಹಾಕಿದೀನಿ. ನನ್ನಿಂದ ಈ ಯೋಜನೆ ಯಶಸ್ವಿ ಆಗುತ್ತೆ ಅಂತಾ ಅವರು ನಂಬಿದಾರೆ. ಹೇಳ್ತಿನಿ ಕೇಳು : 'ಆಪರೇಶನ್ ಹಮಲಾ' ಅಂದರೆ ಯುದ್ಧ ಮಾಡಿ ಅಥವಾ ಹಮಲಾ ಅಂದರೆ ದಾಳಿ ಮಾಡಿ ನೋಟಿನ ಕಟ್ಟುಗಳಿಂದ ಹೊಡೆದು ಹೊಡೆದು ಬೇರೆ ಪಕ್ಷದ ಶಾಸಕರನ್ನು ಕತ್ತರಿಸಿಕೊಂಡು ಬಂದು ನಮ್ಮ ಪಕ್ಷದಲ್ಲಿ ಸೇರಿಸು ಅಂತಾ. ತಿಳಿತಾ ?

**ಮಂಗೇಶ :** ಅಲ್ಲಯ್ಯ; ಅರ್ಥಾತ್ ಅಂದು ಮುಂದೆ ಒಂದು ಮಾತು ಹೇಳಿದೆಯಲ್ಲಾ! ಅದರ ಅರ್ಥ ಏನು ?

**ನಿಂಗಣ್ಣ :** ನಮ್ಮ ಉತ್ತರ ಕರ್ನಾಟಕದಲ್ಲಿ ನಾಟಕಗಳಿಗೆ ಎರಡು ಹೆಸರು ಇಟ್ಟಿರ್ತಾರೆ. ಗೊತ್ತಲ್ಲಾ ? ಉದಾಹರಣೆಗೆ, 'ರೈತನ ಗೋಳು, ಅರ್ಥಾತ್ ತಪ್ಪು ಯಾರದು ?' ಹಾಗೆಯೆ 'ಆಪರೇಶನ್ ಹಮಲಾ, ಅರ್ಥಾತ್ ಗೋಣಿ ಚೀಲದಲ್ಲಿ ಎಷ್ಟಿದೆ ?' ಅಂತಾ ಎರಡು ಹೆಸರು ಇಟ್ಟಿದ್ದೇವೆ. ಅಂದರೆ ಬೇರೆ ಪಕ್ಷದವರನ್ನು ದಾಳಿಯಲ್ಲಿ ಸಿಲುಕಿಸಿ ಸೆಳೆಯುವಾಗ ಅವರು ಸಹಜವಾದ ಆಶೆಯಿಂದ 'ಗೋಣಿ ಚೀಲದಲ್ಲಿ ಎಷ್ಟಿದೆ' ಅಂತಾ ಕೇಳುತ್ತಾರೆ. ಆಗ ನಾವು ಮೂವತ್ತೊ, ಐವತ್ತೊ ಅಂತಾ ಅಂಕಿ ತಿಳಿಸುತ್ತೇವೆ.

**ಮಂಗೇಶ :** ಇದು ಲಕ್ಷದ ಅಂಕಿ ತಾನೆ ?

**ನಿಂಗಣ್ಣ :** ಅಲ್ಲ ಮರಾಯ್ರೆ, ಲಕ್ಷದ ಅಂಕಿ ಜಿಲ್ಲಾ ಪಂಚಾಯ್ತಿ, ತಾಲೂಕಾ ಪಂಚಾಯ್ತಿಯಲ್ಲಿ ನಡಿಯುತ್ತೆ. ಇದು ಕೋಟಿ, ಕೋಟಿ ಲೆಕ್ಕ.

**ಮಂಗೇಶ :** 'ಗೋಣಿಚೀಲ' ಅಂತಿಯಲ್ಲ ಅದು ತಪ್ಪು ಇರಬೇಕು ನೋಡು. ಸೂಟಕೇಸು ಅಂತಾ ಹೇಳು.





**ನಿಂಗಣ್ಣ :** ಮಂಗೇಶ ಅವರೆ, ನೀವು ದಡ್ಡರಂತೆ ವಿಚಾರಿಸಬೇಡಿ. ಈಗ 'ಸೂಟಕೇಸ' ಕಾಲ ಮುಗಿದುಹೋಗಿದೆ. ಗೋಣಿಚೀಲದ ಕಾಲ ಬಂದಿದೆ. ಸೂಟಕೇಸು ಎಷ್ಟು ಹಿಡಿಯುತ್ತೆ? ಲೆಕ್ಕ ಹಾಕೀರೇನು ? ಸಾವಿರ ರೂಪಾಯಿ ನೋಟು ಒಂದು ನೂರು ಕೂಡಿಸಿದರೆ ಒಂದು ಲಕ್ಷದ ಕಟ್ಟು ಆಯ್ತು. ಅಂಥ ನೂರು ಕಟ್ಟು ಅಂದರೆ ಒಂದು ಕೋಟಿ ಒಳಗೆ ಇಟ್ಟು ಝಿಪ್ ಎಳೆದರೆ ಸೂಟಕೇಸು ಪಿಟಿ ಪಿಟಿ ಅನ್ನುತ್ತೆ. ಒಂದು ಸೂಟಕೇಸಿಗೆ ಆಪರೇಶನ್ ಹಮಲಾಕ್ಕೆ ಈಡಾದವರು ಬರ್‍ತಾರೇನು ? ಕನಿಷ್ಠ ಏನಿಲ್ಲ ಅಂದರೂ ಇಪ್ಪತ್ತು ಮೂವತ್ತು ಸೂಟಕೇಸು ಕೊಡಬೇಕಾಗುತ್ತೆ. ಅದು ದೊಡ್ಡ ರಗಳೆ ಆಗುತ್ತೆ ಅಂತಾ ಈಗ ಗೋಣಿಚೀಲದಲ್ಲಿ ತುಂಬಿ ಕೊಡ್ತೇವೆ. ಜನರಿಗೆ ಈ ಚೀಲ ನೋಡಿದರೆ ಸಂಶಯ ಕೂಡಾ ಬರೋದಿಲ್ಲ. ಈಗ ಸೂಟಕೇಸು ಬಳಕೆ ಕೆಳಗಿನ ಲೀಡರುಸ್ಗಳಲ್ಲಿ ನಡಿತಾ ಇದೆ.

**ಮಂಗೇಶ :** ಆಯ್ತು ಬಿಡಪಾ, ಈಗ ನಾನು ಏನು ಮಾಡಬೇಕು ಹೇಳು.

**ನಿಂಗಣ್ಣ :** ಏನ್ ಮಾಡಬೇಕೆಂಬುದು ನಾನೇ ಹೇಳಬೇಕಾ ? ಅಲ್ರೀ ಮುಂಜಾನೆಯೇ ಶುಭಕೋರಿ ನಿಮ್ಮ ಮನೆಗೆ ಲಕ್ಷ್ಮಿ ಬರಲಿಕ್ಕೆ ತುದಿಗಾಲ ಮೇಲೆ ನಿಂತಿದಾಳೆ. ಎಂದಾದರು ನೀವು ನಿಮ್ಮ ಕುಟುಂಬದೋರು ಮೂವತ್ತು ನಲ್ವತ್ತು ಕೋಟಿ ಹಣ ಕಂಡಿದ್ದಿರಾ ? ಅದೂ ಅಲ್ಲದೆ ಮಂತ್ರಿಗಿರಿ ಅಥವಾ ನಿಗಮ ನಿಮಗೆ ಗ್ಯಾರಂಟಿ. ನಿಮ್ಮ ಚುನಾವಣೆಗೆ ಖರ್ಚಾದ ಹಣ ಬಂದು ಕೈಯಲ್ಲಿ ಇಪ್ಪತ್ತು ಕೋಟಿ ಉಳಿಯುತ್ತೆ. ನಮ್ಮ ಪಕ್ಷಕ್ಕೆ ಬಂದುಬಿಡಿ.

**ಮಂಗೇಶ :** ನಿಂಗಣ್ಣ, ನೀವು ಹೇಳೋದು ನಿಜ ಐತಿ. ಆದರೆ ನಮ್ಮ ಪಕ್ಷದ ಸಿದ್ಧಾಂತ ಮತ್ತು ತತ್ವಕ್ಕೆ ದ್ರೋಹ ಬಗೆದಂತೆ ಆಗತ್ತಲ್ಲ.

**ನಿಂಗಣ್ಣ :** ಪಕ್ಷದ ಸಿದ್ಧಾಂತ, ತತ್ವ ಅವೆಲ್ಲ ಭಾಷಣದಾಗ ಹೇಳಬೇಕು. ಮೊದಲು ನಮ್ಮ ಜೀವನ ಸಿದ್ಧಾಂತ, ನಮ್ಮ ಅಭಿವೃದ್ಧಿ ಕಡೆ ಲಕ್ಷ ಹಾಕಬೇಕು. ತಿಳಿತಾ ?

**ಮಂಗೇಶ :** ನಿಂಗಣ್ಣ, ನಿಮ್ಮ ಮಾತು ಒಪ್ಪಿಕೋತೀನಿ. ಆದರೆ ನನ್ನ ಹಿಂದೆ ನನ್ನ ಬೆಂಬಲಿಗರು ಇದ್ದಾರೆ. ಅವರು ವಿರೋಧ ಮಾಡ್ತಾರೆ.

**ನಿಂಗಣ್ಣ :** ಮಂಗೇಶಣ್ಣ, ನಿಮಗೆ ಇನ್ನೂ ರಾಜಕೀಯ ಅನುಭವ ಆಗಿಲ್ಲ ಅಂತಾ ಕಾಣುತ್ತೆ. ನೋಡ್ರಿ, ನಿಮ್ಮ ತಾಲೂಕದಲ್ಲಿ ನಿಮ್ಮ ತರುವಾಯದ ಎರಡನೇ ದರ್ಜೆ ಲೀಡರ್‍ಸು ಹತ್ತಿಪ್ಪತ್ತು ಮಂದಿ ಇರ್‍ತಾರೆ. ಅವರನ್ನು ಗುಪ್ತವಾಗಿ ಕರೆದು ಮೀಟಿಂಗು ಏರ್ಪಡಿಸಿ. ನಾನೂ ಬರ್‍ತೀನಿ. ಅವರಿಗೆ ತಲಾ ಇಪ್ಪತ್ತು ಲಕ್ಷ ಕೊಡೋಣ. ಮೂರನೇ ದರ್ಜೆ ಲೀಡರಿಗೆ ಒಂದೊಂದು ಲಕ್ಷ ಹಂಚೋಣ. ಕೆಳಹಂತದ ಕಾರ್ಯಕರ್ತರಿಗೆ ತಲಾ ಎರಡು ಸಾವಿರ ಕೊಟ್ಟು ಒಂದು ಬಾಟಲಿ, ಮಟನ್ ಊಟ ಕೊಟ್ಟುಬಿಟ್ರೆ ನಿಮಗಿಂತ ಮೊದಲು ನಮ್ಮ ಪಕ್ಷ ಸೇರಲಿಕ್ಕೆ ಹಾರಾಡತಾ ಬರ್‍ತಾರೆ. ಚುನಾವಣೆ ಕಾಲಕ್ಕೆ ಒಂದೊಂದು ಮತಕ್ಕೆ ಒಂದು ಸಾವಿರ ಕೊಟ್ಟು ಮಹಿಳೆಯರಿಗೆ ಸೀರೆ ಉಡಿಸಿಬಿಟ್ರೆ ಅವರೂ ನಮ್ಮ ಬಲೆಯಾಗ ಬೀಳ್ತಾರೆ. ನಮ್ಮ ಲೀಡರ್‍ಸು ಒಂದು ಮಾತು ಹೇಳ್ತಾರೆ ಅದು ನಿಮಗೆ ನೆನಪಿಲ್ಲೇನು ?

**ಮಂಗೇಶ :** ಏನು ಹೇಳ್ತಾರೆ ?

**ನಿಂಗಣ್ಣ :** ವಿರೋಧ ಪಾರ್ಟಿಯವರು ಇನ್ನು ಮೇಲೆ ಸಾಯು ತನಕ ವಿರೋಧ ಪಾರ್ಟಿಯಲ್ಲೇ ಕೂಡುತಾರೆ ಅಂತಾ ಹೆಮ್ಮೆಯಿಂದ ಹೇಳ್ತಾರೆ.

**ಮಂಗೇಶ :** ವಿರೋಧ ಪಾರ್ಟಿಯವರು ನಿಮಗಿಂತಲೂ ಹೆಚ್ಚು ಹಣಕೊಟ್ಟರೆ ಹ್ಯಾಂಗ ಮಾಡ್ತಿರಿ ?

**ನಿಂಗಣ್ಣ :** ಅದು ಎಂದಿಗೂ ಸಾಧ್ಯವಿಲ್ಲ. ಅವರು ಎಷ್ಟು ಕೊಡ್ತಾರೆ. ಅದಕ್ಕಿಂತ ಒಂದು ಮತಕ್ಕೆ ಐದುನೂರು ಹೆಚ್ಚು ತೂರತೀವಿ.

**ಮಂಗೇಶ :** ಅಲ್ರಿ ನುಂಗಣ್ಣ, ಚ್ಛ್, ಚ್ಛ್, ತಪ್ಪಾತು ಮಿತ್ರ; ನಿಂಗಣ್ಣ ಅನ್ನೋದರ ಬದಲು ನುಂಗಣ್ಣ ಅಂತಾ ಬಾಯಿಗೆ ಬಂತು ಕ್ಷಮಾ ಮಾಡ್ರಿ.

**ನಿಂಗಣ್ಣ :** ಹೆದರಿಕೊ ಬ್ಯಾಡ. ಖರೆ ಹೇಳಿದಿ : ನನಗೆ ನುಂಗಣ್ಣ ಅಂತಾ ಕರೆದರೇನೆ ಬಹಳ ಸಂತೋಷ. ನಿಮಗೆ ಮೊದಲು ನಾನು ಅಂಜತಾ ಮಂಗೇಶ ಅಂತಾ ಕರೆದೆ. ಈಗ ಬರ್‍ತಾ ಬರ್‍ತಾ ಮಂಗಣ್ಣ ಅಂತಾ ಬಾಯಿಗೆ ಬರ್‍ತಾ ಇದೆ. ನೀವು ಗಿಡದಿಂದ ಗಿಡಕ್ಕೆ ಜಿಗಿಯೋ ಮಂಗನಂತೆ ಹಣ ಗೆಬರಿಕೊಂಡು ಪಕ್ಷಾಂತರ ಮಾಡಲಿಕ್ಕೆ ಸಿದ್ಧವಾಗಿದಿರಿ. ಮಂಗಣ್ಣ ಅಂದ್ರೆ ನಿಮಗೆ ಕೋಪ ಇಲ್ಲ ತಾನೆ ?

**ಮಂಗೇಶ :** ಅನ್ನು ಮಾರಾಯಾ ಅನ್ನು . ಕೆಂಪ ಕೋತಿ, ಕರೆ ಮಂಗ ಏನುಬೇಕಾದ್ರೂ ಅನ್ನು .

(ಇಬ್ಬರೂ ಗಟ್ಟಿಸಿ ಐದು ನಿಮಿಷ ನಗ್ತಾರೆ)

**ನಿಂಗಣ್ಣ :** ಮಂಗಣ್ಣ ಅವರೆ, ನಿಮಗೆ ಒಂದು ಕಿವಿಮಾತು ಹೇಳ್ತೀನಿ. ನಿಮ್ಮ ಪಕ್ಷದ ಕೆಲವೇ ಕೆಲವು ನಿಷ್ಠಾವಂತರು ನೀವು ಪಕ್ಷಾಂತರ ಮಾಡಿದ್ದಕ್ಕೆ ಬೇಸರ ಪಟ್ಟುಕೊಳ್ಳಬಹುದು. ಆಗ ನೀವು ನಮ್ಮ ಆದರ್ಶ ರಾಜಕೀಯ ಧುರೀಣರು ಹೇಳಿದ ಮಾತನ್ನೆ ಹೇಳಬೇಕು.

**ಮಂಗೇಶ :** ಏನು ಹೇಳಬೇಕು ? ನನಗೆ ಜ್ಞಾಪಕವಿಲ್ಲ.

**ನಿಂಗಣ್ಣ :** ನನಗೆ ಈ ಪಕ್ಷದಲ್ಲಿ ಉಸಿರು ಕಟ್ಟಿದಂತೆ ಆಗಿದೆ. ನನ್ನ ಮಾತಿಗೆ ಬೆಲೆಯಿಲ್ಲ. ಸಮಾರಂಭಗಳಲ್ಲಿ ನನಗೆ ಕುರ್ಚಿ ಕೊಡುವದಿಲ್ಲ, ಅಂತಾ ಹೇಳಿಕೆ ಕೊಡಬೇಕು. ಈ ರೀತಿ ಎಲ್ಲ ಪಕ್ಷದ ಪಕ್ಷಾಂತರಿಗಳು ದುಡ್ಡು ಪಡೆದು, ಅಧಿಕಾರ ಪಡೆದು ಇಂತಹ ಹೇಳಿಕೆ ಕೊಡುತ್ತಾರೆ. ಕಂಠಪಾಠ ಮಾಡಿಕೊಂಡಿರ್‍ತಾರೆ.

**ಮಂಗೇಶ :** ಆಯ್ತು ನಿಂಗಣ್ಣ, ನಮ್ಮ ಪಕ್ಷ ತೊರೆದು ನಿಮ್ಮ ಅಮೂಲ್ಯವಾದ ಮಾರ್ಗದರ್ಶನದಲ್ಲಿ ನಿಮ್ಮ ಪಕ್ಷಕ್ಕೆ ಹಾರಿಬರುತ್ತೇನೆ. ನನಗಂತೂ ನೀವು ಹೇಳಿದಷ್ಟು ದುಡ್ಡು ಮೊದಲು ನನ್ನ ತಾಬಾ ಕೊಡಬೇಕು. ಮಂತ್ರಿಗಿರಿ ನೀಡಬೇಕು. ಇದನ್ನು ನಿಮ್ಮ ವರಿಷ್ಠರಿಗೆ ತಿಳಿಸಿ.

**ನಿಂಗಣ್ಣ :** ಅದರ ಕಾಳಜಿ ಬಿಡು ಮಂಗಣ್ಣ. ಚುನಾವಣೆಯಲ್ಲಿ ನಿಮ್ಮ ಆಯ್ಕೆಗೆ ನೀರಿನಂತೆ ಹಣ ಚಲ್ಲತೀವಿ. ಮಂತ್ರಿಗಿರಿ ಸಾಧ್ಯವಾಗದಿದ್ದರೆ ನಿಗಮವಂತೂ ನಿಮಗೆ ಗ್ಯಾರಂಟಿ.

**ಮಂಗೇಶ :** ಆಯ್ತು. ನಿಮ್ಮನ್ನೇ ನಂಬಿ ಹಾರಿ ಬರ್‍ತೀನಿ. ಮೊದಲು ಮೂವತ್ತು ಕೋಟಿ ತುಂಬಿದ ಗೋಣಿಚೀಲ ನಮ್ಮ ಮನೆ ಸೇರಬೇಕು. ಎಣಿಕೆ ಮಾಡಿಕೊಂಡಮೇಲೆ ಪತ್ರಿಕಾ ಹೇಳಿಕೆ ಕೊಡ್ತೀನಿ.

**ನಿಂಗಣ್ಣ :** ಆಪರೇಶನ್ ಸಕ್ಸಸ್. ಈವೊತ್ತು ಬೆಳಗಿನ ಮೂರು ಗಂಟೆಗೆ ಚೀಲ ಬರುತ್ತೆ. ಎಣಿಸಿಕೊಳ್ಳಲು ಅತ್ತಿಗೆ ನೀವು ತಯಾರಾಗಿರಿ.


ಎಂ. ಡಿ. ಗೋಗೇರಿ

ನವ ಅಯೋಧ್ಯಾನಗರ, ಹುಬ್ಬಳ್ಳಿ - ೫೮೦ ೦೨೪




# ಕವಿಗಳ ಹತ್ತಾರು ಅವತಾರಗಳು

ಆ ಕವಿ ಬೇರೆ, ಈ ಕವಿಯೇ ಬೇರೆ ;
ಕವಿ ಮನ, ಕುಂಚ, ಅದ್ದಿದ ಬಣ್ಣ ಬೇರೆ

ಕವಿ ಗಂಡಾದರೆ ಭಾವದ, ಡವ ಡವ
ಕವಯಿತ್ರಿಯಾದರೆ ಮಿಡಿತದ ಭಾವ

ಹದಿಹರೆಯದ ತವಕ, ಇಪ್ಪತ್ತರಾತಂಕ
ಮೂರು, ನಾಲ್ಕು ದಶಕಗಳ ಬೀಗುವಿಕೆ

ದಶಕ ಐದಾದರೆ ಕಾಯಿ ಆದೀತು ಹಣ್ಣು
ಆರು, ಏಳರಲಿ ನೆನಕೆ ಜೀವನದ ಹುಣ್ಣು

ಉಳಿದಿರುವ ದಿನಗಳಲಿ ಭ್ರಮೆಯೇ ಹೆಚ್ಚು
ಅರಳು ಮರುಳು ಉಲಿಸಿದ ಮಾತೆಲ್ಲ ಪೆಚ್ಚು

ಕರುಳಿನ ಕವಿಗಳು ತಂತಿ ಮೀಟುವರು
ನವರಸದ ಪಾಯಸವನೇ ಬಡಿಸುವರು

ಹರಳೆಣ್ಣೆ ಕವಯಿತ್ರಿ ಬಲದಿ ಕುಡಿಸುತ್ತ
ನಿಮ್ಮೆದೆಗೆ ದೊಡ್ಡ ಕತ್ರಿಯನು ಹಾಕುತ್ತ

ಸಂಡಾಸು ಯಾತ್ರೆಗೆ ಆತುರದಿ ಅಟ್ಟುವರು
ಎಲ್ಲ ಮುಗಿದ ಮೇಲೆ ಹಾಯಿ ಅನ್ನುವರು


ಡಾ|| ಕೆ. ಆರ್. ಎಸ್. ಮೂರ್ತಿ

(೪೦೮)-೪೬೪-೩೩೩೩, ಸಾಂಟಾ ಕ್ಲಾರಾ, ಕ್ಯಾಲಿಫೋರ್ನಿಯಾ, ಯುಎಸ್ಎ.

■ ಬಿಳುಮನೆ ರಾಮದಾಸ್



# ಕಪ್ಪು ಮತ್ತು ಬಿಳಿಯ ಮುಖಗಳು

ನಾನು, ಶ್ರೀಕಾಂತ ಒಂದೇ ಊರಿನವರು. ಇಬ್ಬರೂ ಸಮವಯಸ್ಕರು. ಇಬ್ಬರೂ ಪ್ರಾಥಮಿಕ ಶಾಲೆಯ ಒಂದನೇ ತರಗತಿಯಿಂದ ಡಿಗ್ರಿ ಮುಗಿಯುವ ತನಕ ಸಹಪಾಠಿಗಳಾಗಿದ್ದೆವು. ಪರೀಕ್ಷೆಯಲ್ಲಿ ಒಂದು ವರ್ಷ ಆತನಿಗೂ ಮತ್ತೊಂದು ವರ್ಷ ನನಗೂ ಹೆಚ್ಚಿನ ಅಂಕಗಳು ಬರುತ್ತಿದ್ದವು. ಮನೆಯವರು ನಮ್ಮಿಬ್ಬರನ್ನು ಪ್ರತಿಭಾವಂತರೆಂದು ಹೇಳುತ್ತಿದ್ದರು. ಡಿಗ್ರಿ ಮುಗಿದ ಮೇಲೆ ನಾವಿಬ್ಬರು ಬೇರೆ ಬೇರೆ ವಿಷಯದಲ್ಲಿ ಮಾಸ್ಟರ್ ಡಿಗ್ರಿ ಪಡೆದೆವು. ಇಬ್ಬರೂ ಪ್ರಥಮ ದರ್ಜೆಯಲ್ಲಿ ಪಾಸು ಮಾಡಿದರೂ ನನಗೆ ಅವನಿಗಿಂತ ಮೂವತ್ತು ಅಂಕಗಳು ಜಾಸ್ತಿ ಬಂದವು. ನಾನು ಕನ್ನಡ ಎಂ.ಎ. ಮಾಡಿದ್ದರಿಂದ ಆತನು ಆತನ ಮನೆಯವರು ಕನ್ನಡ ವಿಷಯ ಸುಲಭವಾದದ್ದರಿಂದ ನನಗೆ ಹೆಚ್ಚಿನ ಅಂಕ ಬಂದಿತೆಂದು ಅವನು ಅರ್ಥಶಾಸ್ತ್ರವನ್ನು ಆಯ್ಕೆ ಮಾಡಿಕೊಂಡದ್ದರಿಂದ ಆತನಿಗೆ ಕಡಿಮೆ ಅಂಕಗಳು ಬಂದಿತೆಂದು ಹೇಳಿಕೊಂಡು ಓಡಿಯಾಡಿದರು. ನಾನು ಅದಕ್ಕೆಲ್ಲ ಉತ್ತರ ಕೊಡದೆ ಮೌನವಾಗಿದ್ದೆ. ನನ್ನ ಮನಸ್ಸಿಗೆ ನೋವಾದದ್ದು ನಿಜ. ನಮ್ಮಿಬ್ಬರ ಮಧ್ಯೆ ಕೊಂಚ ಬಿರುಕು ಬಿಟ್ಟದ್ದು ಇಲ್ಲಿಯೆ. ಆರ್ಥಿಕವಾಗಿ ಅವನ ಮನೆಯವರು ನಮಗಿಂತ ಅನುಕೂಲವಾಗಿದ್ದುದರಿಂದ ಘರ್ಷಣೆಗೆ ನಾನು ಅವಕಾಶ ಕೊಡಲಿಲ್ಲ. ನಾನು ಕನ್ನಡದಲ್ಲಿ ಎಂ.ಎ. ಮಾಡಿದ್ದುದು ಅಪಪ್ರಚಾರವಾಗಿ ಊರಿನಲ್ಲಿ ನಗೆಪಾಟಲಿಗೆ ಈಡಾದೆ. ಬೇರೆ ಯಾವುದೇ ವಿಷಯವನ್ನು ಆಯ್ಕೆ ಮಾಡಿಕೊಂಡು ಎಂ.ಎ., ಎಂ.ಎಸ್‌ಸಿ., ಮಾಡಲು ಯೋಗ್ಯತೆ ಇಲ್ಲದವರು ಕನ್ನಡ ಎಂ.ಎ. ಓದುತ್ತಾರೆ ಎಂಬ ನಂಬುಗೆ ನಮ್ಮೂರಿನವರದಾಗಿತ್ತು.

ನಾನು, ಶ್ರೀಕಾಂತ ಇಬ್ಬರೂ ಲೋಕಸೇವಾ ಆಯೋಗ ನಡೆಸುವ ಸ್ಪರ್ಧಾ ಪರೀಕ್ಷೆಯನ್ನು ತೆಗೆದುಕೊಂಡೆವು. ಇಬ್ಬರೂ ಒಟ್ಟಿಗೆ ಅಭ್ಯಾಸ ಮಾಡಿದೆವು. ಸ್ಪರ್ಧಾ ಪರೀಕ್ಷೆಯಲ್ಲಿ ನನಗೆ ಹೆಚ್ಚಿನ ಅಂಕಗಳು, ಶ್ರೀಕಾಂತನಿಗೆ ಕಡಿಮೆ ಅಂಕಗಳು ಬಂದವು. ಶ್ರೀಕಾಂತನು ನಮ್ಮೂರಿನ ಮಂತ್ರಿಗಳನ್ನು ಹಿಡಿದು ಲೋಕಸೇವಾ ಆಯೋಗದ ಸದಸ್ಯರೊಬ್ಬರಿಗೆ ಹೇಳಿಸಿದ್ದರಿಂದಲೋ ಅವರ ಕೈ ಬೆಚ್ಚಗೆ ಮಾಡಿದ್ದರಿಂದಲೋ ಅವನಿಗೆ ಮೌಖಿಕ ಪರೀಕ್ಷೆಯಲ್ಲಿ ನನಗಿಂತ ಇನ್ನೂರು ಅಂಕಗಳು ಜಾಸ್ತಿ ಬಂದವು. ಅದರಿಂದಾಗಿ ಆತನಿಗೆ ಒಂದನೇ ದರ್ಜೆ ಅಧಿಕಾರಿಯಾಗಿಯೂ ನನಗೆ ಎರಡನೇ ದರ್ಜೆ ಅಧಿಕಾರಿಯಾಗಿಯೂ ಸರ್ಕಾರಿ ಕೆಲಸ ಸಿಕ್ಕಿತು. ಇದು ನನಗೆ ಬಹಳ ಯಾತನೆಯನ್ನು ಕೊಟ್ಟಿತು. ನಾನು ಎರಡನೇ ದರ್ಜೆ ಅಧಿಕಾರಿಯಾದುದು ಶ್ರೀಕಾಂತನಿಗೆ, ಅವನ ಮನೆಯವರಿಗೆ ಬಹಳ ಸಂತೋಷವನ್ನು ಕೊಟ್ಟಿತು. ಶ್ರೀಕಾಂತನ ತಂದೆ, ''ಇಬ್ಬರಿಗೂ ಸರ್ಕಾರಿ ಕೆಲಸ ಸಿಕ್ಕಿತಲ್ಲ, ಸಂತೋಷ'' ಎಂದರು. ನನ್ನ ದುರದೃಷ್ಟವೆಂದರೆ ನಾವಿಬ್ಬರೂ ಒಂದೇ ಇಲಾಖೆಗೆ ನೇಮಕವಾದುದು. ಒಂದನೇ ದರ್ಜೆ ಅಧಿಕಾರಿಯಾಗಿ ನೇಮಕವಾದುದರಿಂದ ಆತ ಬೇಗನೆ ಹಿರಿಯ ಅಧಿಕಾರಿಯಾಗಿ ಬಡ್ತಿ ಹೊಂದುವ ಅವಕಾಶವಿತ್ತು. ನಾನು ಅವನ ಅಧೀನ ಅಧಿಕಾರಿಯಾಗಿ ಕೆಲಸ ಮಾಡಬೇಕಾದ ಪ್ರಸಂಗ ಬಂದು ಬಿಡುತ್ತಿತ್ತು. ಅದನ್ನು ನಾನು ತಿಳಿದುಕೊಂಡಂತೆ ಅವನೂ ತಿಳಿದುಕೊಂಡಿದ್ದ. ಒಮ್ಮೆ ಅವನು ನನಗೆ ಅದನ್ನು ಬಹಿರಂಗವಾಗಿ ಹೇಳಿಕೊಂಡಿದ್ದ. ನಾನು, ''ಬಹಳ ಸಂತೋಷ'' ಎಂದಷ್ಟೇ ಹೇಳಿದ್ದೆ.

ಸರ್ಕಾರಿ ಕೆಲಸಕ್ಕೆ ಸೇರಿದ ನಾಲ್ಕಾರು ವರ್ಷಗಳಲ್ಲಿ ನನಗೆ ನಮ್ಮೂರ ಕಡೆಯ ಸಾಹುಕಾರರೊಬ್ಬರ ಮಗಳು ಮಹಾಲಕ್ಷ್ಮಿ ಎಂಬ ಹುಡುಗಿಯೊಂದಿಗೆ ಮದುವೆಯ ಪ್ರಸ್ತಾಪ ಬಂದಿತು. ಮಹಾಲಕ್ಷ್ಮಿ ಬ್ಯಾಂಕ್ ಒಂದರಲ್ಲಿ ಕೆಲಸ ಮಾಡುತ್ತಿದ್ದಳು. ಕೆಲಸದಲ್ಲಿರುವ ಹುಡುಗಿಯೊಬ್ಬಳು ಸಿಕ್ಕಿದ್ದರಿಂದ ಆರ್ಥಿಕವಾಗಿ ನಾನು ಅನುಕೂಲವಾಗಿರಬಹುದು ಎಂದುಕೊಂಡೆ. ಹುಡುಗಿಯು ನನಗೆ ಒಪ್ಪಿಗೆಯಾದಳು. ಮದುವೆ ನಿಶ್ಚಯಕ್ಕೆ ಶ್ರೀಕಾಂತನನ್ನೂ ಕರೆದೆ. ಒಂದೇ ಇಲಾಖೆಯಲ್ಲಿ ಒಂದೇ ಊರಿನಲ್ಲಿ ಕೆಲಸ ಮಾಡುತ್ತಿದ್ದುದರಿಂದ ಅವನನ್ನು ಕರೆಯದಿದ್ದರೆ ಬೇಸರಪಟ್ಟುಕೊಳ್ಳುತ್ತಾನೆಂದು ಕರೆದೆ. ಅವನೂ ಖುಷಿಯಿಂದ ಬಂದ. ಅವನಿಗಿನ್ನೂ ಮದುವೆಯಾಗಿರಲಿಲ್ಲ. ಆತನಿಗೆ ಮದುವೆ ಮಾಡಲು ಅವನ ಮನೆಯವರು ಹುಡುಗಿಯನ್ನು ಹುಡುಕುತ್ತಿದ್ದರು. ನಿಶ್ಚಯದ ದಿನ ಮಹಾಲಕ್ಷ್ಮಿಯನ್ನು ಶ್ರೀಕಾಂತನಿಗೆ ಪರಿಚಯ ಮಾಡಿಕೊಟ್ಟೆ. ಶ್ರೀಕಾಂತ ಆಕೆ ಎಲ್ಲಿ ಕೆಲಸ ಮಾಡುತ್ತಾಳೆ, ಆಕೆಯ ವಾಸ್ತವ್ಯ ಎಲ್ಲಿ ಎಂದು ಕೇಳಿ ತಿಳಿದುಕೊಂಡ. ಖಾಸಗಿಯಾಗಿ ಆತ ನನಗೆ, ''ಹುಡುಗಿ ಚೆನ್ನಾಗಿದ್ದಾಳೆ ಕಣೊ,'' ಎಂದು ಶಹಬಾಸ್‌ಗಿರಿ ಕೊಟ್ಟ. ನನ್ನ ಮದುವೆ ನಿಶ್ಚಯವಾದ ಮೇಲೆ ಮದುವೆಗೆ ಇನ್ನೂ ನಾಲ್ಕು ತಿಂಗಳು ಇದ್ದಿತು. ನಾನೂ ಹುಡುಗಿ ಒಂದೇ ಊರಿನಲ್ಲಿದ್ದುದರಿಂದ ಆಗಾಗ ಇಬ್ಬರೂ ಭೇಟಿಯಾಗುತ್ತಿದ್ದೆವು. ನಮ್ಮಿಬ್ಬರ ಪ್ರೀತಿ ವಿಶ್ವಾಸ ಗಟ್ಟಿಯಾಗಿ ಬೆಸೆಯಿತು.

ಹೀಗಿರುವಾಗ ಒಂದೊಮ್ಮೆ ಮಹಾಲಕ್ಷ್ಮಿ ನನಗೆ ಫೋನುಮಾಡಿ ತನಗೆ ನನ್ನನ್ನು ಮದುವೆಯಾಗಲು ಇಷ್ಟವಿಲ್ಲವೆಂದು ಅವಳ ಮನೆಯವರು ಕೇಳಿದರೆ ನಾನು ಇಷ್ಟಪಟ್ಟಿಲ್ಲವೆಂದು ಹೇಳಬೇಕೆಂದು ಕೇಳಿಕೊಂಡಳು. ಯಾಕೆ ಏನು ಕಾರಣ, ಎಂದು ಕೇಳಿದರೆ ಅವಳಿಂದ ಸಮರ್ಪಕ ಉತ್ತರ ಬರಲಿಲ್ಲ. ಗೆಳೆಯರಿಗೆ ನನ್ನ ಮದುವೆ ನಿಶ್ಚಯವಾದ ಬಗ್ಗೆ ಹೇಳಿಕೊಂಡು ಬಂದಿದ್ದೆ. ಊರಿನಲ್ಲೂ ನೆಂಟರಿಷ್ಟರಿಗೆಲ್ಲ ನಮ್ಮ ಮದುವೆ ವಿಷಯ ತಿಳಿದುಹೋಗಿದ್ದಿತು. ಈಗ ಆಕೆಗೆ ಇಷ್ಟವಿಲ್ಲವೆಂದರೆ ಹೇಗೆ ? ನನ್ನೊಂದಿಗೆ ಮಹಾಲಕ್ಷ್ಮಿ ಓಡಿಯಾಡಿಲ್ಲವೆ ? ನನಗೆ ಅವಳನ್ನು ಮದುವೆಯಾಗಲು ಇಷ್ಟವಿಲ್ಲವೆಂದು ಹೇಗೆ ಹೇಳಲಿ ಅವರ ತಂದೆತಾಯಿಗೆ ? ಸ್ನೇಹಿತರು ನೆಂಟರಿಷ್ಟರೆದುರಿಗೆ ಅವಮಾನವಾಗುವುದಲ್ಲ ಎಂದು ಖುದ್ದಾಗಿ ಅವಳನ್ನು ಭೇಟಿಯಾಗಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ನೋಡಿದೆ. ಆಕೆ ಯಾವ ಸ್ಪಷ್ಟ ಕಾರಣವನ್ನೂ ಕೊಡಲಿಲ್ಲ. ''ಅದನ್ನೆಲ್ಲ ಕೇಳಬೇಡ. ಬೇರೆ ಹುಡುಗೀನ ಮದುವೆ ಮಾಡಿಕೊ. ನನಗೆ ನಿನ್ನನ್ನು ಮದುವೆಯಾಗಲು ಇಷ್ಟವಿಲ್ಲ. ಇನ್ನು ನನ್ನನ್ನ ನೋಡೋಕೆ ಬರಬೇಡ'' ಎಂದು ಕಡ್ಡಿ ಮುರಿದಂತೆ ಹೇಳಿದಳು. ''ಇಷ್ಟು ದಿನ ನನ್ನ ಜೊತೆಗೆ ಓಡಾಡಿ ಈಗ ಆಗೊಲ್ಲ ಅನ್ನೋಕೆ ಏನಾದರೂ ಕಾರಣ ಬೇಕಲ್ಲ,'' ಎಂದೆ. ಆಕೆ ನನಗೆ ಇಷ್ಟ ಇಲ್ಲಾಂದ ಮೇಲೆ ಕಾರಣ ಕೇಳೊ ಅಗತ್ಯವಿಲ್ಲ ಎಂದಳು.

''ಹಾಗಿದ್ದ ಮೇಲೆ ನಿನ್ನ ತಂದೆಗೆ ನಿನ್ನನ್ನು ಮದುವೆ ಆಗಲಿಕ್ಕೆ ನನಗಿಷ್ಟ ಇಲ್ಲಾಂತ ಯಾಕೆ ಹೇಳಲಿ. ನೀನೆ ಇಷ್ಟಪಟ್ಟಿಲ್ಲಾಂತ ಹೇಳಿದಳು ಅಂತ ಹೇಳ್ತೀನಿ.''

''ಹೇಳು. ಸುಮ್ಮನೆ ಕಾಲಹರಣ ಮಾಡಬೇಡ. ನೀನು ಇನ್ನು ಹೋಗಬಹುದು.''

ನಾನೆದ್ದು ಹೊರಬಂದೆ. ಮಹಾಲಕ್ಷ್ಮಿಯಾಕೆ ಮದುವೆ ಮುರಿದಳೆಂದು ಕೊನೆಗೂ ನನಗೆ ಉತ್ತರ ಸಿಗಲಿಲ್ಲ. ಬಹುಶಃ ಆಕೆ ಬೇರೆ ಯಾರನ್ನೋ ಪ್ರೇಮಿಸಿರಬಹುದೆಂದು ಊಹಿಸಿದೆ. ಉದ್ಯೋಗದಲ್ಲಿದ್ದ ಹುಡುಗಿಯರು ಯಾರನ್ನಾದರು ಪ್ರೇಮಿಸಿ ಮದುವೆಯಾಗುವುದು ಸ್ವಾಭಾವಿಕ. ಅದೇನು ನನಗೆ ತಿಳಿಯದ್ದಲ್ಲ. ವಿಷಯವನ್ನು ಶ್ರೀಕಾಂತನೊಂದಿಗೆ ಹೇಳಿಕೊಂಡೆ ಆತ ಮಧ್ಯೆ ಪ್ರವೇಶಿಸಿ ಸಂಬಂಧ ಕುದುರಿಸಬಹುದೇನೊ ಎಂದು. ಆತ ನಾನು ಹೇಳುವುದನ್ನೆಲ್ಲ ಸಾವಧಾನವಾಗಿ ಕೇಳಿ, ''ಅವಳಿಗೆ ನಿನ್ನನ್ನ ಮದುವೆಯಾಗೋಕೆ ಇಷ್ಟವಿಲ್ಲವೆಂದಾಯಿತು. ನೀನು ಇನ್ನು ಪ್ರಯತ್ನಪಡಬೇಡ. ನೀನು ಅವಳನ್ನು ಮರೆತು ಬೇರೆ ಹುಡುಗೀನ ಮದುವೆ ಮಾಡಿಕೊ. ಅವಳ ಹಿಂದೆ ಬೀಳಬೇಡ'' ಎಂದು ಉಪದೇಶ ಕೊಟ್ಟ. ಅದು ನನಗೆ ಸರಿಯಾಗಿ ಕಂಡಿತು. ಶ್ರೀಕಾಂತನು ಮಧ್ಯೆ ಪ್ರವೇಶಿಸಿ ರಾಜಿ ಮಾಡಿಸುವನೇನೊ ಎಂಬ ನನ್ನ ಊಹೆ ಹುಸಿಯಾಯಿತು. ನಿರಾಶನಾಗಿ ನಾನು ವಿಷಯವನ್ನು ತಿಳಿಸಿ ತಂದೆಯವರಿಗೆ ಕಾಗದ ಬರೆದೆ. ಘರ್ಷಣೆಗೆ ಅವಕಾಶ ಕೊಡಬಾರದೆಂದು ಕೇಳಿಕೊಂಡೆ. ಆದರೂ ಅವರು ಮಹಾಲಕ್ಷ್ಮಿ ಮನೆಯವರನ್ನು ತರಾಟೆಗೆ ತೆಗೆದುಕೊಂಡರು. ಅವರು ತಮಗೇನು ತಿಳಿದಿಲ್ಲವೆಂದು ತಿಳಿಸಿ ಮಹಾಲಕ್ಷ್ಮಿಯನ್ನು ಕೇಳಿ ಹೇಳುವುದಾಗಿ ನುಣುಚಿಕೊಂಡರು. ಅವರನ್ನು ಮತ್ತೆ ಕೇಳುವುದು ಬೇಡವೆಂದು, ಆಕೆ ನನಗೆ ಮುಖಕ್ಕೆ ಬಡಿದಂತೆ ಮಾತಾಡಿದ್ದರಿಂದ ನನಗೆ ಅವಳನ್ನು ಮದುವೆಯಾಗಲು ಇಷ್ಟವಿಲ್ಲವೆಂದು ಹೇಳಿದೆ. ನಮ್ಮ ತಂದೆ ಮತ್ತೆ ಅವರೊಂದಿಗೆ ಮದುವೆ ಪ್ರಸ್ತಾಪ ಮಾಡಲಿಲ್ಲ. ಅವರೂ ಉತ್ತರಿಸುವ ಗೋಜಿಗೆ ಹೋಗಲಿಲ್ಲ. ಈ ನಡುವೆ ನನ್ನನ್ನು ''ಶ್ರೀಕಾಂತನನ್ನು ತೀರಾ ಹತ್ತಿರದಿಂದ ಬಲ್ಲ ಸ್ನೇಹಿತರೊಬ್ಬರು ಊರಿನಿಂದ ನನಗೆ ಪತ್ರ ಬರೆದು ''ನಿನ್ನ ಮದುವೆ ತಪ್ಪಿಸುವುದರಲ್ಲಿ ಶ್ರೀಕಾಂತನ ಕೈವಾಡ ಇದೆ. ಆತ ಮಹಾಲಕ್ಷ್ಮಿಯನ್ನು ಭೇಟಿಯಾಗಿ, ಜಯಂತ ಎರಡನೇ ದರ್ಜೆ ಅಧಿಕಾರಿ. ಅವನ ಮನೆಯವರು ಆರ್ಥಿಕವಾಗಿ ಅಷ್ಟೇನು ಅನುಕೂಲವಾಗಿಲ್ಲ. ಸರ್ಕಾರಿ ಸೇವೆಯಲ್ಲಿ ಆತ ತನಗಿಂತ ಕಿರಿಯ. ತಾನು ಮುಂದೆ ಹಿರಿಯ ಅಧಿಕಾರಿ ಯಾದರೂ ಆತನಿನ್ನೂ ಕಿರಿಯ ಅಧಿಕಾರಿಯಾಗಿರುತ್ತಾನೆ. ನೀನು ಅವನನ್ನು ಮದುವೆ ಆಗುವುದರಿಂದ ಸುಖವಿಲ್ಲ, ನನ್ನನ್ನು ಮದುವೆಯಾಗು'' ಎಂದು ಆಕೆಗೆ ದುಂಬಾಲು ಬಿದ್ದಿದ್ದಾನೆ. ಮಹಾಲಕ್ಷ್ಮಿ ಅವನ ಮಾತನ್ನು ನಂಬಿದ್ದಾಳೆ. ಶ್ರೀಕಾಂತನನ್ನು ನೀನು ನಂಬ ಕೂಡದು'' ಎಂದು ತಿಳಿಸಿದರು. ಸ್ನೇಹಿತರ ಪತ್ರ ಓದಿ ನಾನು ಬೆಚ್ಚಿಬಿದ್ದೆ. ಶ್ರೀಕಾಂತ ಇಂತಹ ನೀಚ ಬುದ್ಧಿಯವನೆಂದು ನಾನು ತಿಳಿದಿರಲಿಲ್ಲ. ಬಹಳ ಯಾತನೆಯಾಯಿತು. ನನ್ನೊಂದಿಗೆ ಮದುವೆಗೆ ಮುಂಚೆ ಮಹಾಲಕ್ಷ್ಮಿ ಓಡಿಯಾಡಿದ ದಿನಗಳು ನೆನಪಾದವು. ಸ್ನೇಹಿತರ ಪತ್ರದ ಸಾರಾಂಶವನ್ನು ನಂಬಿದೆ. ಶ್ರೀಕಾಂತ ಒಳಸಂಚು ನಡೆಸಿರಬಹುದೆಂದು ಊಹಿಸಿದೆ. ಆತನಿಗೆ ಅಂತಹ ಗುಣಗಳು ಇರುವುದು ನನಗೆ ತಿಳಿದಿತ್ತು. ಆತನನ್ನು ಮದುವೆ ನಿಶ್ಚಯಕ್ಕೆ ಕರೆದದ್ದು ಮಹಾಲಕ್ಷ್ಮಿಯನ್ನು ಆತನಿಗೆ ಪರಿಚಯ ಮಾಡಿಸಿದ್ದು ನನ್ನ ತಪ್ಪು ಎಂದು ನನಗೆ ಅರಿವಾಗತೊಡಗಿತು. ನನಗೊದಗಿದ ಆಘಾತದಿಂದ ನಾನು ಚೇತರಿಸಿಕೊಳ್ಳುವುದು ಕಷ್ಟವೆ ಆಯಿತು.



ಸ್ನೇಹಿತರ ಪತ್ರದ ಸಾರಾಂಶ ನಿಜವಾಯಿತು. ಶ್ರೀಕಾಂತ ಒಂದು ದಿನ ನನಗೆ ಹೇಳಿ ಕಳುಹಿಸಿದ. ಆತ ಆಗ ಬಡ್ತಿ ಹೊಂದಿ ಹಿರಿಯ ಅಧಿಕಾರಿ ಯಾಗಿದ್ದ. ಹಿರಿಯ ಅಧಿಕಾರಿ ಕರೆದರೆ ಹೋಗದೆ ಇರುವುದು ತಪ್ಪಾಗುವು ದೆಂದು ಆತನನ್ನು ನೋಡಲು ಹೋದೆ.

''ನಮಸ್ಕಾರ ಸಾರ್, ಕರೆದರಂತೆ...'' ಕೇಳಿದೆ.

''ಹುಂ, ನೀನು ಬಿಟ್ಟ ಹುಡುಗಿಯನ್ನು ಮದುವೆಯಾಗತಿದೀನಿ. ಮದುವೆಗೆ ಬಾ'' ಶ್ರೀಕಾಂತ ಮದುವೆ ಕರೆಯೋಲೆಯನ್ನು ನೀಡಿದ.

ಮಹಾಲಕ್ಷ್ಮಿ ನಾನು ಬಿಟ್ಟ ಹುಡುಗಿಯೆ! ಎಲಾ, ಮನುಷ್ಯನ ಕುತಂತ್ರ ಬುದ್ಧಿಯೆ? ಮದುವೆ ಪತ್ರಿಕೆಯನ್ನು ಕೈಗೆತ್ತಿಕೊಂಡೆನೆ ವಿನಾ ಬಿಚ್ಚಿ ಓದಲಿಲ್ಲ. ಶ್ರೀಕಾಂತನಿಗೆ ಉತ್ತರಿಸಲು ಹೋಗಲಿಲ್ಲ. ಬಹಳ ಸಂಕಟವಾಯಿತು. ಸಹಿಸಿಕೊಂಡೆ. ಶ್ರೀಕಾಂತ ಮುಗುಳುನಗು ನಗುತ್ತಿದ್ದ.

''ಆಯಿತು ಬರತೀನಿ ಸಾರ್'' ನಾನು ಮೇಲೆದ್ದೆ.

''ಹಳೇದೆಲ್ಲ ಮರೆತುಬಿಡು. ನಿನಗೆ ಅವಳನ್ನು ಮದುವೆ ಆಗೋ ಯೋಗ ಇಲ್ಲ. ಋಣಾನುಬಂಧ ನನಗೆ ಇದೆ. ಮದುವೆಗೆ ಬರಲಿಕ್ಕೆ ಮರೀಬೇಡ. ಎಷ್ಟಾದರೂ ನೀನು ಊರು - ಮನೆಯವನು. ಬಾಲ್ಯ ಸ್ನೇಹಿತ. ನಾನು ನಿನ್ನ ಹಿತೈಷಿ .''

''ಹೌದು. ಮದುವೆಗೆ ಬರತೀನಿ.''

ನಾನೆದ್ದು ಬಂದೆ. ಪತ್ರಿಕೆಯನ್ನು ಬಿಚ್ಚಿ ನೋಡಲು ಹೋಗಲಿಲ್ಲ. ಪತ್ರಿಕೆ ಮೇಲೆ ಮದುವೆ ದಿನಾಂಕ ಹುಡುಗ ಹುಡುಗಿಯ ಹೆಸರು ಇದ್ದುದನ್ನು ನೋಡಿಕೊಂಡೆ. ಶ್ರೀಕಾಂತ ಮತ್ತು ಮಹಾಲಕ್ಷ್ಮಿಯ ಮೇಲೆ ಬಹಳ ಸಿಟ್ಟು ಬಂದಿತು. ಅವರ ಮದುವೆ ತಪ್ಪಿಸಬೇಕೆಂಬ ಮನಸ್ಸಾಯಿತಾದರೂ ಅದರಿಂದ ಪ್ರಯೋಜನವೇನೆಂದು ಸುಮ್ಮನಾದೆ. ಪತ್ರಿಕೆಯನ್ನು ಹರಿದುಹಾಕದೆ ಮದುವೆ ಮುಗಿಯುವ ತನಕ ಜೋಪಾನವಾಗಿಟ್ಟೆ. ಸಹೋದ್ಯೋಗಿಗಳು ಕೆಲವರು ಮದುವೆಗೆ ಹೋಗಲು ತಯಾರಿ ನಡೆಸಿದ್ದರು. ನನ್ನನ್ನೂ ಬನ್ನಿ ಎಂದು ಒತ್ತಾಯಿಸಿದರು. ಅವರಿಗೆ ವಿಷಯವೆಲ್ಲ ತಿಳಿದಿತ್ತು. ನನ್ನನ್ನೂ ಬನ್ನಿ ಎಂದು ಅವರು ಕರೆಯುವುದರಲ್ಲಿ ಶ್ರೀಕಾಂತನ ಕೈವಾಡವಿದ್ದಿರಬಹುದು ಎಂದು ನನ್ನ ಅನ್ನಿಸಿಕೆ. ನಾನು ಆ ಮದುವೆಗೆ ಹೋಗಲು ನಮ್ಮ ಮನೆಯವರ ತೀವ್ರ ವಿರೋಧವಿತ್ತು. ಆದ್ದರಿಂದ ಸಹೋದ್ಯೋಗಿಗಳಿಗೆ ಇಲ್ಲದ ಸಬೂಬು ಹೇಳಿ ತಪ್ಪಿಸಿಕೊಂಡೆ. ನನ್ನೊಂದಿಗೆ ಓಡಿಯಾಡಿದವಳು ಇನ್ನೊಬ್ಬನನ್ನು ಮದುವೆಯಾಗುವುದು ನೋಡಲು ಹೋಗುವುದಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ.

ಶ್ರೀಕಾಂತನ ಮದುವೆ ಮುಗಿದು ಆತ ಹೆಂಡತಿಯನ್ನು ಕರೆದುಕೊಂಡು ಬಂದು ಸಂಸಾರ ಹೂಡಿದ. ಮದುವೆಗೆ ಏಕೆ ಬರಲಿಲ್ಲ ಎಂದು ಆತ ನನ್ನನ್ನು ಕೇಳಲಿಲ್ಲ. ನಾನೂ ಆತನನ್ನು ಮಾತಾಡಿಸಲು ಹೋಗಲಿಲ್ಲ. ಈ ನಡುವೆ ನನಗೂ ಬಡ್ತಿಯಾಗಿ ಹುದ್ದೆಯಲ್ಲಿ ನಾವಿಬ್ಬರೂ ಸಮಸಮವಾದೆವು. ಶ್ರೀಕಾಂತ ಫೋನಿನ ಮೂಲಕ ನನಗೆ ಶುಭಾಶಯ ಹೇಳಿದ. ನಾನು ''ಥ್ಯಾಂಕ್ಸ್''ಎಂದಷ್ಟೇ ಹೇಳಿದೆ. ಬಡ್ತಿಯಾದ ಘಳಿಗೆಯಲ್ಲಿ ನನಗೂ ಮದುವೆ ಯಾಯಿತು. ನನ್ನ ಕೈ ಹಿಡಿದ ಹುಡುಗಿ ಮಹಾಲಕ್ಷ್ಮಿಗೆ ಇದ್ದಂತೆ ಬಿಳಿಯ ಬಣ್ಣ ಇರಲಿಲ್ಲ. ನನ್ನಂತೆ ಆಕೆ ಕಪ್ಪು . ಬಿಳಿಯ ಬಣ್ಣದವನಿಗೆ ಬಿಳಿಯ ಹುಡುಗಿ ಸಿಕ್ಕಿತು. ಕಪ್ಪು ಬಣ್ಣದವನಿಗೆ ಕಪ್ಪು ಹುಡುಗಿ ಸಿಕ್ಕಿತು. ಅದರಿಂದ ನನಗೆ ವಿಷಾದವೇನಾಗಲಿಲ್ಲ. ನಾನು ಹುಡುಗಿಯ ಮನೆತನ ನೋಡಿ ಮದುವೆಯಾದೆ. ನನ್ನ ಕೈಹಿಡಿದವಳು ಯಾವ ಉದ್ಯೋಗದಲ್ಲೂ ಇರಲಿಲ್ಲ. ಹಳ್ಳಿಯ ಹುಡುಗಿ. ಓದಿಕೊಂಡಿದ್ದಳು. ಶ್ರೀಕಾಂತನಿಗೆ ಮದುವೆ ಆಹ್ವಾನ ಪತ್ರಿಕೆಯನ್ನು ನಾನು ಕಳಿಸಲಿಲ್ಲ. ಆತನೂ ಏಕೆ ಪತ್ರಿಕೆ ಕೊಡಲಿಲ್ಲ ಎಂದು ಕೇಳಲಿಲ್ಲ. ಅವನ ಮದುವೆಗೆ ಬಂದ ಸಹೋದ್ಯೋಗಿಗಳು ನನ್ನ ಮದುವೆಗೂ ಬಂದಿದ್ದರು.

ನಾಲ್ಕೈದು ವರ್ಷಗಳು ಉರುಳಿಹೋದವು. ನಾನು ಶ್ರೀಕಾಂತ ಸರ್ಕಾರಿ ಕೆಲಸದ ಮೇಲೆ ಊರೂರು ಅಲೆಯ ಹತ್ತಿದೆವು. ಇಬ್ಬರಿಗೂ ಸಂಪರ್ಕವೆ ಇಲ್ಲದಾಯಿತು. ನಾನು ಮಹಾಲಕ್ಷ್ಮಿಯನ್ನು ಮರೆತು ನನ್ನ ಹೆಂಡತಿಯೊಂದಿಗೆ ಸುಖವಾಗಿದ್ದೆ. ತಾಳಿದವನು ಬಾಳಿಯಾನು ಎಂಬ ನೀತಿಗೆ ಬದ್ಧನಾದೆ. ಶ್ರೀಕಾಂತ, ಮಹಾಲಕ್ಷ್ಮಿಯವರ ಸಂಸಾರದಲ್ಲಿ ಬಿರುಕುಬಿಟ್ಟಿದೆ ಎಂಬ ಗಾಳಿಸುದ್ದಿ ಸಹೋದ್ಯೋಗಿಗಳಿಂದ ನನಗೆ ಆಗಾಗ ಕೇಳಿ ಬರುತ್ತಲಿತ್ತು. ಅದನ್ನು ಕೆಣಕಿ ತಿಳಿದು ಕೊಳ್ಳಲೂ ನನಗೆ ಆಸಕ್ತಿ ಇರಲಿಲ್ಲ. ನನಗೆ ಮೋಸ ಮಾಡಿದವಳಿಗೆ ತಕ್ಕ ಶಾಸ್ತಿಯಾಯಿತೆಂದು ಸಂತೋಷ ವಾಯಿತಾದರೂ ಅವರ ಸಂಸಾರವನ್ನು ಒಡೆಯಲು ಮನಸ್ಸಾಗಲಿಲ್ಲ. ಗಂಡ ಹೆಂಡಿರ ಜಗಳ ತಾರಕಕ್ಕೆ ಏರಿದಾಗ ಮಹಾಲಕ್ಷ್ಮಿಯಿಂದ ನನಗೊಂದು ಪತ್ರ ಬಂದಿತು. ''ನೀನು ನಮ್ಮ ಸಂಸಾರಕ್ಕೆ ಹುಳಿ ಹಿಂಡುತ್ತಿದ್ದಿ. ಶ್ರೀಕಾಂತನಿಗೆ ನನ್ನ ಮೇಲೆ ಇಲ್ಲದ್ದನ್ನು ಚಾಡಿ ಹೇಳಿದ್ದಿ. ಆತ ನನ್ನನ್ನು ಡೈವೋರ್ಸ್ ಮಾಡುವುದಾಗಿ ಹೇಳುತ್ತಿದ್ದಾನೆ. ನಿನಗೆ ನಾನು ದಕ್ಕಲಿಲ್ಲ ಎಂದು ಹೀಗೆ ಮಾಡಬಹುದೆ?'' ಎಂದು ಬರೆದಿದ್ದಳು. ನಾನು ಕೊಂಚ ಯೋಚನೆ ಮಾಡಿ ಅವಳಿಗೆ

ಉತ್ತರಿಸಿದೆ : ''ನನ್ನ ಮೇಲೆ ಇಲ್ಲದ ಆಪಾದನೆ ಮಾಡಿ ಬರೆದಿದ್ದಿಯಾ. ನಿಮ್ಮ ಸಂಸಾರ ಒಡೆಯಲು ಶ್ರೀಕಾಂತನಿಗೆ ನಾನು ಏನನ್ನೂ ಹೇಳಿರುವುದಿಲ್ಲ. ನಿನ್ನಿಂದಾಗಿ ನಮ್ಮಿಬ್ಬರಲ್ಲಿ ಮಾತುಕತೆಯೇ ಇಲ್ಲವಾಗಿದೆ. ನಮ್ಮ ಬಾಲ್ಯದ ಸ್ನೇಹಕ್ಕೆ ಕೊಡಲಿಪೆಟ್ಟು ಕೊಟ್ಟಿದ್ದೀಯ. ನಿನ್ನದೆಲ್ಲ ಊಹಾಪೋಹ. ಮದುವೆಯಾಗುವಾಗ ಸಿಹಿಯಾಗಿದ್ದುದು ಈಗ ಕಹಿಯಾಗಿ ಹೋಯಿತೆ ? ಮದುವೆಯಾಗುವ ಮುಂಚೆ ಹುಡುಗರೇ ಆಗಲಿ ಹುಡುಗಿಯರೆ ಆಗಲಿ ಯಾರೊಂದಿಗೂ ಚೆಲ್ಲಾಟ ಆಡಬಾರದು. ಆಡಿದರೆ ಅವರನ್ನೇ ಮದುವೆಯಾಗಬೇಕು. ಇನ್ನು ನೀನು ಕಾಗದವನ್ನು ನನಗೆ ಬರೆಯಕೂಡದು. ಹೊಂದಿಕೊಂಡು ಹೋಗುವುದನ್ನು ನೀನು ಕಲಿಯಬೇಕು. ನನ್ನನ್ನು ಬಿಟ್ಟು ನೀನು ಶ್ರೀಕಾಂತನನ್ನು ಮದುವೆಯಾಗಲು ಇಲ್ಲದ ನಾಟಕವಾಡಿದ್ದನ್ನು ಮರೆತಿಲ್ಲ.'' ಅನಂತರವೂ ಮಹಾಲಕ್ಷ್ಮಿಯಿಂದ ನನಗೆ ಮತ್ತೆರಡು ಪತ್ರ ಬಂದವು. ನಾನು ಅವಳಿಗೆ ಉತ್ತರಿಸಲು ಹೋಗಲಿಲ್ಲ. ಅಷ್ಟೇಕೆ ? ಅವಳ ಪತ್ರವನ್ನು ಓದುವ ಗೋಜಿಗೂ ಹೋಗಲಿಲ್ಲ. ಆದರೆ ಅವಳ ಪತ್ರಗಳನ್ನು ಜೋಪಾನವಾಗಿ ಇಟ್ಟುಕೊಂಡೆ, ಮುಂದೆ ಬೇಕಾಗಬಹುದೇನೋ ಎಂದು. ಮಹಾಲಕ್ಷ್ಮಿ ನನ್ನನ್ನು ಮದುವೆಯಾಗಲು ಇಷ್ಟವಿಲ್ಲ ಎಂದು ನಿಷ್ಠುರವಾಗಿ ಮಾತನಾಡಿದ್ದುದು ನೆನಪಾಗಿ ಆಕೆಯ ಮೇಲೆ ಹಲ್ಲುಕಡಿದೆ.




ಇಲ್ಲಿಗೆ ಪ್ರಹಸನ ಮುಗಿಯಿತೇನೋ ಅಂದುಕೊಂಡಿದ್ದೆ. ಆದರೆ ಅಲ್ಲಿಗೇ ಮುಗಿಯಲಿಲ್ಲ. ಮಹಾಲಕ್ಷ್ಮಿಯ ಬದಲಿಗೆ ಶ್ರೀಕಾಂತನಿಂದ ಪತ್ರ ಬಂದಿತು. ಆತನ ಪತ್ರ ಒಡೆದು ಓದಲು ಮೊದಲಿಗೆ ಧೈರ್ಯವಾಗಲಿಲ್ಲ. ಏನು ಬೈದು ಬರೆದಿದ್ದಾನೋ ಎಂದು. ಅವನು ಸರ್ಕಾರಿ ಸೇವೆಯಲ್ಲಿ ನನಗಿಂತ ಹಿರಿಯನಲ್ಲವೆ ? ದಬಾವಣೆಯಿಂದ ಬರೆದಿರಬಹುದೆಂದು ಹೆದರಿಕೊಂಡಿದ್ದೆ. ಅವನು ಹಿರಿಯ ಅಧಿಕಾರಿಯಾದರೆ ಆತ ನನ್ನನ್ನೇನು ಮಾಡುತ್ತಾನೆ ಎಂದು ಧೈರ್ಯ ತೆಗೆದುಕೊಂಡು ಪತ್ರವನ್ನು ಒಡೆದು ಓದಿದೆ. ಆತ ಹಾಗೇನು ಬರೆದಿರಲಿಲ್ಲ. ನನಗೂ ಮಹಾಲಕ್ಷ್ಮಿಗೂ ಸರಿ ಬಂದಿರುವುದಿಲ್ಲ. ನಾನು ಆಕೆಯನ್ನು ಡೈವೋರ್ಸ್ ಮಾಡಬೇಕೆಂದಿದ್ದೇನೆ. ನೀನು ಆಕೆಗೆ ಬರೆದ ಪತ್ರದಲ್ಲಿ ನನ್ನೊಂದಿಗಿನ ಮದುವೆಗೆ ಮೊದಲು ಆಟ ಆಡಿದ್ದಿಯಾ ಎಂದು ಬರೆದಿದ್ದೀಯ. ನೀನು ಕೋರ್ಟಿನಲ್ಲಿ ನನ್ನ ಪರವಾಗಿ ಅವಳೊಂದಿಗೆ ಏನು ಆಟ ಆಡಿದ್ದೀಯ ಎಂದು ಹೇಳಬೇಕು. ನಾನು ನೀನು ಬಾಲ್ಯ ಸ್ನೇಹಿತರಲ್ಲವೆ ? ಒಂದೇ ಊರಿನವರಲ್ಲವೆ ? ಆ ವಿಶ್ವಾಸ ಕೆಡಬಾರದು'' ಎಂದು ಬರೆದಿದ್ದ. ಆಹಾ ಎಷ್ಟು ಆತ್ಮೀಯವಾಗಿ ಬರೆದಿದ್ದಾನೆ. ಹಿಂದೆ ಆತ ನನಗೆ ಆಡಿದ ಟೀಕೆ ವ್ಯಂಗ್ಯದ ಮಾತುಗಳೆಲ್ಲವನ್ನು ಅವನು ಮರೆತಿರಬಹುದು. ನಾನು ಮರೆಯುವುದಿಲ್ಲ. ನಮ್ಮ ಮದುವೆ ತಪ್ಪಿಸಿ ಅವನು ಮಹಾಲಕ್ಷ್ಮಿಯನ್ನು ಖುದ್ದು ಕಂಡು ಮುಗ್ಧ ಮಹಿಳೆಯ ತಲೆ ಕೆಡಿಸಿ ಅವಳನ್ನು ಬಲೆಗೆ ಹಾಕಿಕೊಂಡಿದ್ದಾನೆ. ಗಂಡ ಹೆಂಡತಿ ಚೆನ್ನಾಗಿದ್ದಾಗ ಅವನಿಗೆ ನನ್ನೊಂದಿಗಿನ ಸೌಜನ್ಯದಿಂದ ಮಾತಾಡುವ ವಿಶ್ವಾಸವೇ ಇರಲಿಲ್ಲ. ಈಗ ನಾನು ಅವನು ಬಾಲ್ಯ ಸ್ನೇಹಿತರಾಗಿಬಿಟ್ಟೆವು. ಒಂದೇ ಊರಿನವರಾಗಿಬಿಟ್ಟೆವು. ನಾನು ಮಹಾಲಕ್ಷ್ಮಿಗೆ ಬರೆದ ಪತ್ರವನ್ನು ಆತ ದುರುಪಯೋಗಪಡಿಸಿಕೊಂಡಿದ್ದಾನೆ.

ಶ್ರೀಕಾಂತನಿಗೆ ಉತ್ತರಿಸುವ ಮೊದಲು ಮಹಾಲಕ್ಷ್ಮಿ ಬರೆದ, ಇನ್ನು ಒಡೆಯದಿರುವ ಎರಡೂ ಪತ್ರಗಳನ್ನು ಒಡೆದು ಓದಿದೆ. ಆಕೆ ಎರಡೂ ಪತ್ರದಲ್ಲಿ ತನ್ನ ಗೋಳಿನ ಕತೆಗಳನ್ನು ಹೇಳಿಕೊಂಡಿದ್ದಳು. ಶ್ರೀಕಾಂತನು ನಾನು ಆಕೆಗೆ ಬರೆದ ಪತ್ರವನ್ನು ಎತ್ತಿಟ್ಟುಕೊಂಡಿದ್ದಾನೆ. ''ಜಯಂತನೊಂದಿಗೆ ನೀನು ಆಟ ಆಡಿದ್ದೀಯಾ. ನಿನ್ನನ್ನು ಡೈವೋರ್ಸ್ ಮಾಡಲಿಕ್ಕೆ ಒಳ್ಳೆಯ ಕಾರಣ ಸಿಕ್ಕಿತು ಎಂದು ಹಂಗಿಸುತ್ತಿದ್ದಾನಂತೆ.'' ಯಾಕೆ ಹಾಗೆ ಬರೆದಿದ್ದೀಯಾ ? ನಾವೇನು ಆಟ ಆಡಿದ್ದೇವೆ ? ನೀನು ಹಾಗೆ ಬರೆಯಬಹುದೆ ? ನಾನು ಮದುವೆಗೆ ಮುಂಚೆ ನಿನ್ನೊಂದಿಗೆ ಮಾತುಕತೆ ಆಡಿದ್ದು, ಹೋಟೆಲಿನಲ್ಲಿ ಕಾಫಿ ತಿಂಡಿ ತಿಂದದ್ದು, ಊಟಮಾಡಿದ್ದಕ್ಕೆ ನಮ್ಮ ಸಂಸಾರ ಒಡೆಯುವ ತಂತ್ರವನ್ನು ನೀನು ಮಾಡಬಹುದೆ ? ಕೋರ್ಟಿನಲ್ಲಿ ಜಯಂತನನ್ನು ಸಾಕ್ಷಿಗೆ ನಿಲ್ಲಿಸಿ ನಿನ್ನ ಮಾನಮರ್ಯಾದೆಯನ್ನು ಹರಾಜು ಮಾಡಿಸುತ್ತೇನೆ ಎಂದು ಹೆದರಿಸುತ್ತಿದ್ದಾನೆ. ಕೇಸು ಕೋರ್ಟಿಗೆ ಹೋಗದಂತೆ ಪ್ರತಿತಂತ್ರ ಮಾಡುತ್ತೇನೆ. ಇಬ್ಬರ ಕೈಗೂ ಬೇಡಿಹಾಕಿಸುತ್ತೇನೆ. ನಾನು ಜೀವನದಲ್ಲಿ ತುಂಬಾ ನಿರಾಶಳಾಗಿದ್ದೇನೆ. ನಮ್ಮಲ್ಲಿ ಮದುವೆಗೆ ಮುಂಚೆ ನಡದದ್ದೇನು ಎಂದು ಶ್ರೀಕಾಂತನಿಗೂ ನನಗೂ ಉತ್ತರಿಸು ಎಂದು ಮಹಾಲಕ್ಷ್ಮಿ ಬರೆದಿದ್ದಳು. ಮಹಾಲಕ್ಷ್ಮಿಯ ಪತ್ರಗಳನ್ನು ಮೊದಲೇ ಒಡೆದು ಓದದಿದ್ದುದಕ್ಕೆ ವಿಷಾದವಾಯಿತು. ನನ್ನೊಂದಿಗೆ ನೀನು ಆಟ ಆಡಿದ್ದಿಯಾ,'' ಎಂದು ನಾನು ಬರೆದುದನ್ನು ಹಿಡಿದು ಶ್ರೀಕಾಂತ ಮಹಾಲಕ್ಷ್ಮಿಯನ್ನು ಎಷ್ಟು ಗೋಳಾಡಿಸುತ್ತಿದ್ದಾನೋ, ನಮ್ಮ ಮದುವೆ ತಪ್ಪಿಸಿ ಆಕೆಯನ್ನು ಆತ ಮದುವೆಯಾಗುವಾಗ ಚೆನ್ನಾಗಿತ್ತಾ? ನನ್ನ ನೋವನ್ನು ಆತ ಅರ್ಥಮಾಡಿಕೊಳ್ಳಲಿಕ್ಕೆ ಆಗಲಿಲ್ಲವೆ ? ...ಎಂದೆಲ್ಲಾ ಅನ್ನಿಸಿತು. ಶ್ರೀಕಾಂತನ ಮೇಲೆ ಜಿದ್ದು ತೀರಿಸಿಕೊಳ್ಳಲು ಇದು ಸುಸಮಯ ಎಂದು ತಿಳಿದೆ.

ಮಹಾಲಕ್ಷ್ಮಿ ಪ್ರತಿತಂತ್ರ ಮಾಡುವುದಾಗಿ ಬೆದರಿಕೆ ಹಾಕಿದ್ದಾಳೆ. ಹಾಗೆಂದರೇನು ? ಪೊಲೀಸಿನವರಿಗೆ ನಮ್ಮಿಬ್ಬರ ಮೇಲೆ ಬರೆದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆಯೆ ? ಅದಲ್ಲದೆ ಬೇರೆ ಮಾರ್ಗವಿಲ್ಲ ಆಕೆಗೆ. ಇಬ್ಬರು ಗಂಡಸರು ಸೇರಿಕೊಂಡು ಮಹಾಲಕ್ಷ್ಮಿಯನ್ನು ಆಟ ಆಡಿಸಬಹುದೆ ಎಂದು ನನಗೆ ಚಿಂತೆಯಾಯಿತು. ಮುಂದಾಗುವುದನ್ನು ಊಹಿಸಿ ಶ್ರೀಕಾಂತನಿಗೆ ಮನೆ ವಿಳಾಸಕ್ಕೆ ಕಾಗದ ಬರೆದೆ. ಕಾಗದ ಮಹಾಲಕ್ಷ್ಮಿ ಕೈಗೆ ಸಿಗಲಿ ಎಂದು. ಆತ ಕಚೇರಿ ವಿಳಾಸಕ್ಕೆ ಬರೆಯಲು ತಿಳಿಸಿದ್ದ. ಅದರ ಹಿಂದಿನ ಉದ್ದೇಶ ಏನೆಂದು ಅರ್ಥವಾಗಿತ್ತು ನನಗೆ. ಆತನಿಗೆ ಇಷ್ಟೇ ಬರೆದೆ :

''ನನ್ನೊಂದಿಗೆ ನೀನು ಆಟ ಆಡಿದ್ದೀಯ ಎಂದು ನಾನು ಮಹಾಲಕ್ಷ್ಮಿಗೆ ಬರೆದ ಪದವನ್ನು ನೀನು ಅಪಾರ್ಥ ಮಾಡಿಕೊಳ್ಳಬಾರದು. ನನಗೂ ಮಹಾಲಕ್ಷ್ಮಿಗೂ ಗುರು ಹಿರಿಯರು ಮದುವೆ ನಿಶ್ಚಯಿಸಿದ್ದರು. ಮದುವೆ ಗೊತ್ತಾದ ಮೇಲೆ ಸಂಜೆ ಹೋಟೆಲು, ಅಂಗಡಿಗಳಿಗೆ ತಿರುಗಿದ್ದೆವು. ಅಷ್ಟೇ ಹೊರತು, ನಾವು ಮುಂದುವರಿದು ಹೋಗಿರಲಿಲ್ಲ. ನಿನಗೆ ಮಹಾಲಕ್ಷ್ಮಿಯನ್ನು ಪರಿಚಯ ಮಾಡಿಕೊಟ್ಟಿದ್ದರಿಂದ ನೀನು ನನ್ನ ಕಣ್ಣು ತಪ್ಪಿಸಿ ಆಕೆಯನ್ನು ಭೇಟಿಯಾಗಿ ನನ್ನ ಮೇಲೆ ಇಲ್ಲದ್ದು ಹೇಳಿ ನಮ್ಮ ಸಂಬಂಧ ಕೆಡಿಸಿ ಆಕೆಯನ್ನು ಮರಳುಮಾಡಿ ಮದುವೆ ಮಾಡಿಕೊಂಡಿದ್ದಿಯಾ. ಈಗ ಆಕೆಯನ್ನು ಗೋಳಾಡಿಸುವುದು ಯಾಕೆ ? ಈಗ ಆಕೆಯನ್ನು ಡೈವೋರ್ಸ್ ಮಾಡಿದರೆ ಮಕ್ಕಳ ಭವಿಷ್ಯವೇನು ? ನೀನು ಕೇಳಿದ ಕೂಡಲೆ ಕೋರ್ಟ್ ಡೈವೋರ್ಸ್ ಕೊಟ್ಟು ಬಿಡುತ್ತದೆಯೆ ? ನಿನ್ನ ಪರವಾಗಿ ನಾನು ಕೋರ್ಟಿನಲ್ಲಿ ಸಾಕ್ಷಿ ಹೇಳಲಿಕ್ಕಾಗುವುದಿಲ್ಲ. ವಕೀಲರಿಗೆ ಸುಮ್ಮನೆ ಹಣ ಸುರಿಯಬೇಡ. ಹಣದಾಸೆಗಾಗಿ ವಕೀಲರು ಅಂಗೈಯಲ್ಲಿ ಆಕಾಶ ತೋರಿಸುತ್ತಾರಷ್ಟೆ. ಸಂಶಯವನ್ನು ಬಿಟ್ಟು ಹೊಂದಾಣಿಕೆಯನ್ನು ಮಾಡಿಕೊಂಡೋಗು.''

ಶ್ರೀಕಾಂತ ಹಿರಿಯ ಅಧಿಕಾರಿ ಎಂಬುದನ್ನು ಬದಿಗೊತ್ತಿ ಆತ ನನ್ನ ಬಾಲ್ಯ ಗೆಳೆಯ ಎಂದು ಏಕವಚನದಲ್ಲಿ ಬರೆದೆ. ಅವನಿಗೇನನ್ನಿಸಿತೊ ತಿಳಿಯದು. ಆತನಿಂದ ಮತ್ತೆ ಯಾವ ಪತ್ರವೂ ಬರಲಿಲ್ಲ. ಬಹುಶಃ ನನ್ನ ಪತ್ರದಿಂದ ಅವನಿಗೆ ಬಹಳ ಬೇಸರವಾಗಿರಬಹುದು. ಮಹಾಲಕ್ಷ್ಮಿಯ ಬಾಹ್ಯ ಸೌಂದರ್ಯಕ್ಕೆ ಮರುಳಾಗಿ ಶ್ರೀಕಾಂತ ಪಡಬಾರದ ಕಷ್ಟವನ್ನು ಅನುಭವಿಸುತ್ತಿದ್ದಾನೆ. ಶ್ರೀಮತಿಯ ಆಂತರಿಕ ಸೌಂದರ್ಯಕ್ಕೆ ಮರುಳಾಗಿ ಮದುವೆಯಾದ ನಾನು ಸುಖವಾಗಿದ್ದೇನೆ. ನಾನಂತು ಬಹಳ ಆತಂಕದಲ್ಲೇ ಇದ್ದೆ. ಮಹಾಲಕ್ಷ್ಮಿ ಆತ್ಮಹತ್ಯೆ ಮಾಡಿಕೊಂಡು ಮಕ್ಕಳನ್ನು ಅನಾಥಳಾಗಿ ಮಾಡುವಳೇನೊ ಎಂದು. ಅವಳೇ ಬರೆದಂತೆ ಆತ್ಮಹತ್ಯೆ ಮಾಡಿಕೊಂಡರೆ ನಮ್ಮಿಬ್ಬರ ಕೈಗೆ ಬೇಡಿ ಹಾಕಿಸುವುದಂತೂ ಖಚಿತವಾಗಿತ್ತು. ಹಾಗೇನಾದರೂ ನಡೆದರೆ ನಾನು ತಪ್ಪಿಸಿಕೊಳ್ಳಬಹುದು. ಶ್ರೀಕಾಂತ ತಪ್ಪಿಸಿಕೊಳ್ಳುವುದು ಕಷ್ಟವಿದ್ದಿತು. ನಾನು ತಪ್ಪಿಸಿಕೊಂಡರೂ ಮಹಾಲಕ್ಷ್ಮಿ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಕಾರಣಕರ್ತನಾದವನು ಎಂಬ ಕಳಂಕವನ್ನು ಅಳಿಸಿ ಹಾಕುವುದು ಕಷ್ಟವಿದ್ದಿತು.

ಪ್ರತಿನಿತ್ಯ ನಾನು ಆತಂಕದಲ್ಲಿರುವಾಗ ಮಹಾಲಕ್ಷ್ಮಿಯಿಂದ ಪತ್ರ ಬಂದಿತು. ಈ ಸಾರಿ ಪತ್ರವನ್ನು ಬದಿಗಿಡಲಿಲ್ಲ. ಆತುರದಿಂದ ಒಡೆದು ಓದಿದೆ. ಮಹಾಲಕ್ಷ್ಮಿ ಬರೆದಿದ್ದಳು : ''ಶ್ರೀಕಾಂತನಿಗೆ ಬರೆದ ಪತ್ರ ನನ್ನ ಕೈಗೆ ಸಿಕ್ಕಿದೆ. ನೀನು ಅವನ ಪರವಾಗಿ ಕೋರ್ಟಿನಲ್ಲಿ ಸಾಕ್ಷಿ ಹೇಳುವುದಿಲ್ಲ ಎಂದು ಬರೆದುದನ್ನು ಓದಿ ಆತ ತಣ್ಣಗಾಗಿದ್ದಾನೆ. ನಿನ್ನ ಮೇಲೆ ಕೆಂಡ ಕಾರುತ್ತಿದ್ದಾನೆ. ಈಗ ಡೈವೋರ್ಸ್ ಪ್ರಶ್ನೆಯೇ ಇಲ್ಲ. ಮಾತುಕತೆ ಕಡಿಮೆ ಆಡುತ್ತಿದ್ದಾನೆ. ನೀನು ಶ್ರೀಕಾಂತ ಸರ್ಕಾರಿ ಅಧಿಕಾರಿಗಳಾಗಿಲ್ಲದಿದ್ದರೆ ಇಬ್ಬರೂ ಸೇರಿ ನನ್ನನ್ನು ಮುಗಿಸುತ್ತಿದ್ದಿರೇನೊ, ಅಲ್ಲವಾ ? ಕೋರ್ಟು, ಸಸ್ಪೆನ್‌ಶನ್ನು, ಡಿಸ್‌ಮಿಸ್ಸು, ಬೇಡಿ ಎಂಬ ಪದಗಳು ನಿಮ್ಮನ್ನು ನಡುಗಿಸಿದೆ. ಅಲ್ಲವಾ ?''

ಕಾಗದ ಓದಿ ಮಹಾಲಕ್ಷ್ಮಿ ಸತ್ಯವನ್ನು ಬರೆದಿದ್ದಾಳೆ ಎಂದು ನಗು ಬಂತು.

ಬಳುಮನೆ ರಾಮದಾಸ್
೧೪೦೧, ೩೭ನೇ 'ಬಿ' ಕ್ರಾಸ್, ೪ನೇ 'ಟಿ' ಬ್ಲಾಕ್, ೧೧ನೇ ಮುಖ್ಯರಸ್ತೆ, ಜಯನಗರ, ಬೆಂಗಳೂರು - ೪೧

# ಆರೋಗ್ಯ



ಸೌಂದರ್ಯವು ನೋಡುಗರ ದೃಷ್ಟಿಯಲ್ಲಿರುತ್ತದೆ. ಇಂದಿನ ವೇಗದ ಯುಗದಲ್ಲಿ ಸೌಂದರ್ಯಕ್ಕೇ ಮೊದಲ ಆದ್ಯತೆ. ತನ್ನ ಜೊತೆಗಾರ, ಜೊತೆಗಾರ್ತಿ ಅಥವಾ ಸ್ವತಃ ತಾನು ಸುಂದರವಾಗಿರಬೇಕೆಂಬ ಬಯಕೆ ಸಹಜವಾದುದು. ಇದು ಒಳ್ಳೆಯ ಉದ್ಯೋಗ ಗಳಿಸುವಲ್ಲಿಯೂ ಸಹಾಯಕ್ಕೆ ಬರುತ್ತದೆ. ನಮ್ಮ ಬಾಹ್ಯ ಸೌಂದರ್ಯ ನಮ್ಮ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತದೆ. ತಾನು ಸುಂದರಿ ಅಥವಾ ಸುಂದರನಲ್ಲವೆಂದು ಭಾವಿಸುವವರು ಕಾಸ್ಮೆಟಿಕ್ ಸರ್ಜರಿಗಾಗಿ ವೈದ್ಯರ ನೆರವು ಪಡೆಯುತ್ತಾರೆ. ಈಗ ವಿವಿಧ ರೀತಿಯ ಕಾಸ್ಮೆಟಿಕ್ ಸರ್ಜರಿಗಳು ರೂಢಿಯಲ್ಲಿವೆ. ಅವುಗಳ ಬಗ್ಗೆ ತಿಳಿಯೋಣ.

ಹಲವರು, ಶಸ್ತ್ರ ಚಿಕಿತ್ಸೆಯೆಂದರೆ ಯಾವುದಾದರೂ ಕಾಯಿಲೆಯಾದಾಗ ಮಾಡಬೇಕಾದ ಅನಿವಾರ್ಯ ಚಿಕಿತ್ಸೆ ಎಂದು ಭಾವಿಸುತ್ತಾರೆ. ಪ್ರತಿಯಾಗಿ ಇಂದು ಆರೋಗ್ಯವಂತ ವ್ಯಕ್ತಿಗೆ ಸಹ ಕೆಲವು ಸಂದರ್ಭಗಳಲ್ಲಿ ಶಸ್ತ್ರ ಚಿಕಿತ್ಸೆ ಅಗತ್ಯವಾಗುತ್ತದೆ. ಇದರಿಂದ ಪ್ಲಾಸ್ಟಿಕ್ ಸರ್ಜನ್‌ರ ಜವಾಬ್ದಾರಿಯೂ ಹೆಚ್ಚುತ್ತದೆ. ಮಾತ್ರವಲ್ಲದೆ, ಚಿಕಿತ್ಸೆ ಫಲಕಾರಿಯಾಗಿ, ವ್ಯಕ್ತಿಗೆ ಅದರಿಂದ ಪೂರ್ಣ ತೃಪ್ತಿ ಸಿಗುವಂತಿರಬೇಕು, ಜೊತೆಗೆ ಅದಕ್ಕೆ ತಗಲುವ ವೆಚ್ಚವೂ ಆತನಿಗೆ ನಿಲುಕುವಂತಿರಬೇಕು.

**ಲಿಪೋಸಕ್ಷನ್ :** ಈ ವಿಧಾನದಲ್ಲಿ ದೇಹದಲ್ಲಿ ಶೇಖರವಾಗಿರುವ ಕೊಬ್ಬನ್ನು ಚರ್ಮದ ಕೆಳಗಿನ ಭಾಗದಿಂದ ಹೀರುವಂತೆ ಮಾಡಲಾಗುತ್ತದೆ. ಸಾಮಾನ್ಯವಾಗಿ, ಹೊಟ್ಟೆಯ ಭಾಗ, ತೋಳು, ತೊಡೆಗಳು, ಸೊಂಟ, ಎದೆ ಹಾಗೂ ಪೃಷ್ಠಗಳ ಭಾಗದಲ್ಲಿ ಈ ಚಿಕಿತ್ಸೆ ಮಾಡಲಾಗುತ್ತದೆ. ಇದು ಚರ್ಮ ಹಾಗೂ ಮಾಂಸಖಂಡಗಳ ಮಧ್ಯದಲ್ಲಿರುವ ಕೊಬ್ಬಿನ ಅಂಶವನ್ನು ತೆಗೆಯಲು ಈ ಕ್ರಮ ಅನುಸರಿಸಲಾಗುತ್ತದೆ. ಈ ಚಿಕಿತ್ಸೆಯ ಮುಖ್ಯ ಉದ್ದೇಶವೆಂದರೆ, ದೇಹದ ಎಲ್ಲ ಭಾಗಗಳು ಸರಿಯಾದ ರೀತಿಯಲ್ಲಿ ಕಾಣುವಂತೆ ಮಾಡುವುದಕ್ಕೆ ಮಾತ್ರವೇ ಹೊರತು, ದೇಹಕ್ಕಾಗುವ ತೊಂದರೆಗಳು, ಸ್ಥೂಲತೆಗೆ ಸಂಬಂಧಿಸಿದ ರೋಗಗಳನ್ನು ನಿವಾರಿಸುವುದಿಲ್ಲ. ಸಾಮಾನ್ಯವಾಗಿ ದೇಹದಲ್ಲಿ ಕೊಬ್ಬಿನ ಅಂಶ ಶೇಖರಣೆಯಾಗುವುದು ಗರ್ಭಿಣಿಯರಲ್ಲಿ ಮತ್ತು ಪ್ರಸವದ ನಂತರ. ಆಗ ಹೊಟ್ಟೆಯ ಮಾಂಸಖಂಡಗಳು ದುರ್ಬಲವಾಗಿರುತ್ತವೆ ಮತ್ತು ಮೆದುವಾಗಿರುತ್ತವೆ. ಇಂಥ ಪ್ರಕರಣಗಳಲ್ಲಿ ಸಾಂಪ್ರದಾಯಿಕ ಪದ್ಧತಿಯಾದ 'ಟಮ್ಮಿಟಕ್'ಅನ್ನು ಮಾಡಲಾಗುತ್ತದೆ. ಇದರಲ್ಲಿ ಹೆಚ್ಚಿನ ಚರ್ಮವನ್ನು ದುರ್ಬಲ ಮಾಂಸಖಂಡಗಳಿಂದ ಹೊರ ತೆಗೆಯಲಾಗುತ್ತದೆ. ದುರ್ಬಲ ಮಾಂಸಖಂಡಗಳನ್ನು ಬಿಗಿಗೊಳಿಸಲಾಗುತ್ತದೆ. ಸಾಮಾನ್ಯವಾಗಿ ಇದನ್ನು ಎರಡು ಹಂತಗಳಲ್ಲಿ ಮಾಡಲಾಗುತ್ತದೆ. ಮೊದಲನೆಯ ಹಂತದಲ್ಲಿ ಸಾಂಪ್ರದಾಯಿಕ 'ಲಿಪೊಸಕ್ಷನ್'ನಲ್ಲಿ. ಮಾಂಸಖಂಡಗಳ ಬಿಗಿಗೊಳಿಸುವಿಕೆಯ ವಿಧಾನದ ಮೂಲಕ ಕೆಲವು ವಾರಗಳ ನಂತರ ಮಾಡಲಾಗುತ್ತದೆ.

'ಲಿಪೊಸಕ್ಷನ್'ನ ಇನ್ನೊಂದು ವಿಧಾನವೆಂದರೆ, 'ಸ್ತನ ಕುಗ್ಗಿಸುವಿಕೆ'. ಈ ವಿಧಾನದಿಂದ ಶೇಕಡ ೩೦ರಿಂದ ಶೇಕಡ ೫೦ರಷ್ಟನ್ನು ಕುಗ್ಗಿಸಬಹುದು. ಅಂದರೆ ಮೊದಲಿದ್ದ ಆಕಾರಕ್ಕೆ ತರಲು ಸಹಾಯಕವಾಗುತ್ತದೆ. ಹೆಚ್ಚಿನ ಕೊಬ್ಬಿನ ಅಂಶವನ್ನು ಹೊರತೆಗೆಯಲಾಗುತ್ತದೆ.

ಇನ್ನೂ ಹಲವಾರು ವಿಧಾನಗಳಲ್ಲಿ 'ಸ್ತನವರ್ಧನೆ' ಮಾಡಲು ಸಾಧ್ಯವಿದೆ. ಸಿಲಿಕಾನ್ ಇಂಪ್ಲಾಂಟ್‌ಗಳ ಮೂಲಕ ಸಣ್ಣ ಸ್ತನಗಳ ಗಾತ್ರವನ್ನು ಹಿಗ್ಗಿಸಿ ಉತ್ತಮ ಆಕಾರಕ್ಕೆ ತರುವುದು ಇವುಗಳಲ್ಲೊಂದು. ತಜ್ಞ ವೈದ್ಯರ ಬಳಿ, ಹಿಂದೆ ಚಿಕಿತ್ಸೆ ಮಾಡಿ ಸ್ತನಗಳ ಆಕಾರವನ್ನು ಅಂದಗೊಳಿಸಿರುವ ಫೋಟೋಗಳಿದ್ದರೆ ಅವನ್ನು ನೋಡಿ ನೀವೂ ಅದನ್ನು ಅನುಸರಿಸಬಹುದು.

ಇವನ್ನು ವಿವಿಧ ರೀತಿಯಲ್ಲಿ ಮಾಡಲಾಗುತ್ತದೆ. 'ಬ್ಯಾರಿಯಾಟಿಕ್ ಸರ್ಜರಿ' (ಗ್ರೀಕ್ ಪದ ಬಾರೋನ್ ಎಂದರೆ ತೂಕ ಎಂದು ಅರ್ಥ) ವಿಧಾನದಿಂದ ಕೆಲವೊಂದು ಬೊಜ್ಜಿನಂಶವನ್ನು ನಿವಾರಿಸಲಾಗುತ್ತದೆ. ಇದು ತುಂಬಾ ಅಪಾಯಕಾರಿಯಾಗಿದ್ದು, ಸರ್ಜರಿಯ ಸಂದರ್ಭದಲ್ಲಿ ಹೊಟ್ಟೆಯ ಭಾಗವನ್ನು ಕಿರಿದುಗೊಳಿಸಬೇಕಾಗುತ್ತದೆ. ಇದರಿಂದ ವ್ಯಕ್ತಿಯ ಜೀರ್ಣಕ್ರಿಯೆಗೆ ಅಡಚಣೆಯುಂಟಾಗಿ, ಆತನ ತೂಕ ಕಡಿಮೆಯಾಗುತ್ತದೆ. ಕಲೆ/ಮಚ್ಚೆಗಳನ್ನು, ಟ್ಯಾಟೂಗಳನ್ನು ತೆಗೆಯುವುದನ್ನು ಸಹ ಜೊತೆಗೆ ಇತರ ಸೌಂದರ್ಯವರ್ಧಕ ವಿಧಾನಗಳನ್ನು ಸಹ ಪ್ಲಾಸ್ಟಿಕ್ ಸರ್ಜರಿಯಿಂದ ಮಾಡಬಹುದು. ಸರ್ಜರಿಯ ನಂತರ ಮಚ್ಚೆ/ಕಲೆ ಎಷ್ಟು ಭಾಗ ನಿವಾರಣೆಯಾಗಿದೆ, ಕಲೆಗಳ ಒಂದಿಷ್ಟು ಭಾಗ ಉಳಿದಿವೆ, ಅವನ್ನು ಹೇಗೆ ನಿವಾರಿಸಬಹುದು ಎಂಬುದನ್ನು ಪ್ಲಾಸ್ಟಿಕ್ ಸರ್ಜನ್‌ರೊಂದಿಗೆ ಚರ್ಚಿಸಬಹುದಾಗಿದೆ.

ದೇಹದ ಅಂಗಗಳಲ್ಲಿ ಬದಲಾಯಿಸಲು ಸಾಧ್ಯವಿರುವವೆಂದರೆ, ಮೂಗನ್ನು ತಿದ್ದಿ ಬದಲಾಯಿಸುವುದು, ಕತ್ತಿನ ಭಾಗದಲ್ಲಿರುವ ಕೊಬ್ಬನ್ನು ಕಡಿಮೆ ಮಾಡುವುದು, ಕಿವಿಗಳು ಮತ್ತು ಕಣ್ಣಿನ ರೆಪ್ಪೆಯನ್ನು ಸಡಿಲಗೊಳಿಸುವಿಕೆ ಇತ್ಯಾದಿ. ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳದೆಯೂ ನಿಮ್ಮ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಿದೆ. ಪ್ಲಾಸ್ಟಿಕ್ ಸರ್ಜನರೊಂದಿಗೆ ಚರ್ಚಿಸಿ ನಿಮಗೆ ಯಾವುದು ಸೂಕ್ತ ಎಂಬುದನ್ನು ತಿಳಿದುಕೊಳ್ಳಬಹುದು. ಪ್ರಾಯಶಃ ಕೆಲವನ್ನು ಸರಿಪಡಿಸಲಾಗುವುದಿಲ್ಲ. ಆ ಬಗ್ಗೆ ವೈದ್ಯರೇ ನಿಮಗೆ ತಿಳಿಸಿಕೊಡುತ್ತಾರೆ. ಇಲ್ಲೊಂದು ಬದಲಾವಣೆ ಇದೆ. ನಿಮ್ಮ ಹೊರನೋಟದಲ್ಲಿ ಬದಲಾವಣೆ ಕಾಣಿಸಿದರೂ ಅದು ಸಹಜ ಎಂದು ತಿಳಿಯಬಹುದು. ಒಂದು ಕಲೆ ಇದ್ದರೂ ಅದನ್ನು ನಿವಾರಿಸಬಹುದು. ಶಸ್ತ್ರಚಿಕಿತ್ಸೆಯ ಉದ್ದೇಶವೆಂದರೆ, ಚಿಕಿತ್ಸೆಗೊಳಪಟ್ಟ ವ್ಯಕ್ತಿ ತೃಪ್ತಿ ಹೊಂದಲಿ ಎಂಬುದೇ ಆಗಿರುತ್ತದೆ. ಈಗ ಎಲ್ಲ ಕಡೆ ಕಾಸ್ಮೆಟಿಕ್ ಸರ್ಜರಿಯು ಲಭ್ಯವಿದೆ. ಆಗರ್ಭ ಶ್ರೀಮಂತರಿಂದ ಹಿಡಿದು ಶ್ರೀಸಾಮಾನ್ಯರವರೆಗೆ ಎಲ್ಲರಿಗೂ ಕೈಗೆಟಕುವಂತಿದೆ.

ಪ್ಲಾಸ್ಟಿಕ್ ಸರ್ಜರಿ ಬಗ್ಗೆ ಹೆಚ್ಚಿನ ಮಾಹಿತಿ/ತಿಳಿವಳಿಕೆ ಪಡೆಯಲು, ಅದು ನಿಮಗೆ ಹೇಗೆ ಸಹಾಯಕವಾಗುತ್ತದೆ ಎಂಬುದನ್ನು ತಿಳಿದುಕೊಳ್ಳಲು, ನಮ್ಮ ಪ್ರಖ್ಯಾತ ಪ್ಲಾಸ್ಟಿಕ್ ಸರ್ಜನರುಗಳ ತಂಡದ ಮುಖ್ಯಸ್ಥ ಡಾ॥ ಸತೀಶ್ ಎಚ್. ವಿ. (ಎಂ.ಎಸ್., ಡಿ.ಎನ್.ಬಿ., ಎಂ.ಸಿ.ಎಚ್., ಡಿ.ಎನ್.ಬಿ.ಯಲ್ಲಿ ೧೦ ವರ್ಷಗಳ ಸೇವಾನುಭವ) ವಿಕ್ರಮ್ ಆಸ್ಪತ್ರೆಯಲ್ಲಿ ಲಭ್ಯವಿರುತ್ತಾರೆ.

**ಡಾ॥ ವಿಕ್ರಮ್**
ನಂ. ೪೬, ವಿವೇಕಾನಂದ ರಸ್ತೆ, ಯಾದವಗಿರಿ, ಮೈಸೂರು - ೫೭೦ ೦೨೦




# ನಾದಲೀಲೆಯ ಭಾವಲೀಲೆ

ನಾಗವೇಣಿ ವಿ.

ಇಪ್ಪತ್ತನೆಯ ಶತಮಾನಕ್ಕೆ ಹೊಸ ಮೆರಗನ್ನು ತಂದುಕೊಟ್ಟವರು ಕವಿ ಬೇಂದ್ರೆ. ಅಧ್ಯಾತ್ಮವನ್ನು ಪ್ರಕೃತಿಯಲ್ಲಿ, ಪ್ರಕೃತಿಯನ್ನು ಅಧ್ಯಾತ್ಮವಾಗಿ ನೋಡಿ ಆ ಮೂಲಕ ಸುಂದರ ಕವನಗಳು ಸೃಷ್ಟಿಯಾಗಿವೆ. ಪ್ರೀತಿ, ಸ್ನೇಹ, ವಾತ್ಸಲ್ಯ, ನಿಸರ್ಗಪ್ರೇಮ, ಸಾಮಾಜಿಕ ಕಳಕಳಿ ಹೀಗೆ ವಿಷಯ ವೈರುಧ್ಯಗಳೇ 'ನಾದಲೀಲೆ' ಕವನಸಂಕಲನದ ವೈಶಿಷ್ಟ್ಯ. ಇಲ್ಲಿನ ಭಾವಲೀಲೆಯು ಸಹೃದಯರಿಗೆ ಮುಟ್ಟುವುದು ಅಷ್ಟು ಸುಲಭವಲ್ಲ, ಕವನದ ಹಿಂದಿನ ಆಂತರ್ಯವನ್ನು ತಿಳಿಯುವುದು ಕಷ್ಟ.

### ಪೀಠಿಕೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬೇಂದ್ರೆಯವರು ಕವಿಯಾಗಿ ರೂಪುಗೊಂಡ ನವೋದಯ ಸಾಹಿತ್ಯದ ಕಾಲಮಾನ ಬಹು ಅಪೂರ್ವವಾದುದು. ಸಾಹಿತ್ಯಲೋಕದಲ್ಲಿ ಅವರದು ಅತ್ಯಂತ ಮಹತ್ವವಾದ ಹೆಸರು ಅಂಬಿಕಾತನಯದತ್ತ. ಬೇಂದ್ರೆಯವರ ಹೆಸರು ಚಿರಸ್ಥಾಯಿಯಾಗಿ ಉಳಿಯುವುದು ಕಾವ್ಯ ಪ್ರಕಾರದಲ್ಲಿ. ಅವರ ಕಾವ್ಯ ಮೋಹಕತೆಯಿಂದ ಕೂಡಿ, ಸಹೃದಯರನ್ನು ಹೊಸ ಲೋಕಕ್ಕೆ ಕರೆದೊಯ್ಯುವ ಮಾಂತ್ರಿಕ ಶಕ್ತಿಯನ್ನು ಹೊಂದಿದೆ.

ಒಲುಮೆಯನ್ನು ಕುರಿತ ಗೀತೆಗಳಲ್ಲಿ ಬೇಂದ್ರೆಯವರು ತರುವ ರಸ ಅಪರೂಪವಾದದ್ದು, ಉದಯದ ವ್ಯಾಪಾರಗಳನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿರುವಂತೆ ಇವರು ಜನರ ಬಾಳುವೆಯಲ್ಲಿ ಪ್ರೇಮ ಹರಿಯುವ ರೀತಿಯನ್ನೂ ನೋಡಿದ್ದಾರೆ. ಇವರ ಭಾವಗೀತೆಗಳಲ್ಲಿ ವಿಷಯ ವೈರುಧ್ಯವನ್ನು ಕಾಣಬಹುದು. ಇಂತಹ ಭಾವಗೀತೆಗಳನ್ನು ಹೊಂದಿರುವ ಕವನ ಸಂಕಲನಗಳಲ್ಲಿ 'ನಾದಲೀಲೆ' ಕವನ ಸಂಕಲನವೂ ಒಂದು.

### ನಾದಲೀಲೆ

ಈ ಕವನ ಸಂಕಲನದ ಕವನಗಳು ನಾದಮಯತೆ, ಲಯತಾನತೆಯಿಂದ ಭಾವಗೀತೆಯ ಸ್ವರೂಪವನ್ನು ಪಡೆದಿವೆ. ಇದರಿಂದ ಸಂಗೀತ ಕ್ಷೇತ್ರದಲ್ಲೂ ತಮ್ಮ ಛಾಪನ್ನು ಬೀರಿವೆ. 'ನಾದಲೀಲೆ' ಎಂದರೆ ಮಧುರವಾದ ಧ್ವನಿಗಳ ಆಟ, ಸೌಂದರ್ಯ ಎಂದರ್ಥ. ಕೇವಲ ಸಹೃದಯರನ್ನೇ ಅಲ್ಲದೇ ಸಂಗೀತ ಪ್ರಿಯರಿಗೂ ಈ ಕವನಗಳು ತಮ್ಮ ಇಂಪನ್ನು, ಸೊಗಸನ್ನು ನೀಡುತ್ತವೆ. 'ನಾದಲೀಲೆ' – ಈ ಎರಡು ಶಬ್ದಗಳಲ್ಲೇ ಬೇಂದ್ರೆಯವರ ಕವನಗಳಲ್ಲಿ ಇರುವ ನಾದ, ಭಾವ, ತಾಳ, ಲಯಗಳನ್ನು ಗುರುತಿಸಬಹುದು.

ಬೇಂದ್ರೆಯವರು ಕುಮಾರವ್ಯಾಸನ ಭಾಷೆ, ಲಕ್ಷ್ಮೀಶನ ನಾದ ವೈಭವಗಳ ಜೊತೆಗೆ ಶುದ್ಧ ದೇಶೀಯ ಧಾರವಾಡದ ಕನ್ನಡದ ಜಾನಪದೀಯ ಸೊಗಡು – ಈ ಮೂರನ್ನೂ ಪರಿಪಕ್ವವಾಗಿ ಹದವಾಗಿಸಿಕೊಂಡು ಕಾವ್ಯವನ್ನು ಆಕರ್ಷಕಗೊಳಿಸಿ ಜನಪ್ರಿಯಗೊಳಿಸಿದರು.

ಬೇಂದ್ರೆಯವರ ಕಾವ್ಯಗಳನ್ನು ಅರ್ಥಮಾಡಿಕೊಳ್ಳಲು ಕೇವಲ ಶಬ್ದಾರ್ಥ ಪಾಂಡಿತ್ಯ ಸಾಲದು. ಕವಿಯ ಮನಸ್ಸಿನ ಅಂತರಂಗದ ಭಾವನೆಗಳನ್ನು ಅರಿತು, ಅಲ್ಲಿನ ನಿಜವಾದ ಭಾವವನ್ನು ಅರಿಯುವ ಸಾಮರ್ಥ್ಯವನ್ನು ಹೊಂದಿರಬೇಕು. ಈ ಹಿನ್ನೆಲೆಯಲ್ಲಿ ಬೇಂದ್ರೆಯವರ ಕವನದ ಆಳ ತಿಳಿಯುವುದು ಸಹೃದಯರಿಗೆ ಕಷ್ಟಸಾಧ್ಯ.

ತಮ್ಮ ಪ್ರತಿಭೆಯ ಹಿನ್ನೆಲೆಯಲ್ಲಿ ಬೇಂದ್ರೆಯವರು ವರಕವಿ ಎನಿಸಿದ್ದಾರೆ. ಇವರ ಕಾವ್ಯಸೃಷ್ಟಿಗೆ ಪ್ರೇರಣೆ ಹಾಗೂ ಪ್ರಭಾವವೂ ಸಾಹಿತ್ಯ ಲೋಕದ ಇನ್ನಿತರ ಭಾಷೆಗಳಿಂದ ದೊರಕಿದೆ. ಅದರಲ್ಲಿಯೂ ಸಂಸ್ಕೃತ, ಇಂಗ್ಲಿಷ್ ಸಾಹಿತ್ಯ ಹಾಗೂ ಜನಪದ ಹೆಚ್ಚಿನ ಪ್ರಭಾವ ಬೀರಿವೆ. ಇವುಗಳ ಪರಿಣಾಮವನ್ನು ಅವರ ಕವನಗಳಲ್ಲಿ ಗುರುತಿಸಬಹುದು.

### ಭಾವಲೀಲೆ

ನಾದಲೀಲೆಯ ಜೊತೆ
ಭಾವಲೀಲೆ ಸೇರಿದರೆ ಹುಟ್ಟುವುದು
ಗಾನಲೀಲೆ;
ಹಾಡಿನ ಮೂಲಕ ನಡೆಯುವುದು
ನಾದ-ಭಾವಗಳ ಸಂಗಮ
ಇದರಾಚೆಗಿನ ಕಾವ್ಯಲೀಲೆಯಲ್ಲಾಗುವುದು
ಕವಿ ಸಹೃದಯರ ಹೃದಯಂಗಮ

– ನಾದಲೀಲೆಯ ಜೊತೆ ರಸಪೋಷಕವಾದ ಭಾವಲೀಲೆಯೂ ಸೇರಿದರೆ ಅಲ್ಲಿ ಸುಂದರವಾದ ಕವನದ ಗಾನಲೀಲೆ ಅವತರಿಸುತ್ತದೆ. ಈ 'ನಾದಲೀಲೆ' ಕವನ ಸಂಕಲನದ ಕವನಗಳು ಮಾತಿನ ಲಯ, ಹದವರಿತ ಭಾವ, ಗಂಭೀರ ಚಿಂತನೆಗಳಿಂದಾಗಿ ಇಲ್ಲಿನ ಪದ್ಯಗಳು ಬಹಳ ಯಶಸ್ವೀ ಕವನಗಳೂ ಆಗಿವೆ.

'ನಾದಲೀಲೆ' ಕವನಸಂಕಲನದ ಕವನಗಳನ್ನು, ಅದರ ಭಾವಲೀಲೆಯನ್ನು ತಿಳಿಯಲು ನಾವು ಬೇಂದ್ರೆಯವರ ಶಬ್ದಲೀಲೆಯನ್ನು ಮೊದಲು ಅರಿಯಬೇಕು.

ನಾದಬೇಕು ನಾದಬೇಕು
ನಾದಾನ ನಾದಬೇಕು
ನಾದಕ್ಕೆ ಪ್ರತಿ ನಾದಬೇಕು
ನಾ ದಾಸನ ಆದಮ್ಯಾಲೆ ಬ್ಯಾರೆ ಯಾಕ ವಾದ ಬೇಕು ?
ಹೊರಗಿನ ದೇವರು ಯಾಕ ಬೇಕು ?
ಒಳಗಿನ ದೇವನ ಸಾಕಬೇಕು

– ಇದು ಬೇಂದ್ರೆಯವರ ಜೀವನದೃಷ್ಟಿ. ಇದರ ಎಳೆಗಳನ್ನು ಹಿಡಿದುಕೊಂಡು ನಾದಲೀಲೆಯಲ್ಲಿನ ಭಾವಲೀಲೆಯನ್ನು ತಿಳಿಯಬಹುದು ಎನಿಸುತ್ತದೆ. ಕವನಸಂಕಲನದಲ್ಲಿ ಒಟ್ಟು ೫೦ ಕವನಗಳಲ್ಲಿಯೂ ವಿಷಯ ವೈವಿಧ್ಯ ಹಾಗೂ ಛಂದೋ ವೈವಿಧ್ಯವನ್ನು ಕಾಣಬಹುದು. ಈ ಕವನಗಳು ಆನಂದಪ್ರೇರಕವಾಗಿ, ಕತ್ತಲನ್ನು ಕಳೆದು ಹೊಸ ಜೀವನ ಪ್ರಭಾವ ನೀಡುವ ಸಾಮರ್ಥ್ಯವನ್ನು ಹೊಂದಿವೆ.

## ನಾದಲೀಲೆಯ ಭಾವಲೀಲೆ

ಕವಿಗಳು ಸ್ವಭಾವತಃ ಭಾವಜೀವಿಗಳು. ಬಿ.ಎಂ.ಶ್ರೀ.ಯವರಿಂದ ಕನ್ನಡೀಕರಿಸಲ್ಪಟ್ಟ 'ಇಂಗ್ಲಿಷ್ ಗೀತೆಗಳು' ಎಬ್ಬಿಸಿದ ಹೊಸ ಅಲೆಯಿಂದ ಭಾವವೇ ಪ್ರಧಾನವಾದ ಭಾವಗೀತ ಪ್ರಕಾರ ಪ್ರಸಿದ್ಧಿಗೆ ಬಂತು. ಕವಿಗೆ ತನ್ನ ಮನದಲ್ಲಿ ಅಡಗಿಸಿಟ್ಟ ಭಾವಪ್ರಪಂಚದ ಅಭಿವ್ಯಕ್ತಿಗೆ ಸೂಕ್ತ ಪ್ರಕಾರವೊಂದು ಸೃಷ್ಟಿಯಾಯಿತು.

ಈಗ ಅವರ 'ನಾದಲೀಲೆ' ಕವನ ಸಂಕಲನವನ್ನು ತೆಗೆದುಕೊಂಡರೆ, ಒಂದೊಂದು ಕವನಗಳಲ್ಲೂ ಒಂದೊಂದು ತೆರನಾದ ಭಾವ ಸ್ಫುರಿಸಿ ಭಾವಸರೋವರವೇ ಕಣ್ಣೆದುರು ಇರುವಂತಿದೆ.

ಅವರ ಕವನಗಳಲ್ಲಿನ ಭಾವಲೀಲೆಯನ್ನು ಹೀಗೆ ಗಮನಿಸಬಹುದು.

'ಬೆಂದು ಬೇಂದ್ರೆಯಾದರು' ಎಂಬ ಮಾತು ಕಾವ್ಯಲೋಕದಲ್ಲಿ ಅತ್ಯಂತ ಅರ್ಥಪೂರ್ಣವಾದುದು. ಅವರ ಕವನಗಳೇ ಬೇಂದ್ರೆಯವರ ಆತ್ಮಚರಿತ್ರೆಯಾಗಿ ಮೈದಳೆದಿವೆ. ಜೀವನದ ಕಷ್ಟ, ಸುಖ, ನೋವು-ನಲಿವು, ದುಃಖಗಳೇ ಕವನದ ಕಾವ್ಯವಸ್ತುವಾಗಿ ನಿಂತು ಸ್ವಅನುಭವದ ಭಾವಾಭಿವ್ಯಕ್ತಿ ಹೊಂದಿ ಕವನಗಳು ಭಾವಗೀತೆಗಳಾಗಿವೆ.

ಕನ್ನಡ ಸಾಹಿತ್ಯದ ಸರ್ವಶ್ರೇಷ್ಠ ಕವನವಾದ 'ಭಾವಗೀತ' ಕವನವೂ ಭಾವಗೀತವೆಂಬ ಪದಪುಂಜದಿಂದ ಭಾವಗೀತೆಯ ಸ್ವರೂಪವನ್ನು ವ್ಯಾಖ್ಯಾನ ನೀಡುತ್ತವೆ :

ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ
ಮಸೆದ ಗಾಳಿ ಪಕ್ಕ ಪಡೆಯುತ್ತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತ್ತಿತ್ತು ಒಂದು ಮಂದಹಾಸಾ

ಬೇಂದ್ರೆಯವರು ಹುಟ್ಟುಹಾಕಿದ ಗೆಳೆಯರ ಗುಂಪು ವಿಘಟನ ಆದಾಗ ಅದರ ದುಃಖವನ್ನು ನುಂಗುವಾಗ ಹುಟ್ಟಿದ ಹಾಡಿದು. ಅಲ್ಲಿನ ದುಃಖದ ಭಾವಾಭಿವ್ಯಕ್ತಿಯೂ 'ಭಾವಗೀತ' ಎಂಬ ಕವನದಿಂದ ಹೊರಹೊಮ್ಮಿ ಪ್ರಕೃತಿಯ ಜೊತೆಗೆ ಸಂಬಂಧವನ್ನು ತೋರಿಸಿದೆ. ಇಲ್ಲಿ ಭೃಂಗ, ಜೇನು, ಜೇಡ, ಹೂವು, ಗಾಳಿ ಇವುಗಳ ಮೂಲಕ ಪ್ರಕೃತಿಯಲ್ಲಿನ ಬದಲಾವಣೆಯನ್ನು ಬಿಂಬಿಸುತ್ತಾರೆ ಬೇಂದ್ರೆ.

ಭೃಂಗ ಕಲ್ಪನಾ ವಿಲಾಸವನ್ನು ಹೊತ್ತು ಮುಗಿಲಲ್ಲಿ ಹಾರಾಡುವಾಗ ತಾಳಬದ್ಧವಾಗಿ ಗಾಳಿ ಬೀಸುವ ಮೂಲಕ ಸಹಜಪ್ರಾಸಕ್ಕೆ ಎಡೆಮಾಡಿಕೊಡುತ್ತದೆ. ಕಾವ್ಯದ ಸೃಷ್ಟಿಕ್ರಿಯೆಯ ಪವಾಡವನ್ನು ಕವಿ ಬೇಂದ್ರೆಯವರು ಬಣ್ಣಿಸುವ ಬಗೆ ಅನನ್ಯವಾಗಿದೆ.

ಬೇಂದ್ರೆಯವರಿಗಿದ್ದ ತಾಯಿಯ ಬಗೆಗಿನ ಪ್ರೀತಿ, ಗೌರವ, ಭಕ್ತಿಯನ್ನು ಅವರ ಕವನಗಳಲ್ಲೇ ಕಾಣಬಹುದು. 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದಲೇ ತಾಯಿಯ ಬಗೆಗಿನ ಅತ್ಯಂತ ಪ್ರೇಮವನ್ನು ಕಾಣಬಹುದು. ನಾದಲೀಲೆಯ ಕವನ ಸಂಕಲನದಲ್ಲಿ ತಾಯಿ ಹಾಗೂ ಮಗುವಿನ ಮಧುರ ಸಂಬಂಧದ, ತಾಯಿಯ ಮಮತೆ, ವಾತ್ಸಲ್ಯಗಳು ಹೇಗೆ ಭಾವಾಭಿವ್ಯಕ್ತಿಗೊಳ್ಳುತ್ತವೆ ಎಂಬುದರ ಬಗ್ಗೆ ಕವನಗಳಿವೆ.

ಹಸುಗೂಸು ಮಲಗಿಹುದು
ಹುಸಿನಗೆಯು ತೊಲಗಿಹುದು
ಕನಸಿನಾಚೆಗೆಯಿರುವ ನಿದ್ರೆಯಲ್ಲಿ
ತನ್ನನೂ ಮರೆತಿಹುದೊ (ತಾಯಿ ಕೂಸು-ಕವನ)

– ತಾಯಿ ತನ್ನ ಕೆಲಸದಲ್ಲಿ ಮಗ್ನಳಾದರೂ ಸಹ ಅವಳ ಮನಸ್ಸೆಲ್ಲಾ ಅವಳ ಕೂಸಿನೆಡೆ ಇರುತ್ತದೆ. ಇದು ತಾಯಿ ಕೂಸಿನ ಅವಿನಾಭಾವ ಸಂಬಂಧವನ್ನು ತೋರಿಸಿ ತಾಯಿಗೆ ಜೀವನದಲ್ಲಿ ಅಗ್ರಸ್ಥಾನವನ್ನು ನೀಡಿದೆ. ಅವಳಿಗಿಂತ ಹೆಚ್ಚಿನವರು ಯಾರೂ ಇಲ್ಲ. ಜನ್ಮಕೊಟ್ಟ ತಾಯಿಯ ಮಾತೇ ಹೆಚ್ಚು.

ತಾಯಿಗಿಂತ ಯಾರು ಹೆಚ್ಚು ?
ಬಸಿರ ಕುತ್ತ ಹೊತ್ತುಕೊಂಡು
ಬಯಕೆಗಾಗಿ ಕಾಡಿಬೇಡಿ
ಬೇನೆ ತಿಂದು ಬಳಲಿ ಹೆತ್ತು
ನಕ್ಕರಾರೊ ನನ್ನ ಚೆನ್ನ ? (ತಾಯಿ-ಮಾತು-ಕವನ)

ಈ ಇಡೀ ಕವನದಲ್ಲಿ ತಾಯಿಯ ಪಾತ್ರದ ಮಹತ್ವ ಕುರಿತು ಅವಳಿಗಿಂತ ಯಾರೂ ಹೆಚ್ಚಲ್ಲ ಎಂಬ ಭಾವವಿದೆ. ಮಗುವನ್ನು ಲಾಲಿಸಿ ಪಾಲಿಸಿ, ಅದರ ತಪ್ಪು ಹೆಜ್ಜೆಗಳನ್ನು ಸರಿಮಾಡುವ ತಾಯಿಯ ಮಾತುಗಳು ಅನನ್ಯ. ನಮ್ಮ ಎರಡನೇ ಹುಟ್ಟೇ ತಾಯಿಯ ಮಾತಿನಿಂದ. ತಾಯಿ ಮಮತೆಯ ಭಾವವೂ ಇಲ್ಲಿ ಸ್ಫುರಿಸುತ್ತದೆ. ಅಂತೆಯೇ ಆ ತಾಯಿಯೂ ತನ್ನ ಮಗುವನ್ನು ಕಳೆದುಕೊಂಡಾಗ ಅವಳ ಮನಸ್ಸಿನ ದುಃಖವನ್ನು ಸ್ವತಃ ಗಂಡನೇ ನೀಗಿಸಲಾರ. ಇದನ್ನು ಅವರ ಮತ್ತೊಂದು ಕವನವೂ ಎತ್ತಿ ತೋರಿಸುತ್ತದೆ.

ಸತ್ತ ಮಗುವಿನ ಹೆಣದ ಮುಂದೆ ಕುಳಿತ ತಾಯಿಯ ಮುಖವನ್ನು ನೋಡಲಾರದೆ, ''ನಿನ್ನ ಈ ದುಃಖವನ್ನು ಮರೆ'' ಎಂದು ಹೇಳಲು ಸಾಧ್ಯವಾಗದ ಗಂಡನ ಮಾತುಗಳೂ 'ನೀ ಹೀಂಗ ನೋಡಬ್ಯಾಡ ನನ್ನ' ಕವನದಲ್ಲಿ ನೋಡಬಹುದು. ''ಅತ್ತಾರೆ ಅತ್ತು ಬಿಡು, ಹೊನಲು ಬರಲಿ, ನಕ್ಕ್ಯಾಕ ಮರಸಲೇ ದುಕ್ಕ? ಎವೆಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿ ಕಚ್ಚಿಹಿಡಿಯದಿರು ಬಿಕ್ಕ'' – ಈ ಕವನವೂ ಬೇಂದ್ರೆಯವರ ಜೀವನದ ಘಟನೆಯನ್ನು ಆಧರಿಸಿ ಅಲ್ಲಿನ ಭಾವನೆಗಳನ್ನು ಹೊರಹೊಮ್ಮಿಸಿವೆ.

ಗಂಡ-ಹೆಂಡತಿಯರ ಸಂಬಂಧ ಅವಿನಾಭಾವವಾದದ್ದು. ಬೇಂದ್ರೆ ಕವನಗಳಲ್ಲಿ ಮೂಡಿಬಂದಿರುವ ಭಾವನೆಗಳೂ ಇವರಿಬ್ಬರ ನಡುವಿನ ಪ್ರೀತಿ, ಪ್ರೇಮವನ್ನು ತೋರಿಸುತ್ತವೆ :

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದುಕು (ನಾನು ಬಡವಿ - ಕವನ)

ಸತಿ ಪತಿಯ ಪ್ರೇಮವೂ ಸುಂದರ ಜೀವನಕ್ಕೆ ತಳಪಾಯ.

ದಂಪತಿಗಳು ಸೇರಿ ಫಾಲ್ಗುಣ ಪೂರ್ಣಿಮೆಯಲ್ಲಿ ಗಂಗೋಘದಲ್ಲಿ ದೀಪ ತೇಲಿಬಿಟ್ಟು ಸಂದರ್ಭದಿಂದ ಪ್ರೇರಿತರಾಗಿ ಆಗ ಹೊಳೆದ ಭಾವ-ಭಾವನೆಗಳ ಹಾಡೇ 'ದೀಪ' ಕವನ.

''ಸಾನುರಾಗದಿಂದ ಸತಿ ಪತಿಯರು ದೀಪವನ್ನು ತೇಲಿಬಿಟ್ಟೆವೇ'' ಎಂಬುದು ಬೇಂದ್ರೆಯವರು ಕಾಶೀಯಾತ್ರೆಯಲ್ಲಿ ಬರೆದ ಗೀತವಾಗಿದೆ. 'ಮನದನ್ನೆ' ಕವನದಲ್ಲಿ ಕವಿಯ ಮನಸ್ಸಿನಲ್ಲಿರುವ ಹೆಂಡತಿಯ ಬಗೆಗಿನ ಭಾವನೆಗಳು ಮೂಡಿವೆ :

ನೀನು ನನ್ನವಳೆಂದು ಬಳಿಗೆ ಬಂದೆ
ಹೊಸ ಹುಟ್ಟು ಬರುವುದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿ ತಂದೆ

ಗಂಡ ಹೆಂಡತಿಯರ ಈ ಸಂಬಂಧದ ಜೊತೆ ಅವರಿಬ್ಬರ ನಡುವಿನ ಪ್ರೀತಿ, ಪ್ರೇಮ, ಸರಸ, ವಿರಸಗಳು ಸಹ ಬೇಂದ್ರೆಯವರಿಗೆ ಮುಖ್ಯ. ಮುನಿದ ಸತಿಯನ್ನು ಸಮಾಧಾನಪಡಿಸುವ ಪರಿ ಹೀಗಿದೆ :

ನಾನೊಂದ ನೆನೆದರೆ ನೀನೊಂದ ನೆನೆಯುತಿ
ನನ್ನ ನಗಿಗ್ಯಾಕ ಮುನಿಯುತಿ
ಎಂದೆನಗ
ಬಿದ್ದಿತು ನೋಡು ಇತಿಮಿತಿ

ಇವರಿಬ್ಬರ ದಾಂಪತ್ಯ ಜೀವನದಲ್ಲಿನ ಈ ಸಂದರ್ಭಗಳು ಹಾಲಿನೊಡನೆ ಜೇನು ಬೆರೆಸಿದಂತೆ.

ಕವನಸಂಕಲನದಲ್ಲಿ ಕನಸಿನ ಭಾವವನ್ನು ಬಿಂಬಿಸುವ ಕವನಗಳು ನಮ್ಮನ್ನು ಕನಸಿನ ಲೋಕಕ್ಕೆ ಕೊಂಡೊಯ್ಯುತ್ತವೆ :



ನಿದ್ದೆಗಡಲಿನಲ್ಲಿ ನಾನು
ಎದ್ದೇಳುತಲಿದ್ದೆನಾಗ
ಏಳು ಕನ್ನಿಕೆಯರು ಬಂದು
ಏಳು ಎಂದು ಎಂದರೋ - ಏಳು ಎಂದು ಎಂದರು
(ಏಳು ಕನ್ನಿಕೆಯರು - ಕವನ)

ನಿದ್ರೆಯೇ ಕನಸಿಗೆ ಮೂಲ. ನಿದ್ರೆಯ ಮಂಪರಿನಲ್ಲಿ ಕಂಡ ಕನಸುಗಳೇ ಸೊಗಸಿನವು.

ಬನ್ನಿ, ಬನ್ನಿ ಎಂದು ಕನಸುಗಳನ್ನು ಆಹ್ವಾನಿಸುತ್ತಾರೆ. ತನ್ನ ತಾರುಣ್ಯದ ಕನಸು, ಬಾಲ್ಯದಲ್ಲಿನ ಹುಡುಗಾಟವನ್ನು ನೆನೆಯುತ್ತಾ ಮತ್ತೆ ಅವನ್ನು ಬರಮಾಡಿಕೊಳ್ಳುತ್ತಾರೆ :

*ಹಸುಳೆತನದ ನಸುನಗೆಯಲಿ*
*ಹುಸಿಗತೆಗಳ ಹೊಸ ಜಗದಲಿ*

ಅಂತೆಯೇ 'ಮದ್ಯ' ಕವನದಲ್ಲಿ ಕನಸಿನಲ್ಲಿ ಮಾಡುವ ಮದ್ಯ ಸೇವನೆಯ ಬಗ್ಗೆ ಅದರ ಅನುಭವದ ಭಾವವಿದೆ :

*ನನ್ನ ನಾನು ಮರೆಯುವಂತೆ*
*ಮದ್ಯವನ್ನು ಕುಡಿದೆನು*
*ತನ್ನ ತಾನು ಅರಿಯುವಂಥ*
*ವಿದ್ಯೆಯನ್ನು ಹಿಡಿದೆನು*

ಮದ್ಯದ ಮೂಲಕವಾಗಿ ಹೇಳಿ ಕೊನೆಗೆ ಅಲ್ಲಿನ ಅನುಭವವನ್ನು ದೇಗುಲ, ತೀರ್ಥ, ಶೂಲ ಈ ಪದಗಳಲ್ಲಿ ಹಿಡಿದಿಟ್ಟಿದ್ದಾರೆ. ಕನಸಿನ ಭ್ರಮೆಯ ಧಾಟಿಯಲ್ಲಿ 'ಕಾಣುವ ಕಣ್ಣಟ್ಟಿಲ್ಲ' ಕವನ ಮೂಡಿಬಂದಿದೆ. ಕನಸಿನ ಮೂಲಕ ಅಜ್ಞಾನ ಮುಸುಕು ಸರಿಸಿ ಎಂಬ ಎಚ್ಚರವನ್ನು ನೀಡಿದ್ದಾರೆ, ಪ್ರೀತಿ ಹಾಗೂ ಕಾಮವನ್ನು 'ಗೆ' ಎಂಬ ಕವನದಲ್ಲಿ ಒಂದು ಕನಸನ್ನು ಕುರಿತು ವಿವರಿಸುತ್ತಾರೆ. ಪ್ರೀತಿಯ ಹಂಬಲದ ಭಾವವಿದೆ.

ಪ್ರೀತಿ, ಪ್ರೇಮ, ಪ್ರಣಯಗಳು ಸಹ ಕವಿಗೆ ಸುಂದರವಾದ ಕವನಗಳನ್ನು ಸೃಷ್ಟಿಸುವ ಪ್ರೇರಕ ಅಂಶ ಗಳಾಗಿವೆ. ಅನಂತ ಶಕ್ತಿಯಲ್ಲಿ ಪ್ರೀತಿ, ಪ್ರೇಮವೂ ಅಡಗಿವೆ :

*ಅಷ್ಟು ಪ್ರೀತಿ ಇಷ್ಟು ಪ್ರೀತಿ*
*ಎಣಿಸಿ ಕಷ್ಟ ಬಡದಿರು...*

*ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ*
*ಚುಂಬಕ ಗಾಳಿಯು ಬೀಸುತಿದೆ...*

– ಹೀಗೆ ಭಾವಾಭಿವ್ಯಕ್ತಿಯೂ ಪ್ರಕೃತಿಯ ಅಂಶಗಳ ಜೊತೆಗೂಡಿ ಅವುಗಳ ಹಿನ್ನೆಲೆಯಲ್ಲಿ ಸುಂದರ ಚಿತ್ರಣವನ್ನು ನೋಡಬಹುದಾಗಿದೆ.

ನವೋದಯ ಸಾಹಿತ್ಯದ ಪ್ರಮುಖ ಕಾವ್ಯವಸ್ತು ಗಳೆಂದರೆ, ಪ್ರಕೃತಿ, ಅಧ್ಯಾತ್ಮ, ದೇಶಭಕ್ತಿ, ಹಾಗಾಗಿಯೇ ಬೇಂದ್ರೆಯವರು ಪ್ರಕೃತಿಯನ್ನು ಕೇವಲ ರಸಾಸ್ವಾದನೆಗೆ ಬಳಸಿಕೊಳ್ಳದೆ ಕಾವ್ಯ ಜಗತ್ತಿನಲ್ಲಿ ಒಂದು ಮಹತ್ವದ ಮಾರ್ಪಾಡಿಗಾಗಿ ತರುತ್ತಾರೆ.

ಬೇಂದ್ರೆಯವರಿಗೆ ಅವರ ಕಾವ್ಯ ಜೀವನದ ಮೊದಲ ಹಂತಗಳಲ್ಲಿ ಪ್ರಕೃತಿಯೂ ತಾನು ಹೊರಗೆ ನಿಂತು ಅನುಭವಿಸಬಹುದಾದ ವಸ್ತು ಮಾತ್ರವಾಗಿರಲಿಲ್ಲ, ಅವರು ಸ್ವತಃ ತಮ್ಮನ್ನು ಪ್ರಕೃತಿಯ ಒಂದು ಅವಿಭಾಜ್ಯ ಅಂಗವೆಂದೇ ಭಾವಿಸಿದ್ದರು.

'ನಾದಲೀಲೆ' ಕವನ ಸಂಕಲನದಲ್ಲಿ ಹಲವಾರು ಪ್ರಕೃತಿ ಗೀತೆಗಳನ್ನು ನೋಡಬಹುದು. ಕವಿಯ ಭಾವ ಪ್ರಪಂಚದಲ್ಲಿ ಪ್ರಕೃತಿಯಲ್ಲಿನ ಎಲ್ಲಾ ಅಂಶಗಳು ತನ್ನ ಪ್ರಭಾವವನ್ನು ಬೀರುತ್ತವೆ.

ಕವನ ಸಂಕಲನದ ಪ್ರಾರಂಭದ ಕವನವಾದ 'ನಾದಲೀಲೆ'ಯಲ್ಲಿ ನಾಯಕನು ಗೆಳತಿಯ ಜೊತೆಯಲ್ಲಿ ಅಭಿಪ್ರಾಯ ವಿನಿಮಯ ಮಾಡಿದಂತೆ, ತಾನು ಕಂಡ ಪ್ರಕೃತಿಯ ದೃಶ್ಯವನ್ನು ವಿವರಿಸುವಂತೆ ಕವನದ ಭಾವ ಹೊಮ್ಮಿದೆ. ಇದರ ಸ್ವಾರಸ್ಯವೆಂದರೆ ಒಂದು ಕಡೆ ಮನಸ್ಸನ್ನು ಸೂರೆ ಮಾಡುವ ಪ್ರಕೃತಿ ಇದೆ. ಅದರ ಜೊತೆಗೆ ಕೋಲಾಟದ ಧಾಟಿಯಿಂದ ಕವನದ ಸ್ವರೂಪವೇ ಭಿನ್ನವಾಗಿದೆ.

ನಿಸರ್ಗದಲ್ಲಿ ಋತುಮಾನಗಳ ಬದಲಾವಣೆಯನ್ನು ಒಂದು ಪುಟ್ಟ ಕವನದಲ್ಲಿ ಅಡಗಿಸಿದ್ದಾರೆ :

*ನಿಗಿನಿಗಿ ಮುಗಿಲು...*
*ಬಿಸಿಯುಸಿರಿನ ಗಾಳಿ...*
*ಹನಿಯೊಡೆಯಿತು ಮೋಡ...*
(ನಿಗಿನಿಗಿ ಮುಗಿಲು - ಕವನ)

ಋತುಮಾನದ ಗಾಳಿ, ಮಳೆ, ಬಿಸಿಲುಗಳ ಮೂಲಕ ಕವಿಯ ಭಾವವೂ ಸಹ ಅದಕ್ಕೆ ತಕ್ಕಂತೆ ಬದಲಾಗುತ್ತಾ ಸುಂದರ ಭಾವಸೃಷ್ಟಿಯೂ ಉಂಟಾಗುತ್ತದೆ. ಬೇಂದ್ರೆ ಯವರು ಪ್ರಕೃತಿಯ ಒಂದು ಸಣ್ಣ ಭಾಗದಿಂದಲೇ ತಮ್ಮ ಕವನದ ವಸ್ತುವನ್ನಾಗಿ ಬಳಸಿಕೊಂಡಿದ್ದಾರೆ.




ಭೂಮಿಯ ಮೇಲೆ ಪಾರಿಜಾತ ಹೂವನ್ನು ತೋರಿಸಿ, ಸಮರ್ಥ ಸುಂದರ ಸಾದೃಶ್ಯದ ಮೂಲಕ ಪರಿಚಯವನ್ನು ಮಾಡಿಕೊಡುತ್ತಾ ನಿಧಾನವಾಗಿ ಅದರ ಅಂತರಂಗವನ್ನು ಪ್ರವೇಶ ಮಾಡುತ್ತಾರೆ. ಪಾರಿಜಾತ ಹೂವು ತುಸು ಹಳದಿ, ಕೆಂಪು ನಸು ಬಣ್ಣದ ಹೂವು. ಗಾತ್ರದಲ್ಲಿ ಚಿಕ್ಕದಾದರೂ ತನ್ನ ಆಕರ್ಷಕ ಬಣ್ಣದಿಂದ ಕವಿಯ ಕಣ್ಣನ್ನು ಸೆಳೆಯುತ್ತದೆ. ಬಾಹ್ಯ ಆಕರ್ಷಣೆಯ ಮೂಲಕ ಕವಿ ಅದರ ಅಂತರಂಗ ದರ್ಶನವನ್ನು ಮಾಡಿಸುತ್ತಾರೆ :

*ಪಾರಿಜಾತ ಹುಟ್ಟಿಸಿದನ*
*ಎದೆಯ ಹದವು, ಮನದ ಹದನ*
*ಏನು ಮಾಟ, ಎಂಥ ಆಟ !*
*ಇದರ ಕೂಟ ತಿಳಿಯದು* (ಪಾರಿಜಾತ - ಕವನ)

– ಪಾರಿಜಾತ ಹೂವಿನ ರಹಸ್ಯ ತಿಳಿಯದೆ ಕೊನೆಗೆ ಪ್ರಶ್ನೆಯನ್ನು ಸಹೃದಯರ ಮುಂದೆ ಇಡುತ್ತಾರೆ.

ಪ್ರಕೃತಿಯಲ್ಲಿನ ಶ್ರಾವಣ ಮಾಸದ ದರ್ಶನವನ್ನು ಬೇಂದ್ರೆಯವರು ಭಾವಪೂರ್ಣವಾಗಿ ನೀಡುತ್ತಾರೆ. ಶ್ರಾವಣವನ್ನು ಮಗುವೇ ಎಂದು ಸಂಬೋಧಿಸುತ್ತಾ ಶ್ರಾವಣ ಕವಿತೆಯ ರಚನೆಗೆ ಪ್ರೇರಣೇಯನ್ನು ಪ್ರಕೃತಿಯಿಂದಲೇ ಪಡೆಯುತ್ತಾರೆ.

*ಹಗಲಿರುಳಿನ ತೆರೆಮರೆ ತೆರೆದಾಟದ ಸರಿತೂಕ,*
*ದೇವರ ರತ್ನಾಭರಣದ ನಕ್ಷತ್ರದ ಲೋಕ...*

– ಹೀಗೆ ಪ್ರಕೃತಿಯಲ್ಲಿ ಬೇಂದ್ರೆಯವರು ಅಮೃತ ಶ್ರುತಿಯನ್ನು ಕೇಳಿಸುತ್ತಾರೆ. ಬರೀ ನಿಸರ್ಗದ ವರ್ಣನೆಯಷ್ಟೆ ಅಲ್ಲದೆ ಅದರ ಮೂಲಕ ಹೊಸ ಕಾಲದ ಬರುವಿಕೆಯನ್ನು 'ಬಾಳಗರುಡಿ' ಕವನದಲ್ಲಿ ತಿಳಿಸುತ್ತಾರೆ. ಎಲ್ಲ ಜೀವಿಗಳಿಗೂ ಅತ್ಯವಶ್ಯಕವಾದ ನೀರಿನ ಪ್ರಾಮುಖ್ಯತೆಯನ್ನು ತಿಳಿಸಿ, ಆ ಮೂಲಕ ನೀರಿಲ್ಲದ ಜನಜೀವನದ ಕಷ್ಟ; ನೀರಿನ ದರ್ಶನದಿಂದಲೇ ಪ್ರಕೃತಿಯಲ್ಲಿ ಹಸಿರು ತುಂಬಿ, ಹೂವು ಅರಳುತ್ತವೆ; ಭಾವಾಭಿವ್ಯಕ್ತಿಯಲ್ಲಿ ಎಲ್ಲಾ ವಸ್ತು-ರೂಪಗಳು ಕವನದ ಸ್ವರೂಪವನ್ನು ತಾಳಿ ಕವಿಯ ಬರವಣಿಗೆಯಲ್ಲಿ ಹೂವುಗಳಾಗಿ ಅರಳುತ್ತವೆ ಎನ್ನುತ್ತಾರೆ.

ಬೇಂದ್ರೆಯವರ ಈ ಕವನ ಸಂಕಲನದಲ್ಲಿ ವಸ್ತು ವೈವಿಧ್ಯತೆ ಇದೆ. ಈ ಹಿನ್ನೆಲೆಯಲ್ಲಿ ಕವನ ಸಂಕಲನದಲ್ಲಿ ಸಾಮಾಜಿಕ ಕವನಗಳನ್ನು ಗುರುತಿಸಬಹುದು. ಸಾಮಾಜಿಕ ಕಳಕಳಿ, ಆ ಮೂಲಕ ಮನುಷ್ಯ-ಮನುಷ್ಯರ ನಡುವಿನ ಸಮಾನತೆ, ಮಾನವನ ಬದುಕಿನ ರೀತಿ-ನೀತಿಗಳ ಸತ್ಯಾ ಸತ್ಯತೆಗಳನ್ನು ತಮ್ಮ ಕವನಗಳಲ್ಲಿ ಬಿಂಬಿಸಿದ್ದಾರೆ.

ಜಗತ್ತಿನಲ್ಲಿ ಸೌಂದರ್ಯ, ಸಂಪತ್ತು ಸಾಕಷ್ಟು ಇದ್ದರೂ ಅದರ ಉಪಯೋಗವನ್ನು ಮಾನವ ಸರಿಯಾಗಿ ಮಾಡುವುದಿಲ್ಲ, ಎಂಬ ಅರ್ಥ ಬರುವ ಈ ಸಾಲುಗಳು ಹೀಗಿವೆ :

*ಸ್ವರ್ಗದೊಳಿದ್ದೂ ಸಂಶಯ ಬಂದಿತು*
*ಕಣ್ಗಳ ತಿಕ್ಕಿದರು*
*ತಮ್ಮ ನಾಡಿನಲ್ಲಿ ನಡೆದಿಹ ಲೀಲೆಯ*
*ನೋಡುತ ಬೆಕ್ಕಿದರು* (ಮನುವಿನ ಮಕ್ಕಳು - ಕವನ)

ಇಂತಹ ಜಗತ್ತಿನಲ್ಲಿ ಬಡತನವೂ ತಾಂಡವವಾಡುತ್ತದೆ. ಅನ್ನದ ಅವತಾರವಾಗದೆ ಪ್ರಾಣದ ಉದ್ಧಾರ ಸಾಧ್ಯವಿಲ್ಲ,

*ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ*
*ಇನ್ನೂ ಬರಲಿಲ್ಲಾ*

ಕವನದ ಕೊನೆಗೆ ಸಂಶಯವನ್ನು ವ್ಯಕ್ತಪಡಿಸುತ್ತಾ ಬೇಂದ್ರೆ ಯವರು ಕೊರಗುತ್ತಲೇ ಸಮಾಜದ ಉದ್ಧಾರಕ್ಕಾಗಿ ಕಾದವರು.

ದೇಶದ ಉದ್ಧಾರವೂ ಆದೇಶದ ರೈತನ ಮೇಲಿದೆ. ಅಂತಹ ರೈತ ಕಷ್ಟಗಳಿಗೆ ಸಿಲುಕಿದರೆ ಅದರಿಂದ ಅಪಾಯ ತಪ್ಪಿದ್ದಲ್ಲ, ಬೇಂದ್ರೆಯವರಿಗೆ ಅಂತಹ ರೈತನು ಭೂಮಿ ತಾಯಿಯ ಚೊಚ್ಚಲ ಮಗನಂತೆ. ರಾಜಕೀಯವಾಗಿ ಆಗುತ್ತಿರುವ ರೈತರ ಶೋಷಣೆಯೂ ಅವನ ಪ್ರಾಣಕ್ಕೆ ಕುತ್ತನ್ನೇ ತಂದಿದೆ :

*ಕೊರಳಿಗೆ ಹತ್ತಿದ*
*ಸಾಲದ ಶೂಲ !*
*ಆದರೂ ಬರದೋ*
*ಯಮನಿಗೆ ಕರುಣ*
*ಉಸಿರಿಗೆ ಒಮ್ಮೆ*
*ಜನನಾ ಮರಣಾ*

ಸಾಲದ ಹೊರೆಯಿಂದ ಪ್ರಸ್ತುತದಲ್ಲಿ ರೈತರು

ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಬೇಂದ್ರೆಯವರಿಗೆ ಅವರ ಕಾಲದಲ್ಲೇ ರೈತರ ಬಗೆಗಿನ ಸಮಸ್ಯೆನ್ನು ಈ ಕವನದಲ್ಲಿ ಎತ್ತಿ ತೋರಿದ್ದಾರೆ. ಸಮಾಜದಲ್ಲಿನ ನೋವು, ಸಮಸ್ಯೆಗಳು ಕವನದ ಮೂಲಕ ಭಾವಾಭಿವ್ಯಕ್ತಿಯಾಗಿ ಕವನಗಳೇ ಒಂದು ಸಮಾಜದ ಕನ್ನಡಿಯಾಗಿ ಕಾಣುತ್ತವೆ.

ಮೇಲಿನ ಎಲ್ಲಾ ಸಮಸ್ಯೆಗಳಿಗೆ ಕಾರಣ ಹಣ. ಹಣದ ಈ ದಬ್ಬಾಳಿಕೆಯಿಂದ ಬಡವರು ಇದರ ಕಾಲ್ತುಳಿತಕ್ಕೆ ಸಿಕ್ಕಿ ನಲುಗುತ್ತಿದ್ದಾರೆ :

ಕುರುಡು ಕಾಂಚಾಣ ಕುಣಿಯುತಲಿತ್ತು
ಕಾಲಿಗೆ ಬಿದ್ದವರ ತುಳಿಯುತಲಿತ್ತೋ

ಹಣದ ಅಹಂಕಾರದ ದಬ್ಬಾಳಿಕೆಯನ್ನು ಬೇಂದ್ರೆಯವರು ಸಾಲುಸಾಲಿನಲ್ಲಿಯೂ ಚಿತ್ರಿಸಿದ್ದಾರೆ. ಕಣ್ಣಿದ್ದ ಜನರು ಈ ಕುರುಡು ಕಾಂಚಾಣದ ಬೆನ್ನು ಹತ್ತಿ ಅದರಿಂದಾಗಿ ಉಂಟಾದ ಪರಿಣಾಮವನ್ನು ಹೇಳುತ್ತಲೇ ಎಲ್ಲಕ್ಕೂ ಮೂಲ ದುಡ್ಡೇ ಕಾರಣ ಎನ್ನುವ ಭಾವ ಇಲ್ಲಿ ಹೊಮ್ಮಿದೆ.

ಈ ಎಲ್ಲಾ ಸಮಸ್ಯೆಗಳ ಪರಿಹಾರಕ್ಕಾಗಿ ಒಬ್ಬ ಯುಗ ಪುರುಷನ ಅವಶ್ಯಕತೆ ಇದೆ. ಇದಕ್ಕಾಗಿ ಕವಿಯ ಕಾತರತೆಯನ್ನು 'ಮೊದಲಗಿತ್ತಿ' ಕವನದಲ್ಲಿ ಕಾಣಬಹುದು.

ಎಂದು ಮಂಗಲ ನಿನ್ನ ದೇವಗರ್ಭಕೆ ? ಇನ್ನು
ಮೊದಲಗಿತ್ತಿಯಂತೆ ಮೆರೆಯುತಿಹೆ.

ಬೇಂದ್ರೆಯವರು ಪ್ರಕೃತಿಯಲ್ಲಿ ದೇವರನ್ನು ಕಾಣುತ್ತಿದ್ದರು. ಇದರ ಫಲವಾಗಿ ಅಧ್ಯಾತ್ಮವೂ ಅವರ ಹಲವಾರು ಕವನಗಳಲ್ಲಿದೆ. ಪ್ರಕೃತಿಯ ಅಂಶದಲ್ಲೇ ಅಧ್ಯಾತ್ಮ ಶಕ್ತಿಯನ್ನು ಅಡಗಿಸಿದ್ದರು.

ಮಲ್ಲಾಡದ ಗಿಣಿಯೇ। ನೀನಿ
ಲ್ಲಲ್ಲಾಡದ ಕುಳಿತಿಯಾಕ। ಏ ಗಿಣಿಯೇ॥

ಈ ಕವನದ ಸಾಲುಗಳಲ್ಲಿ ಮಲೆನಾಡಿನ ಪ್ರಕೃತಿ ಸೊಬಗನ್ನು ವರ್ಣಿಸುತ್ತಾ ಗಿಳಿಯ ಮಲೆನಾಡಿನ ಮುಕ್ತ ವಾತಾವರಣದ ಜೀವನ ವಿಧಾನದ ಬಗ್ಗೆ ಹೇಳುತ್ತಾ ಹೋಗುತ್ತಾರೆ. ಇಲ್ಲಿ ಗಿಣಿಯನ್ನು ನೆಪಮಾಡಿಕೊಂಡು ಕವಿ ಅಧ್ಯಾತ್ಮದ ಸಂದೇಶವನ್ನು ಕೊಡುತ್ತಿದ್ದಾರೆ :

ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ

ಇಲ್ಲಿ ಅಪಶಕುನದ ಕಾರಣಗಳಿಂದ ಹಲ್ಲಿಯ ಧ್ವನಿ, ಗೂಗೆಯ ದನಿ, ಇವುಗಳಿಂದ ಅಶುಭವಾದ ಪರಿಸರ ಉಂಟಾಗಿದೆ. ಇದರ ಪರಿಹಾರಕ್ಕಾಗಿ ಶುಭಕ್ಕಾಗಿ ಹಕ್ಕಿಯನ್ನು ಕೇಳಿಕೊಳ್ಳುತ್ತಿದ್ದಾರೆ. ಇಂತಹ ಒಂದು ಧ್ವನಿಯನ್ನು ಕೇಳಿದಾಗ ಮನಸ್ಸು ಹಗುರವಾಗಿ ಜೀವಕ್ಕೆ ಹಾಯೆನಿಸುತ್ತದೆ.

ಇಂತಹ ಜೀವವೂ ಪಾಪ-ಪುಣ್ಯಗಳಿಗೆ ಸಿಕ್ಕಿ ಕರ್ಮಾಂತರದ ಫಲವಾಗಿ ವಿವಿಧ ಜನ್ಮವನ್ನು ಪಡೆಯುತ್ತಾನೆ. ಕೊನೆಗೆ ಎಲ್ಲದರ ಬಿಡುಗಡೆ ಹೊಂದಿ ದೇವರ ಸಾನ್ನಿಧ್ಯ ಸೇರುವುದೊಂದೇ ಗುರಿ. 'ನಾಯಕ' ಕವನದಲ್ಲಿ ಪರಮಾತ್ಮವನ್ನು ಹುಡುಕುವ ಪರಿ ಕಾಣುತ್ತದೆ. ಜೀವಿಯನ್ನು ನಾಯಿಗೆ ಹೋಲಿಸಿ ಅದರ ಒಡೆಯ ದೇವರು, ಇಲ್ಲಿ ಆಧ್ಯಾತ್ಮಿಕ ಅನುಭವವೂ ಒಟ್ಟಾರೆಯಾಗಿ ಭಾವಾಭಿವ್ಯಕ್ತಗೊಂಡಿದೆ. ತನ್ನ ನಾಯಕನಿಗಾಗಿ ಜೀವ ಹಾತೊರೆಯುತ್ತಿದೆ.

ಇದೇ ಹೋಲಿಕೆಯ ಪರಿಯನ್ನು 'ಎದೆಯ ಒಕ್ಕಲಿಗ' ಕವನದಲ್ಲಿ ಕಾಣಬಹುದು. ಒಕ್ಕಲು ಎಂದರೆ ಜೀವಿ.

ಬೆದೆಯರಿತು ಹದಮಾತು ಹೃದಯದೀ ಹೊಲವನ್ನು
ಹದ ಬೆದೆಯನರಿತಂಥ ಹೃದಯವಾಸೀ.

ಪರಮಾತ್ಮ ಬೇರೆಲ್ಲೋ ಇರದೇ ತನ್ನ ಹೃದಯದಲ್ಲೇ ಇದ್ದಾನೆ. ಆತನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಭಕ್ತ ಕಾಯುತ್ತಿದ್ದಾನೆ. ಇಂತಹ ಭಕ್ತನಾದ ಮನುಷ್ಯನು ಒಳಗೂ ಹೊರಗೂ ಶುದ್ಧವಾಗಿರಬೇಕು. ಆತನ ಆತ್ಮಸಾಕ್ಷಾತ್ಕಾರವನ್ನು 'ನಾಲಗೆ' ಕವನ ನೀಡುತ್ತದೆ.

ಹೀಗೆ ಅಧ್ಯಾತ್ಮದ ಶಕ್ತಿ ಬೇಂದ್ರೆ ಕವನದ ಕಾವ್ಯ ವಸ್ತುವಾಗಿ ಇವುಗಳ ಮೂಲಕ ದೇವರ ಕಲ್ಪನೆ, ಅದರ ಸಾಕ್ಷಾತ್ಕಾರ ಸಹೃದಯರಿಗೆ ಉಂಟಾಗುತ್ತದೆ.

ಮುಂದಿನ ಕವನಗಳು ವಸ್ತು ವೈವಿಧ್ಯತೆಯಿಂದ ಕೂಡಿ ಕವನಸಂಕಲನಕ್ಕೆ ಬೆರಗನ್ನು ತಂದುಕೊಟ್ಟಿವೆ. ಹೆಣ್ಣೊಬ್ಬಳ ನೋವಿನ ಬಗ್ಗೆ, ಅನಾಥೆಯಾದ ಅವಳು ಕೂಗುವ ಧ್ವನಿಯ ಚಿತ್ರಣವನ್ನು 'ಹೆಣದ ಹಿಂದೆ' ಕವನದಲ್ಲಿ ಕಾಣಬಹುದು, ಈ ಕವನ ಇದ್ದಂತೆ ಮುಗ್ಧೆಯಾದ ಹೆಣ್ಣೊಬ್ಬಳ ಬಗೆಗಿನ ಕವನವೂ ಇದೆ. ಪ್ರೀತಿಯ ಬಗ್ಗೆ ಹಲವಾರು ಕವನಗಳಿವೆ. ವಿರಸವಾದ ಸರಸಿಗಳಿಬ್ಬರ ಪ್ರೀತಿಯನ್ನು ಯೌವನದ ಆಕರ್ಷಣೆಯನ್ನು ಕವಿ ಬೇಂದ್ರೆ ನೀಡಿದ್ದಾರೆ.

ಕುರೂಪತೆಯಲ್ಲಿ ಅಂದವನ್ನು ಕಾಣುವುದು ಕವಿಯ ಲಕ್ಷಣ. ಪ್ರಕೃತಿಯಲ್ಲಿನ ಪ್ರಾಣಿಗಳು ಸಹ ಬೇಂದ್ರೆಯವರಿಗೆ ಪ್ರಿಯ. ಕರು, ಗಿಳಿ, ನಾಯಿ ಹೀಗೆ ಇವುಗಳ ಮೂಲಕ ಯಾವುದೋ ಒಂದು ಸಂದೇಶವನ್ನು ಕೊಡುತ್ತಾರೆ. ಹಾಗೆಯೇ ಮಕ್ಕಳ ಜೊತೆಗೆ ಮಕ್ಕಳಾಗುವ ಪರಿ ಬೇಂದ್ರೆಯವರದು. ಪ್ರೇಮ, ವಾತ್ಸಲ್ಯದಿಂದ ಕೂಡಿದ ಕವನ 'ಯಾರಿಗೂ ಹೇಳೋಣು ಬ್ಯಾಡಾ' ...ಹಾಗೆಯೇ ಸ್ನೇಹಕ್ಕಾಗಿ ಬರೆದ ಕವನ 'ಚೆನ್ನ'. ಬೇಂದ್ರೆ ಹಾಗೂ ಮಧುರ ಚೆನ್ನರ ಸ್ನೇಹಸಂಬಂಧವೂ ಒಂದು ಕವನವಾಗಿ ಮೂಡಿಬಂದಿದೆ.

**ಉಪಸಂಹಾರ**

ಇಪ್ಪತ್ತನೆಯ ಶತಮಾನಕ್ಕೆ ಹೊಸ ಮೆರಗನ್ನು ತಂದುಕೊಟ್ಟವರು ಕವಿ ಬೇಂದ್ರೆ. ಅಧ್ಯಾತ್ಮವನ್ನು ಪ್ರಕೃತಿಯಲ್ಲೇ, ಪ್ರಕೃತಿಯನ್ನು ಅಧ್ಯಾತ್ಮವಾಗಿ ನೋಡಿ ಆ ಮೂಲಕ ಸುಂದರ ಕವನಗಳು ಸೃಷ್ಟಿಯಾಗಿವೆ. ಪ್ರೀತಿ, ಸ್ನೇಹ, ವಾತ್ಸಲ್ಯ, ನಿಸರ್ಗಪ್ರೇಮ, ಸಾಮಾಜಿಕ ಕಳಕಳಿ ಹೀಗೆ ವಿಷಯ ವೈರುಧ್ಯಗಳೇ 'ನಾದಲೀಲೆ' ಕವನಸಂಕಲನದ ವೈಶಿಷ್ಟ್ಯ. ಇಲ್ಲಿನ ಭಾವಲೀಲೆಯು ಸಹೃದಯರಿಗೆ ಮುಟ್ಟುವುದು ಅಷ್ಟು ಸುಲಭವಲ್ಲ. ಕವನದ ಹಿಂದಿನ ಅಂತರ್ಯವನ್ನು ತಿಳಿಯುವುದು ಕಷ್ಟ.

ಕವಿಯ ಅಂತರಂಗ ಅಭಿವ್ಯಕ್ತಿಗೆ ಮೂರ್ತ ರೂಪವನ್ನು ನೀಡುವುದೇ ಕವನಗಳು. ಭಾವನಾತ್ಮಕವಾದ ಕವನಗಳು ತಮ್ಮ ಒಡಲಲ್ಲಿ ಅಗಾಧವಾದ ಕಾವ್ಯಾತ್ಮಕ ಸೃಷ್ಟಿಗಳನ್ನು ಅಡಗಿಸಿಟ್ಟುಕೊಂಡಿವೆ. ಸಹೃದಯರಿಗೆ ಇದರ ಪರಿಚಯವನ್ನು ಮಾಡಿಸಿಕೊಡುವವರೇ ಕವಿಗಳು. ಸಹೃದಯರು ಇದಕ್ಕಾಗಿ ಕವಿಯು ಏರಿದ ಮಟ್ಟವನ್ನು ಏರಿ ಅವರ ಮನಸ್ಸಿನ ಭಾವನೆಗಳನ್ನು ಅರಿಯಬೇಕು. ಆಗ ಮಾತ್ರವೇ ಶ್ರೇಷ್ಠ ಕವನಕ್ಕೆ ಉತ್ತಮಸ್ಥಾನವೂ ಲಭಿಸುತ್ತದೆ.

ನಾಗವೇಣಿ ವಿ.
ಕನ್ನಡ ಉಪನ್ಯಾಸಕರು, ವಿದ್ಯಾವರ್ಧಕ ಪದವಿಪೂರ್ವ ಕಾಲೇಜು
ಶೇಷಾದ್ರಿ ಅಯ್ಯರ್ ರಸ್ತೆ, ಮೈಸೂರು.

## ಎಂಥಾ ವಿಸ್ಮಯ !

* ಕಪ್ಪೆಗಳ ಕೂಗು ಒಂದು ಮೈಲಿಗೂ ಆಚೆ ಕೇಳಿಬರುತ್ತದೆ.
* ಕೆಲವು ಜಾತಿಯ ಕಪ್ಪೆಗಳು ತಮ್ಮ ಜೀವಮಾನ ಕಾಲದಲ್ಲಿ ೨೦೦,೦೦೦ಕ್ಕೂ ಹೆಚ್ಚು ಮೊಟ್ಟೆಗಳನ್ನು ಇಡುತ್ತವೆ.
* ಗಿಣಿಗಳು ಮನುಷ್ಯರಂತೆ ಮಾತನಾಡಬಲ್ಲವು ಎಂದು ಕೇಳಿದ್ದೇವಷ್ಟೆ. ಆದರೆ ಅವುಗಳಿಗೆ ದನಿಯನ್ನು ಉತ್ಪತ್ತಿಮಾಡಬಲ್ಲಂಥ ಧ್ವನಿತಂತುಗಳೇ/ವಾಕ್ತಂತುಗಳೇ ಇರುವುದಿಲ್ಲ!
* ಚಿನ್ನದ ಬಣ್ಣದ ಮೀನನ್ನು ದೀರ್ಘಕಾಲ ಕತ್ತಲಲ್ಲಿ ಇಟ್ಟರೆ ಅದು ಬೂದು ಬಣ್ಣಕ್ಕೆ ತಿರುಗುತ್ತದೆ.
* ಕಷ್ಟದ ಕೆಲಸಗಳನ್ನು ಮಾಡುವಾಗ ಹೆಣ್ಣು ಬೆಕ್ಕುಗಳು ಬಲ ಪಂಜಾವನ್ನು ಬಳಸಿದಲ್ಲಿ ಗಂಡು ಬೆಕ್ಕುಗಳು ಎಡ ಪಂಜಾವನ್ನು ಬಳಸುತ್ತವೆ.
* ಪೋಲೆಂಡ್ ದೇಶದಲ್ಲಿ ಮಕ್ಕಳಿಗಿಂತ ನಾಯಿಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ.
* ಬೆಕ್ಕಿನ ಹೃದಯ ಮಾನವ ಹೃದಯಕ್ಕಿಂತ ಎರಡು ಪಟ್ಟು ಹೆಚ್ಚು ವೇಗವಾಗಿ ಮಿಡಿಯುತ್ತದೆ.
* ಹ್ಯಾಮ್‌ಸ್ಟರ್ (ದವಡೆ ಚೀಲಗಳಿರುವ ಹೆಗ್ಗಣದಂಥ ದಂಶಕ)ನ ಹಲ್ಲುಗಳು ಸತತವಾಗಿ ಬೆಳೆಯುತ್ತಲೇ ಇರುತ್ತವೆ.
* ನಾಯಿಗಳು ನಿಮಿಷಕ್ಕೆ ಮುನ್ನೂರು ಬಾರಿ ಏದುಸಿರುಬಿಡುತ್ತವೆ.
* ಇಲಿಗಳು ವರ್ಷಕ್ಕೆ ೧೫೦ಕ್ಕೂ ಹೆಚ್ಚು ಮರಿಗಳನ್ನು ಹಾಕುತ್ತವೆ.
* ಇಲಿಗಳು ತೇಗು ಬಿಡಲಾರವು.
* ಕುದುರೆ ನಿಂತೇ ನಿದ್ದೆ ಮಾಡುವಾಗ, ಬೀಳದಿರಲೆಂದು ತನ್ನ ಹಿಂಗಾಲುಗಳನ್ನು ಪರಸ್ಪರ ಬಿಗಿದುಕೊಂಡಿರುತ್ತದೆ.
* ಬೆಕ್ಕಿನ ನಾಲಿಗೆಯಲ್ಲಿರುವ ರುಚಿಗ್ರಾಹಕ ಗ್ರಂಥಿಗಳು ಕೊಕ್ಕೆಗಳಿಂದ ಕೂಡಿದ್ದು ಹಿಡಿದ ಪ್ರಾಣಿಯನ್ನು ಬಾಯಲ್ಲಿ ಭದ್ರವಾಗಿ ಹಿಡಿದಿರಿಸಲು ಸಹಕಾರಿಯಾಗಿವೆ.
* ಗಿನಿಪಿಗ್ (ವೈದ್ಯಕೀಯ ಪ್ರಯೋಗಗಳಲ್ಲಿ ಬಳಸುವ ದಂಶಕ- ಗಿನಿಯಿಲಿ)ಗಳು ಹುಟ್ಟಿದ ತಕ್ಷಣವೇ ನಡೆದಾಡಬಲ್ಲವು.



ವಿವಿಧ ಮೂಲಗಳಿಂದ : ಕೆ. ಎಲ್. ಗೋಪಾಲಕೃಷ್ಣ ರಾವ್

# ನವಗ್ರಹಗಳ ಕರಾಮತ್ತು

ನವಗ್ರಹಗಳು ಮನುಜನಿಗೆ ಒಳ್ಳೆಯದು ಮಾಡುವುದಿಲ್ಲವೇ, ಕೆಟ್ಟದ್ದೇ ಮಾಡುವುವೇ ? ಎಂಬ ಜಿಜ್ಞಾಸೆ ನನ್ನನ್ನು ಕಾಡಿತು. ಏನೇ ತೊಂದರೆ ಎದುರಾದರೂ ಅದು ನವಗ್ರಹಗಳ ಉಪಟಳ ಎಂದು ಭಾವಿಸಿ ನವಗ್ರಹ ಹೋಮ, ದಾನ, ಪೂಜೆ ಮಾಡಿಸುತ್ತಾರೆ. ಉದಾಹರಣೆಗೆ ಹೇಳಬೇಕೆಂದರೆ, ಮನೆ ಒಳಗೆ ನಡೆಯುತ್ತಿರುವಾಗ ಬಾಗಿಲು, ಕಿಟಕಿ, ಗೋಡೆ, ಅಡುಗೆಮನೆ ಕಟ್ಟೆ ಪದೇಪದೇ ಕೈಗೆ ಕಾಲಿಗೆ ತಗಲಿ ನೋವು ಕೊಟ್ಟರೆ ಅದು ನವಗ್ರಹಗಳ ಕಾಟವೇ ಸೈ ಎಂದು ಭಾವಿಸುತ್ತಾರೆ. ಪರಿಚಿತರೊಬ್ಬರಿಗೆ ಪ್ರತಿದಿನವೂ ಒಮ್ಮೆ ತಗಲಿದಲ್ಲಿಗೇ ಬಾಗಿಲು ಕಟ್ಟೆ ಇತ್ಯಾದಿ ತಗಲಿ ಕೈ ತೋಳೆಲ್ಲ ನೋವು ಬಂತಂತೆ. ಸುಮಾರು ದಿನ ನೋವು ಅನುಭವಿಸಿದರಂತೆ. ಇದರ ಪರಿಹಾರಕ್ಕಾಗಿ ಇರುವ ದಾರಿ ಒಂದೆ, ನವಗ್ರಹ ಹೋಮ ಮತ್ತು ಪೂಜೆ ಎಂದು ಬಲ್ಲವರು ಹೇಳಿದರಂತೆ. ಹಾಗಾಗಿ ತಡಮಾಡದೆ ಅವನ್ನು ಮಾಡಿಸಿದರು. ತದನಂತರದ ಪರಿಣಾಮ ಏನಾಯಿತೆಂದು ಗೊತ್ತಿಲ್ಲ. ಬಾಗಿಲು ಹಿಡಿ, ಕಟ್ಟೆ ಎಲ್ಲ ತಟಸ್ಥವಾಗಿ ಅವರಿಗೆ ತಗಲದೆ ಇದ್ದುವೋ ಏನೋ ?

ಈಗ ನವಗ್ರಹಗಳೆಂದರೆ ಏನು ಎಂಬುದನ್ನು ತಿಳಿಯೋಣ : ಭಾರತೀಯ ಸಂಪ್ರದಾಯದಂತೆ ಸೂರ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ ಒಂಬತ್ತು ಗ್ರಹಗಳು.

**ನವಗ್ರಹ ಜಪ :** ಸೂರ್ಯನೇ ಮೊದಲಾದ ಗ್ರಹಗಳ ಅನುಗ್ರಹಕ್ಕಾಗಿ ಶಾಸ್ತ್ರೋಕ್ತವಾದ ವಿಧಾನದಿಂದ ಮಾಡುವ ಆಯಾಯ ಗ್ರಹಗಳ ಮಂತ್ರ ಪುರಶ್ಚರಣೆ, ನವಗ್ರಹ ಜಪ ಮಾಡಿದರೆ ಬಂದ ಪೀಡೆ ಪರಿಹಾರವಾಗುತ್ತದೆ ಎಂಬುದು ಲೋಕರೂಢಿ.

**ನವಗ್ರಹ ದಾನ :** ನವಗ್ರಹಗಳನ್ನು ಸಂಪ್ರೀತಗೊಳಿಸುವುದಕ್ಕಾಗಿ ಮಾಡುವ ನವಧಾನ್ಯಗಳ ದಾನ. ಸೂರ್ಯನ ಪ್ರೀತ್ಯರ್ಥ ಗೋಧಿ, ಚಂದ್ರನಿಗೆ ಬತ್ತ, ಕುಜನಿಗೆ ತೊಗರಿ, ಬುಧನಿಗೆ ಹೆಸರು, ಗುರುವಿಗೆ ಕಡಲೆ, ಶುಕ್ರನಿಗೆ ಅವರೆ, ಶನಿಗೆ ಎಳ್ಳು, ರಾಹುಗೆ ಉದ್ದು, ಕೇತುಗೆ ಹುರುಳಿ – ಇವನ್ನು ದಾನ ಮಾಡಬೇಕೆಂಬ ವಿಧಿಯಿದೆ. ಅದಕ್ಕೆ ನವಗ್ರಹ ದಾನ ಎನ್ನುವರು. (ಇಂತಿಂಥವನಿಗೆ ಇಂತಿಂಥದೇ ಧಾನ್ಯ ಎಂದು ಯಾರು ನಿಗದಿ ಮಾಡಿರಬಹುದು ಎಂಬ ಕುತೂಹಲ ನನ್ನನ್ನು ಸುಮ್ಮನಿರಲು ಬಿಡುತ್ತಿಲ್ಲ.)

**ನವಗ್ರಹ ಶಾಂತಿ :** ಜಪ, ದಾನ, ಹೋಮಗಳಿಂದ ನವಗ್ರಹಗಳನ್ನು ಪ್ರಸನ್ನಗೊಳಿಸುವ ಪುಣ್ಯಕರ್ಮ. (ಮಾಹಿತಿ : ಕನ್ನಡ ನಿಘಂಟು, ನಾಲ್ಕನೆಯ ಸಂಪುಟ)

**ನವಗ್ರಹ ಹೋಮ :** ನವಗ್ರಹಗಳ ಸಂಪ್ರೀತಿಗಾಗಿ ಸೂರ್ಯನಿಗೆ ಅರ್ಕ, ಚಂದ್ರನಿಗೆ ಪಲಾಶ, ಅಂಗಾರಕ(ಕುಜ)ನಿಗೆ ಖದಿರ, ಬುಧನಿಗೆ ಅಪಾಮಾರ್ಗ, ಗುರುವಿಗೆ ಅಶ್ವತ್ಥ, ಶುಕ್ರನಿಗೆ ಉದುಂಬರ, ಶನಿಗೆ ಶಮಿ, ರಾಹುವಿಗೆ ದೂರ್ವಾ, ಕೇತುವಿಗೆ ಕುಶ – ಈ ಸಮಿತ್ತುಗಳನ್ನು ಚರು ಮತ್ತು ತುಪ್ಪವನ್ನು ಪ್ರತ್ಯೇಕವಾಗಿ ೮ ಅಥವಾ ೨೮, ಇಲ್ಲವೇ ೧೦೮ ಬಾರಿ ಅಗ್ನಿಯಲ್ಲಿ ಹಾಕುತ್ತ ಆಯಾಯ ಗ್ರಹ ಮಂತ್ರೋಚ್ಚಾರಣ ಪೂರ್ವಕ ಹೋಮ ಮಾಡಬೇಕು. ಅಂತೆಯೇ ಅಧಿದೇವತೆ, ಪ್ರತ್ಯಧಿ ದೇವತೆಗಳಿಗೆ ಪ್ರಧಾನ ದೇವತೆಯ ದಶಮಾಂಶ ಸಂಖ್ಯೆಯಲ್ಲಿಯೂ ಕ್ರತು ಸಂರಕ್ಷಣ ದೇವತೆಗಳಿಗೆ ಇಪ್ಪತ್ತನೆಯ ಒಂದು ಅಂಶ ಸಂಖ್ಯೆಯಲ್ಲಿಯೂ ಹೋಮ ಮಾಡಬೇಕು. ಈ ಕ್ರಮದಲ್ಲಿ ಮಾಡುವ ನವಗ್ರಹ ಹೋಮದಿಂದ ಗ್ರಹಜನ್ಯ ದೋಷಗಳು ಹೋಗುತ್ತವೆ. (ಮಾಹಿತಿ ಕೃಪೆ : ಕನ್ನಡ ವಿಶ್ವಕೋಶ)

ನನಗಿರುವ ಒಂದು ಸಂಶಯ ಅಂದರೆ, ಈ ಗ್ರಹಗಳು ನಾವು ಓಡಾಡುವಾಗ ಬೇಕೂಂತಲೇ ಕಿಟಕಿ, ಬಾಗಿಲ ಹಿಡಿ, ಅಡುಗೆಮನೆಯ ಕಟ್ಟೆ, ಗೋಡೆಗಳ ರೂಪದಲ್ಲಿ ನಮಗೆ ಡಿಕ್ಕಿ ಹೊಡೆಯುತ್ತವೆಯೇ ? ಗ್ರಹಗಳಿಗೆ ಸುಮ್ಮನೆ ಇದ್ದು ಬೇಜಾರಾಗಿ ನಾವು ನಡೆಯುವಾಗ ನೇರ ದಾರಿ ತಪ್ಪಿಸಿ ಗೋಡೆ, ಸೋಫಾ, ಕುರ್ಚಿ ಕಾಲುಗಳಿಗೆ ನಮ್ಮ ಕೈ ಕಾಲು ತಗಲಿ ನಾವು ನೋವು ಅನುಭವಿಸುವುದನ್ನು ಅವುಗಳು ನೋಡಿ ಸಂತೋಷಪಡುತ್ತವೆಯೇ ಎಂಬುದು. ಏಕೆಂದರೆ ಸೋಫಾ, ಕುರ್ಚಿ ಇವೆಲ್ಲ ಅದಾಗಿಯೇ ನಮಗೆ ತಗಲಲು ಸಾಧ್ಯವಿಲ್ಲವಲ್ಲ. ನವಗ್ರಹಕ್ಕೆ ಪೂಜೆ ಇತ್ಯಾದಿ ಮಾಡಿದ ಕೂಡಲೇ ಅವೆಲ್ಲ ತೃಪ್ತಿಹೊಂದಿ ಮನೆಯಲ್ಲಿ ಶಾಂತಿ ಮೂಡಿಸುತ್ತವಾ ? ಎಂಥ ಚೋದ್ಯವಲ್ಲವೇ ನವಗ್ರಹಗಳ ಬಾಳು. ಅವುಗಳೊಂದಿಗೆ ನಮ್ಮದೂ ಕೂಡ !

ಯಾವಾಗಲೂ ನವಗ್ರಹಗಳು ನನ್ನೊಂದಿಗೇ ಇರುತ್ತವೆ. ಹೆಚ್ಚಾಗಿ ನನಗೆ ಬಾಗಿಲು ಚಿಲಕ, ಸೋಫಾ ಕಾಲು, ಕಬ್ಬಿಣದ ಸ್ಟೂಲ್ ಇವೆಲ್ಲ ಡಿಕ್ಕಿ ಹೊಡೆಯುತ್ತಲೇ ಇರುತ್ತವೆ. ಆದರೆ ಅದು ನವಗ್ರಹಗಳ ಕರಾಮತ್ತು ಎಂಬುದು ಇಷ್ಟು ದಿನ ನನಗೆ ಗೊತ್ತಿರಲಿಲ್ಲ. ಎಷ್ಟು ಸಲ ಪೂಜೆ ಮಾಡಬೇಕಿತ್ತೊ ನಾನು ಎಂದು ಅಂದುಕೊಂಡೆ. ''ಅಯ್ಯೊ ಮಂಕೆ, ಒಮ್ಮೆ ಪೂಜೆ ಮಾಡಿಸಿದರೆ ಅವು ನಮ್ಮ ತಂಟೆಗೆ ಬರಲ್ಲ'' ಎಂದು ನನ್ನ ಮನಸ್ಸು ಹೇಳಿತು. ಒಮ್ಮೆ ಪೂಜೆ ಮಾಡಿದ ಮೇಲೆ, ಹಾಗಾದರೆ ಎಷ್ಟು ದಿನ ಸುಮ್ಮನೆ ಇದ್ದಾವು ? ಆಮೇಲೆ ಅವು ಬರುವುದಿಲ್ಲ ಎಂಬ ಭರವಸೆ ಯಾರು ಕೊಡುತ್ತಾರೆ, ಎಂಬ ಸಂಶಯವೂ ನನ್ನನ್ನು ಪೀಡಿಸುತ್ತಿದೆ. ಈಗ ನನಗೆ ಏನೇ ತಗಲಿದರೂ, ''ಓ ರಾಹು ಕೇತುಗಳಾದಿಗಳೇ, ನಿಮ್ಮ ಆಟ ಸುರು ಮಾಡಿದಿರಾ'' ಎಂದು ಕೈಕಾಲು ತಿಕ್ಕಿಕೊಳ್ಳುತ್ತ ಕೇಳಿಕೊಳ್ಳುತ್ತೇನೆ ! ನಾನಂತು ಈಗ ನಡೆಯುವಾಗಲೆಲ್ಲ ನವಗ್ರಹಗಳನ್ನು ನೆನಪು ಮಾಡಿಕೊಳ್ಳುತ್ತ ಎಚ್ಚರದಿಂದ ಹೆಜ್ಜೆ ಇಡುತ್ತಿದ್ದೇನೆ !

**ರುಕ್ಮಿಣಿಮಾಲಾ**
ಮನೆ ಸಂಖ್ಯೆ. ೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರಂ, ಮೈಸೂರು - ೫೭೦ ೦೦೯



ಡಾ॥ ನಾ. ಡಿಸೋಜ

# ಕನ್ನಡ ಮರಾಠಿ ಭಾಷಾ ಬಾಂಧವ್ಯ

ಕನ್ನಡ ಜನಪದ ಪ್ರಪಂಚ ಮರಾಠಿ ಭಾಷೆ ಸಂಸ್ಕೃತಿಯೊಡನೆ ತೀರಾ ಹತ್ತಿರದ ಸಂಬಂಧ ಇರಿಸಿಕೊಂಡಿದೆ. ಪಂಢರಾಪುರದ ಪುರಂದರ ವಿಠಲನನ್ನ ಕಾನಡಾಂಚ ದೇವ್ ಎಂದು ಕರೆಯುತ್ತಾರೆ ಅನ್ನುವುದು ಹಳೆಯ ವಿಷಯ. ಅಂತೆಯೇ ಕರ್ನಾಟಕದಿಂದ ನೂರಾರು ಜನ ಪಂಢರೀನಾಥನ ಭಕ್ತರು ಪಂಢರಾಪುರಕ್ಕೆ ಹೋಗುವುದು ಒಂದು ಪದ್ಧತಿಯೇ ಆಗಿದೆ. ಹಸಿರು, ಕೆಂಪು, ಹಳದಿ ಬಣ್ಣದ ಮೇಲುಡುಗೆಯನ್ನ ಧರಿಸಿದ ಜನ ಕೈಯಲ್ಲಿ ಬಾವುಟಗಳನ್ನ ಹಿಡಿದು, ಹಾಡುತ್ತ ಕುಣಿಯುತ್ತ , ನಡೆದುಕೊಂಡೇ ಹೋಗುವ ಪದ್ಧತಿ ಇಂದಿಗೂ ಇದೆ. ಪಂಢರಿ ಭಜನೆ ಎಂದೇ ಕರೆಯಲಾಗುವ ಇದು ಒಂದು ಜನಪದ ಕಲೆಯಾಗಿ ಇಲ್ಲಿ ಬೆಳೆದು ಕೊಂಡಿದೆ.

ನಾನು ಮನೆಯಲ್ಲಿ ಮಾತನಾಡುವುದು ಕೊಂಕಣಿ ಭಾಷೆಯನ್ನ, ಹೊರಗೆ ನನ್ನ ಓದು ಬರವಣಿಗೆ ವ್ಯವಹಾರವೆಲ್ಲ ಕನ್ನಡ ಭಾಷೆಯಲ್ಲಿ. ಇವತ್ತು ನಾನಿಲ್ಲಿ ಮರಾಠಿ ಸಾಹಿತ್ಯ ಮೇಳವದಲ್ಲಿ ಭಾಗವಹಿಸಿ ಮರಾಠಿ ಲೇಖಕರು ಮತ್ತು ಮರಾಠಿ ಭಾಷಾಭಿಮಾನಿಗಳ ನಡುವೆ ಕನ್ನಡದ ಲೇಖಕನಾಗಿ ಸನ್ಮಾನಿತನಾಗಿದ್ದೇನೆ. ಈ ಸನ್ಮಾನ ಕನ್ನಡ ಭಾಷೆಗೆ, ಕನ್ನಡ ಸಾಹಿತ್ಯಕ್ಕೆ, ಕನ್ನಡ ಸಾಹಿತ್ಯ ಪಡೆದ ಹಲವು ಮಾನ ಗೌರವಗಳಿಗೆ ಸಂದ ಸನ್ಮಾನ ಎಂದು ನಾನು ತಿಳಿಯುತ್ತೇನೆ. ಈ ಕಾರಣಕ್ಕಾಗಿ ಮರಾಠಿ ಸಾಹಿತ್ಯ ಮೇಳವದ ಎಲ್ಲ ಪದಾಧಿಕಾರಿಗಳಿಗೆ, ಮರಾಠಿ ಸ್ನೇಹಿತರಿಗೆ ಕನ್ನಡ ಭಾಷೆ ಸಾಹಿತ್ಯದ ಪರವಾಗಿ ನಾನು ಅನಂತ ಕೃತಜ್ಞತೆಗಳನ್ನ ಹೇಳಲಿಕ್ಕೆ ಬಯಸುತ್ತೇನೆ.

ಹಾಗೆಯೇ ಕೊಂಕಣಿ ಭಾಷೆಯಲ್ಲಿ ಮಾತನಾಡುವ, ಕನ್ನಡದಲ್ಲಿ ಬರೆಯುವ, ಮರಾಠಿ ಭಾಷಿಕರಿಂದ ಸನ್ಮಾನಗೊಂಡಿರುವ ನನಗೆ ಈ ಅಪರೂಪದ ಸಮ್ಮಿಲನ ಹೀಗೆ ಸಾಧ್ಯವಾದ ಬಗ್ಗೆ ಸಂತಸ ಹಾಗೂ ರೋಮಾಂಚನವಾಗುತ್ತಿದೆ.

ಭಾಷೆ, ಅದು ಯಾವುದೇ ಇರಲಿ, ಸಾಹಿತ್ಯದ ಮೂಲಕ ಅದು ಮಾಡುವ ಕೆಲಸ ಅಂದರೆ ತನಗೆ ಪ್ರಿಯವಾದ ಭಾಷೆಯ ಮೂಲಕ ಅನುಭವ, ಕಲ್ಪನೆ, ಜೀವನ ದೃಷ್ಟಿ, ಕನಸುಗಳನ್ನ ಹಂಚುವ ಕಾಯಕವನ್ನ ಮಾಡುವುದು. ಈ ಕೆಲಸದ ಮೂಲಕ ಅದು ಮಾನವನ ವ್ಯಕ್ತಿತ್ವವನ್ನ ರೂಪಿಸುತ್ತ ಹೋಗುತ್ತದೆ.

ಸಾಹಿತ್ಯ ಸದಾ ಮನುಷ್ಯನ ಬಗ್ಗೆಯೇ ಚಿಂತನೆಯನ್ನ ಮಾಡುವುದರಿಂದ ಅದು ಕನ್ನಡದಲ್ಲಿ ಮಾಡಲಿ, ಕೊಂಕಣಿಯಲ್ಲಿ ಮಾಡಲಿ, ಮರಾಠಿಯಲ್ಲಿ ಮಾಡಲಿ ಅದು ತಲಪುವುದು ಮನುಷ್ಯನ ಹೃದಯವನ್ನೇ. ಭಾರತಮಾತೆಯನ್ನ ನಾವು ಸರ್ವಭಾಷಾ ಭಾರತಿ ಎಂದೇ ಒಪ್ಪಿಕೊಂಡು ಬಂದಿದ್ದೇವೆ. ಈ ಕಾರಣಕ್ಕಾಗಿ ನಾನು ಕೊಂಕಣಿಯನ್ನು, ಕನ್ನಡವನ್ನು ಹಾಗೆಯೇ ಮರಾಠಿಯನ್ನು ವಂದಿಸುತ್ತೇನೆ, ಗೌರವಿಸುತ್ತೇನೆ. ಎಲ್ಲ ರಸ್ತೆಗಳೂ ರೋಮಿಗೇನೆ ತಲುಪುತ್ತವೆ ಅನ್ನುವ ಮಾತಿದೆ. ಹಾಗೆಯೇ ಎಲ್ಲ ಭಾಷೆಗಳೂ ಮನುಷ್ಯನ ಹೃದಯಕ್ಕೇನೆ ಲಗ್ಗೆ ಇಡುತ್ತವೆ ಅನ್ನುವ ಸತ್ಯವನ್ನ ನಾವೆಲ್ಲ ಒಪ್ಪಿಕೊಂಡಿದ್ದೇವೆ.

ಹಾಗೆ ನೋಡಲು ಹೋದರೆ ಮರಾಠಿ ನಮ್ಮ ನೆರೆಯ ಭಾಷೆ. ಕರ್ನಾಟಕದ ಒಂದು ಕಡೆ ಮಲೆಯಾಳಿ ಇದೆ, ಮತ್ತೊಂದು ಕಡೆ ತಮಿಳು ಇದೆ, ಇನ್ನೊಂದು ಕಡೆ ತೆಲುಗು, ಇನ್ನೂ ಒಂದೆಡೆ ಕೊಂಕಣಿ, ಇನ್ನು ಐದನೆಯದಾಗಿ ಮರಾಠಿ ಇದೆ. ನೆರೆಹೊರೆಯವರಾಗಿ ನಾವೆಲ್ಲ ಇರುವಾಗ ಒಂದು ಪ್ರದೇಶದ ಮೇಲೆ ಇನ್ನೊಂದು ಪ್ರದೇಶ ತನ್ನ ಪ್ರಭಾವವನ್ನ ಬೀರಿಯೇ ಬೀರುತ್ತದೆ ಅನ್ನುವುದರಲ್ಲಿ ಸಂದೇಹವಿಲ್ಲ. ಈ ಪ್ರಭಾವ ಅನ್ನುವುದನ್ನು ನಾನು ಕೊಡುಕೊಳ್ಳುವುದು ಎಂದು ಕರೆಯುತ್ತೇನೆ. ಅಕ್ಕಪಕ್ಕದಲ್ಲಿರುವ ಮನೆಗಳ ಹೆಂಗಸರು ಈ ಕೆಲಸವನ್ನ ಚೆನ್ನಾಗಿ ಮಾಡುತ್ತಾರೆ. ಹಿಂದೆ ವಿದ್ಯುತ್ ಇರದ ಕಾಲದಲ್ಲಿ ಮನೆಯ ದೀಪವನ್ನ ಪಕ್ಕದ ಮನೆಯಿಂದ ಅಂಟಿಸಿಕೊಂಡು ಬರುವ ಕೆಲಸ ಸದಾ ನಡೆಯುತ್ತಿತ್ತು. ಹಬ್ಬ ಹರಿದಿನಗಳಂದು ಈ ಮನೆಯ ತಿಂಡಿ ಆ ಮನೆಗೆ ಆ ಮನೆಯ ತಿಂಡಿ ಈ ಮನೆಗೆ ಬಂದುಹೋಗುತ್ತಿತ್ತು. ಆದರೆ ಇಂದಿನ ದಿನ ಇಂತಹ ವಾತಾವರಣ ಕಡಿಮೆಯಾಗಿದೆ. ಮನುಷ್ಯ ಒಂದು ದ್ವೀಪವಾಗಿ ಬದುಕುವುದರಲ್ಲಿಯೇ ಸುಖ ಕಾಣುತ್ತಿದ್ದಾನೆ. ಯಾಂತ್ರಿಕವಾದ ಬದುಕು ನಮ್ಮ ನಮ್ಮ ನಡುವೆ ಗೋಡೆಗಳನ್ನ ನಿರ್ಮಿಸಿರುವಾಗ ಈ ಗೋಡೆಗಳನ್ನ ಕೆಡವಿ ಹಾಕುವ ಕೆಲಸ ಸಾಹಿತ್ಯ ಮಾಡಬೇಕು ಎಂದು ಬಯಸುವುದರಲ್ಲಿ ತಪ್ಪಿಲ್ಲ ಎಂದು ನಾನು ತಿಳಿಯುತ್ತೇನೆ.

ಅಂದರೆ ಸಾಹಿತ್ಯದ ಮೂಲಕ ನಾವು ಮನುಷ್ಯ ಮನುಷ್ಯರನ್ನ ಬೆಸೆಯುವ ಕೆಲಸವನ್ನ ಮಾಡಿಕೊಂಡು ಬರಬೇಕಾಗಿದೆ.

ಶ್ರವಣಬೆಳಗೊಳದ ಸರ್ವಶ್ರೇಷ್ಠ ಶಿಲ್ಪವಾದ ಗೊಮ್ಮಟನ ವಿಗ್ರಹದ ಮೇಲೆ ತಮಿಳು, ಕನ್ನಡ ಭಾಷೆಯ ಶಾಸನಗಳ ಜೊತೆಯಲ್ಲಿ 'ಶ್ರೀ ಚಾಮುಂಡರಾಯನ ಕರವೀಯಲೆ' ಅನ್ನುವ ಮರಾಠಿ ಶಾಸನ ಇರುವುದನ್ನ ನಾವು ಗಮನಿಸಿ ಹೆಮ್ಮೆ ಪಡಬೇಕಾಗಿದೆ.

ಹಾಗೆಯೇ ಮರಾಠಿಯ ಉತ್ಕೃಷ್ಟ ಕಾವ್ಯ, ೧೮೦೦ ಓವಿಗಳ ಜ್ಞಾನೇಶ್ವರಿಯಲ್ಲಿ ಕನ್ನಡ ಭಾಷೆಯ ವಿಪುಲ ಬಳಕೆ ಇರುವುದನ್ನು ಪಂಡಿತರು ಒಪ್ಪಿಕೊಂಡಿದ್ದಾರೆ.

ಕನ್ನಡದ ಲೇಖಕರಾದ ಕಾರಂತ, ಮಾಸ್ತಿ, ಬೇಂದ್ರೆ, ಭೈರಪ್ಪ, ಅನಂತಮೂರ್ತಿ, ಕಾರ್ನಾಡ, ಇವರು ಬರೆದ ಹಲವು ಕತೆ ಕಾದಂಬರಿ ನಾಟಕಗಳು ಮರಾಠಿ ಭಾಷೆಯಲ್ಲಿ ಬಂದಿರುವಂತೆಯೇ ಮರಾಠಿಯ ಕಾದಂಬರಿಗಳು, ನಾಟಕಗಳು, ದಲಿತ ಆತ್ಮಕತೆಗಳು ಕನ್ನಡದಲ್ಲಿ ಜನಪ್ರಿಯವಾಗಿವೆ.

ನಾನು ಚಿಕ್ಕಂದಿನಲ್ಲಿಯೇ ಓದಿ ಮೆಚ್ಚಿಕೊಂಡ ಕಾದಂಬರಿ ಸಾನೇ ಗುರೂಜಿಯವರ 'ಶಾಮನ ತಾಯಿ'. 'ಶಾಮಾಚಿ ಆಯಿ' ಅನ್ನುವ ಈ ಕೃತಿ ನನ್ನ ಬಾಲ್ಯದಲ್ಲಿ ನನ್ನ ಮೇಲೆ ಪರಿಣಾಮ ಉಂಟು ಮಾಡಿದ ಕೃತಿ. ನಂತರದ ದಿನಗಳಲ್ಲಿ ಇದೇ ಹೆಸರಿನ ಚಲನಚಿತ್ರವನ್ನ ಕೂಡ ನಾನು ನೋಡಿದೆ. ತನ್ನ ಮಗನನ್ನ ಬೆಳೆಸುವಲ್ಲಿ ಓರ್ವ ತಾಯಿ ತೆಗೆದುಕೊಳ್ಳುವ ಶ್ರಮ ಆದರ್ಶಪ್ರಾಯವಾದದ್ದು.

ಇಂದಿನ ದಿನಮಾನಗಳಲ್ಲಿ ಇಂತಹ ವ್ಯಕ್ತಿತ್ವ ಇರುವ ತಾಯಂದಿರನ್ನ ಕಾಣುವುದು ಕಷ್ಟವಾದರೂ ಇಂದಿಗೂ 'ಶಾಮಾಚಿ ಆಯಿ' ಪ್ರಸ್ತುತವೇ ಎಂದು ನಾನು ಅಂದುಕೊಂಡಿದ್ದೇನೆ. ಈ ಕೃತಿ ಕನ್ನಡದಲ್ಲಿ ಹಲವು ಮುದ್ರಣಗಳನ್ನ ಕಂಡಿದೆ.

೧೯೬೦ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ, ೧೯೭೪ರಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ವಿಷ್ಣು ಸಖಾರಾಮ ಖಾಂಡೇಕರ್ ಅವರ 'ಯಯಾತಿ' ಕನ್ನಡದಲ್ಲಿ ಅತೀ ಹೆಚ್ಚು ಜನ ಓದಿರುವ,

ಹೆಚ್ಚು ಜನ ಮೆಚ್ಚಿಕೊಂಡಿರುವ ಒಂದು ಕೃತಿ ಅನ್ನುವ ಮಾತನ್ನ ಹೇಳಲಿಕ್ಕೆ ನನಗೆ ಹೆಮ್ಮೆ ಅನಿಸುತ್ತದೆ. ಒಂದು ಪೌರಾಣಿಕ ಕಥಾನಕವನ್ನ ಎತ್ತಿಕೊಂಡ ಖಾಂಡೇಕರ್ ಅವರು ಮನುಷ್ಯ ತನ್ನ ಸುಖಭೋಗವನ್ನ ಪಡೆಯಲಿಕ್ಕೆ ಏನೂ ಮಾಡಬಲ್ಲ ಅನ್ನುವ ವಿಷಯವನ್ನ ಇರಿಸಿಕೊಂಡು ಆಧುನಿಕತೆಯ ನೆರಳಿನಲ್ಲಿ ತುಂಬಾ ಪರಿಣಾಮಕಾರಿಯಾಗಿ ಕತೆ ಹೇಳಿರುವುದು ಮೆಚ್ಚತಕ್ಕ ವಿಷಯ.

ಅಂತೆಯೇ 'ಶಾಂತತಾ ಕೋರ್ಟ ಚಾಲೂ ಆಹೈ', 'ಘಾಸಿರಾಮ ಕೊತ್ವಾಲ', 'ಸಖರಾಮ ಬೈಂಡರ'ನಂತಹ ನಾಟಕಗಳು ಕರ್ನಾಟಕದ ರಂಗಭೂಮಿಯ ಮೇಲೆ ಯಶಸ್ವಿಯಾಗಿವೆ. ಮಾತ್ರವಲ್ಲ 'ಉಚಲ್ಯಾ'ದಂತಹ ದಲಿತ ಆತ್ಮಕತೆಗಳನ್ನ ಕನ್ನಡದ ಓದುಗರು ಓದಿ ರೋಮಾಂಚನಗೊಂಡಿದ್ದಾರೆ.

೧೯೦೭ರಲ್ಲಿ ಲೋಕಮಾನ್ಯ ಬಾಲಗಂಗಾಧರ ತಿಲಕರು ಬೈಲಹೊಂಗಲದ ಗುರ್ಲ ಹೊಸೂರಿಗೆ ಬರುತ್ತಾರೆ. ಗುರ್ಲಹೊಸೂರು ಅಚ್ಚ ಕನ್ನಡ ಪ್ರದೇಶ. ಅಂದು ಅಲ್ಲಿಯ ಮರಾಠಿ ಮುಖಂಡರು ಮರಾಠಿಯಲ್ಲಿ ಮಾತನಾಡಿದಾಗ ತಿಲಕರು, ''ಇದು ಕನ್ನಡ ಪ್ರದೇಶ. ಕರ್ನಾಟಕದಲ್ಲಿ ಕೆಲಸ ಮಾಡುವವರು ಕನ್ನಡದಲ್ಲಿ ಮಾತನಾಡುವ ಅಭ್ಯಾಸ ಮಾಡಿಕೊಳ್ಳಬೇಕು,'' ಎಂಬ ಕಿವಿಮಾತನ್ನ ಹೇಳುತ್ತಾರೆ. ಅಲ್ಲದೆ, ''ನನಗೆ ಕನ್ನಡ ಬರುವುದಿಲ್ಲ, ನಾನು ಮರಾಠಿಯಲ್ಲಿಯೇ ಮಾತನಾಡುತ್ತೇನೆ ನನ್ನನ್ನ ಕ್ಷಮಿಸಿ,'' ಎಂದು ವಿನಯದ ಮಾತುಗಳನ್ನ ತಿಲಕರು ಹೇಳಲು ಮರೆಯುವುದಿಲ್ಲ. ತಿಲಕರ ಮರಾಠಿ ಭಾಷಣವನ್ನ ಮುದವೀಡ ಕೃಷ್ಣರಾಯರು ಕನ್ನಡಕ್ಕೆ ಅನುವಾದಿಸುತ್ತಾರೆ.

ಇಷ್ಟೇ ಅಲ್ಲ, ತಾವು ಮರಾಠಿಯಲ್ಲಿ ಬರೆದ 'ಗೀತಾ ರಹಸ್ಯ' ಗ್ರಂಥವನ್ನ ಕನ್ನಡಕ್ಕೆ ಅನುವಾದಿಸುವಂತೆ ತಿಲಕರು ಅಂದಿನ ಸಭೆಯಲ್ಲಿ ಭಾಗವಹಿಸಿದ್ದ ಮುದವೀಡು ಕೃಷ್ಣರಾಯರನ್ನ ಕೋರಿಕೊಳ್ಳುತ್ತಾರೆ. ಮುದವೀಡರು ಕನ್ನಡ ನಾಡಿನಲ್ಲಿ ಭಾಷೆಯ ಬಗ್ಗೆ ದೊಡ್ಡ ಹೋರಾಟವನ್ನ ಕೈಗೊಂಡ ವ್ಯಕ್ತಿಗಳಲ್ಲಿ ಓರ್ವರು. ಮುದವೀಡರು ತಾವು ಭಾಷಾ ಪಂಡಿತರಲ್ಲ, ಈ ಕೆಲಸ ತನ್ನಿಂದ ಆಗದು ಎಂದಾಗ, ತಿಲಕರು ಒತ್ತಾಯ ಮಾಡಿ ಮುದವೀಡರಿಂದಲೇ 'ಗೀತಾ ರಹಸ್ಯ'ದ ಕನ್ನಡ ಅನುವಾದವನ್ನ ಮಾಡಿಸುತ್ತಾರೆ. ಮುದವೀಡರು ಮಾಡಿದ ಅನುವಾದವನ್ನ ಕನ್ನಡದ ಮತ್ತೋರ್ವ ಧೀಮಂತ ಬಿ. ಎಂ. ಶ್ರೀ. ಅವರು ಪರಿಶೀಲಿಸಿ ಅನುವಾದದ ಕರಡನ್ನ ತಿದ್ದಿಕೊಡುತ್ತಾರೆ.

ದ. ರಾ. ಬೇಂದ್ರೆ ಎಂದೇ ಖ್ಯಾತನಾಮರಾಗಿರುವ ಅಂಬಿಕಾತನಯದತ್ತರು ಕನ್ನಡ ಕಾವ್ಯಕ್ಕೆ ಬಹಳ ದೊಡ್ಡ ಕೊಡುಗೆಯನ್ನ ನೀಡಿದವರು. ನಮ್ಮ ಭಾಷೆಗೆ ಹೊಸ ಮೆರಗನ್ನ, ಆಯಾಮವನ್ನ ತಂದು ಕೊಟ್ಟವರು. ಇವರ ಮಾತೃಭಾಷೆ ಮರಾಠಿ ಅನ್ನುವುದು ನಮಗೆಲ್ಲ ಹೆಮ್ಮೆಯ ಸಂಗತಿ. ಅಂಬಿಕಾತನಯದತ್ತರು ಕನ್ನಡ ಕವಿತೆಗಳ ಜೊತೆಯಲ್ಲಿಯೇ ಮರಾಠಿಯಲ್ಲಿಯೂ ಕವಿತೆಗಳನ್ನ ಬರೆದು ದ್ವಿಭಾಷಾ ಕವಿ ಎಂದೇ ಪ್ರಖ್ಯಾತರಾದವರು.

ಇವರ 'ತೀನ ಮಾಕಡ' ಅನ್ನುವ ಮರಾಠಿ ಕವಿತೆ ಮರಾಠಿ ಭಾಷೆಯ ಸೊಗಡನ್ನ ಬಳಸಿಕೊಳ್ಳುತ್ತ 'ತೀ ನ ಮಾಕಡ', 'ತೀನ ಮಾಕಡ' ಎಂದು ಗಾಂಧೀಜಿಯವರ ಬಳಿಯಿದ್ದ ಮೂರು ಮಂಗಗಳ ಕುರಿತು ಚಮತ್ಕಾರದ ಮಾತುಗಳನ್ನ ಹೇಳುತ್ತದೆ. ಇಂತಹ ಹಲವು ಮರಾಠಿ ಕವಿತೆಗಳನ್ನ ಈ ಕನ್ನಡದ ಕವಿ ಬರೆದಿದ್ದಾರೆ ಅನ್ನುವುದು ನಮಗೆ ಹೆಮ್ಮೆಯ ವಿಷಯ.

ಮರಾಠಿ ಹಾಗೂ ಕನ್ನಡದ ನಡುವೆ ಈ ಬಗೆಯ ನೂರಾರು ಕೊಡು-ಕೊಳ್ಳುವ ಘಟನೆಗಳು ನಡೆದದ್ದನ್ನ ನಾವು ನೋಡಬಹುದು.

ಕನ್ನಡ ಜನಪದ ಪ್ರಪಂಚ ಮರಾಠಿ ಭಾಷೆ ಸಂಸ್ಕೃತಿಯೊಡನೆ ತೀರಾ ಹತ್ತಿರದ ಸಂಬಂಧ ಇರಿಸಿಕೊಂಡಿದೆ. ಪಂಢರಾಪುರದ ಪುರಂದರ ವಿಠಲನನ್ನ ಕಾನಡಾಂಚ ದೇವ್ ಎಂದು ಕರೆಯುತ್ತಾರೆ ಅನ್ನುವುದು ಹಳೆಯ ವಿಷಯ. ಅಂತೆಯೇ ಕರ್ನಾಟಕದಿಂದ ನೂರಾರು ಜನ ಪಂಢರೀನಾಥನ ಭಕ್ತರು ಪಂಢರಾಪುರಕ್ಕೆ ಹೋಗುವುದು ಒಂದು ಪದ್ಧತಿಯೇ ಆಗಿದೆ. ಹಸಿರು, ಕೆಂಪು, ಹಳದಿ ಬಣ್ಣದ ಮೇಲುಡುಗೆಯನ್ನ ಧರಿಸಿದ ಜನ ಕೈಯಲ್ಲಿ ಬಾವುಟಗಳನ್ನ ಹಿಡಿದು, ಹಾಡುತ್ತ ಕುಣಿಯುತ್ತ, ನಡೆದುಕೊಂಡೇ ಹೋಗುವ ಪದ್ಧತಿ ಇಂದಿಗೂ ಇದೆ. ಪಂಢರಿ ಭಜನೆ ಎಂದೇ ಕರೆಯಲಾಗುವ ಇದು ಒಂದು ಜನಪದ ಕಲೆಯಾಗಿ ಇಲ್ಲಿ ಬೆಳೆದುಕೊಂಡಿದೆ. ಈ ಕಲಾವಿದರು ತಾವು ಹೇಳುವ ಹಾಡುಗಳ ಮೂಲಕ ಕನ್ನಡನಾಡಿನಿಂದ ಪಂಢರಾಪುರಕ್ಕೆ ಹೋಗುವಾಗಿನ ದಾರಿಯನ್ನ, ಅವರ ಶ್ರಮವನ್ನ, ಕಲ್ಲುಮುಳ್ಳಿನ ದಾರಿಯನ್ನ ಬಣ್ಣಿಸುತ್ತಾರೆ.

ಹಾಗೆಯೇ ಗೊಂದಲಿಗರ ಮೇಳ, ವಾಘೇ ಮುರಳಿ, ಲಾವಣಿ ಮೊದಲಾದ ಜನಪದ ಕಲಾ ಪ್ರಕಾರಗಳ ಹಿಂದೆ ಮರಾಠಿಯ ಪ್ರಭಾವ ಇದೆ.

ನಾನು ಈಗ ಇಪ್ಪತ್ತು ವರ್ಷಗಳ ಹಿಂದೆ ಮಹಾರಾಷ್ಟ್ರದ ಮಕ್ಕಳ ಸಾಹಿತ್ಯ ಮತ್ತು ಜನಪದ ಕಲೆಯ ಬಗ್ಗೆ ಅಧ್ಯಯನ ಮಾಡಲು ಪೂನಾ, ಮಿರಜ್, ಕೊಲ್ಲಾಪುರ, ಸಾಂಗ್ಲಿ, ಮುಂಬಯಿ ಮೊದಲಾದ ನಗರಗಳಿಗೆ ಭೇಟಿ ಕೊಟ್ಟಿದ್ದೆ. ಇಲ್ಲಿ ಹಲವಾರು ಪ್ರಖ್ಯಾತ ಲೇಖಕರನ್ನ ಪತ್ರಿಕಾ ಸಂಪಾದಕರನ್ನ ಭೇಟಿಯಾಗುವ ಅವಕಾಶ ದೊರೆಯಿತು.

ಪೂನಾದಲ್ಲಿ ಒಂದು ಮಕ್ಕಳ ಮಾಸ ಪತ್ರಿಕೆಯ ಕಛೇರಿಗೆ ಹೋದಾಗ ಅಲ್ಲಿ ಸಂಪಾದಕರ ಹಿಂಬದಿಯ ಗೋಡೆಯ ಮೇಲೆ ನಾನು ಶ್ರೀಧರ ಸ್ವಾಮಿಗಳ ಒಂದು ಪಟವನ್ನ ಕಂಡೆ. ಅವರು ನಮ್ಮೂರಿನವರಾಗಿದ್ದರಿಂದ ಸಹಜವಾಗಿ, ''ನಮ್ಮೂರಿನ ಸ್ವಾಮೀಜಿಗಳ ಭಾವಚಿತ್ರ ಇಲ್ಲಿ ಏಕೆ ?'' ಎಂದು ಕೇಳಿದೆ. ''ಅವರು ನಮ್ಮ ಗುರುಗಳು, ನೀವು ಇವರ ಊರಿನವರೇ'' ಎಂದು ಅವರು ನನ್ನನ್ನು ತುಂಬಾ ಗೌರವಾದರಗಳಿಂದ ಕಂಡರು. ಇನ್ನು ಅನೇಕ ಮಿತ್ರರನ್ನ ನನಗೆ ಪರಿಚಯ ಮಾಡಿಕೊಟ್ಟರು. ಸಜ್ಜಲಗಡದ ಶ್ರೀಧರ ಸ್ವಾಮಿಗಳು ತಮ್ಮ ಊರನ್ನ ಬಿಟ್ಟುಬಂದು ಸಾಗರದಂತಹ ದೂರದ ಊರಿನಲ್ಲಿ ಜನೋಪಯೋಗಿ ಕೆಲಸಗಳನ್ನ ಮಾಡುತ್ತ ದೇವಾಲಯ ಗುಡಿ ಇತ್ಯಾದಿಗಳನ್ನ ನಿರ್ಮಿಸಿ ಜನಪ್ರಿಯರಾದುದನ್ನ ಬಲ್ಲ ನಾನು ಅವರ ಭಕ್ತರ ನಡುವೆ ಸಂತಸದಿಂದ ತಿರುಗಾಡಿದೆ.

ಸಾಗರಕ್ಕೆ ಕೆಲವೇ ಕಿ. ಮೀ. ದೂರದಲ್ಲಿರುವ ಶ್ರೀ ಶ್ರೀಧರಾಶ್ರಮಕ್ಕೆ ಮಹಾರಾಷ್ಟ್ರದಿಂದ ಇಂದಿಗೂ ಜನ ಬರುವುದು ಈ ಊರಿನವನಾಗಿ ನನಗೆ ಹೆಮ್ಮೆಯ ವಿಷಯ. ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ಶ್ರೀಧರ ಸ್ವಾಮಿಗಳನ್ನ ನಾನು ನೋಡಿದವನೆ. ಅವರ ಪ್ರವಚನ, ಬೋಧನೆ, ಜೀವನ ಇಲ್ಲಿಯ ಜನರನ್ನ ಆಕರ್ಷಿಸಿದ್ದು ಮಾತ್ರವಲ್ಲದೆ ಇಲ್ಲಿ ಅವರ ಭಕ್ತ ಕೋಟಿಯೇ ತಲೆ ಎತ್ತಿದ್ದನ್ನ ನಾನು ನೋಡಿದ್ದೇನೆ. ಭಾಷೆಯ ಯಾವುದೇ ಗೊಂದಲವಿಲ್ಲದೆ ಜನ ಈ ಸಂತನನ್ನ ಒಪ್ಪಿಕೊಂಡದ್ದು ನನಗೆ ಸಂತಸ ತಂದಿದೆ. ಒಂದು ತಿಂಗಳ ನನ್ನ ಮಹಾರಾಷ್ಟ್ರದ ಪ್ರವಾಸದ ಸಂದರ್ಭದಲ್ಲಿ ನನಗೆ ನಾನು ಬೇರೊಂದು ರಾಜ್ಯದಲ್ಲಿ, ಬೇರೆ ಭಾಷೆಯವರ ನಡುವೆ ಇದ್ದೇನೆ ಎಂದು ಅನಿಸಲಿಲ್ಲ. ಅಲ್ಲಿ ಹಲವಾರು ನಾಟಕಗಳನ್ನ, ಜನಪದ ಕಲಾ ಪ್ರದರ್ಶನಗಳನ್ನ ನೋಡಿದೆ. ಮುಖ್ಯವಾಗಿ ನನಗೆ ತಮಾಷಾಗಳನ್ನ ನೋಡಬೇಕಿತ್ತು. ಪೂನಾದ ಲಕ್ಷ್ಮೀ ರೋಡಿನ ತಮಾಷಾ ಮಂದಿರದಲ್ಲಿ ಹಲವಾರು ತಮಾಷಾಗಳನ್ನ ನೋಡಿದೆ, ಹಲವಾರು ಕಲಾವಿದರನ್ನ ಭೇಟಿ ಮಾಡಿದೆ.

ಅಂತೆಯೇ ನನ್ನ ಪ್ರವಾಸದಲ್ಲಿ ನನಗೆ ಆದ ಒಂದು ಉಪಯೋಗವೆಂದರೆ ಮಕ್ಕಳಿಗಾಗಿ ಮರಾಠಿ ಸಾಹಿತಿಗಳು ರೂಪಿಸಿದ 'ಸಾನೇ ಗುರೂಜಿ ಕಥಾ ಕಥನ ಮಾಲಾ' ಅನ್ನುವ ಒಂದು ಸುಂದರ ಕಲಾ ಪ್ರಕಾರವನ್ನ ನೋಡಿದ್ದು. ಪೂನಾ ಮತ್ತು ಮುಂಬಯಿಯಲ್ಲಿ ನಾನು ಈ ಕಲೆಯ ಪ್ರದರ್ಶನವನ್ನ ಕಂಡೆ. ಮಕ್ಕಳು ಕತೆಯೊಂದನ್ನು ಹೇಳುವ ಕಲೆಯನ್ನ ಕರಗತ ಮಾಡಿಕೊಂಡು ಕತೆಗಳನ್ನ ಬಹಳ ಪರಿಣಾಮಕಾರಿಯಾಗಿ ಹೇಳುವುದನ್ನ ಕೇಳಿದೆ. ಮಕ್ಕಳು ಕತೆಗಳನ್ನ ಹೇಳುತ್ತಾರೆ ಅನ್ನುವುದಕ್ಕಿಂತ ಅಭಿನಯಿಸಿ ತೋರಿಸುತ್ತಾರೆ ಅಂದರೆ ಸರಿ. ಈ ಬಗೆಯ ಒಂದು ಕಥಾ ಕ್ರಮವನ್ನ ಕನ್ನಡದಲ್ಲಿ ತರಬೇಕು ಅನ್ನುವ ನನ್ನ ಮತ್ತು ನನ್ನ ಕೆಲ ಸ್ನೇಹಿತರ ಪ್ರಯತ್ನ ಫಲಕಾರಿಯಾಗಲಿಲ್ಲ.

ಸಾಹಿತ್ಯ ಸದಾ ಮನುಷ್ಯನ ಒಳಿತನ್ನೇ ಬಯಸುತ್ತದೆ ಅನ್ನುವ ಮಾತನ್ನ ನಾನು ಹೇಳಿದೆ. ಈ ಒಳಿತು ಅನ್ನುವುದು ಬೇರೆ ಬೇರೆ ಭಾಷೆಗಳ ಮಾಧ್ಯಮದ ಮೂಲಕ ವ್ಯಕ್ತವಾಗುವುದುಂಟು.

ಕನ್ನಡದ ಪ್ರಖ್ಯಾತ ದಾರ್ಶನಿಕ ಕವಿ ಡಿ.ವಿ.ಜಿ.ಯವರು ತಮ್ಮ ಕಗ್ಗದಲ್ಲಿ ಒಂದು ಮಾತನ್ನ ಹೇಳುತ್ತಾರೆ:

ಗೌರವಿಸು ಜೀವನವ, ಗೌರವಿಸು ಚೇತನವ
ಆರದೋ ಜಗವೆಂದು ಭೇದವೆಣಿಸದಿರು
ಹೋರುವುದೆ ಜೀವನ ಸಮೃದ್ಧಿಗೋಸುಗ, ನಿನಗೆ
ದಾರಿಯಾತ್ಮೋನ್ನತಿಗೆ ಮಂಕುತಿಮ್ಮ.

ಇದೇ ಅರ್ಥ ಬರುವಂತೆ ಜ್ಞಾನೇಶ್ವರಿಯ ಕವಿ ತನ್ನ ಅಂತಿಮ ಪ್ರಾರ್ಥನೆಯಲ್ಲಿ ಹೇಳುತ್ತಾನೆ :

''ದುಷ್ಟರು ತಮ್ಮ ದುಷ್ಟತನವನ್ನ ಬಿಡಲಿ, ಒಳ್ಳೆಯ ತನದ ಬಗ್ಗೆ ಪ್ರೀತಿಯನ್ನ ಬೆಳೆಸಿಕೊಳ್ಳಲಿ. ಜೀವಿಗಳು ಸಾಮರಸ್ಯದಲ್ಲಿ ಇರಲಿ. ಕೆಡುಕಿನ ಕತ್ತಲೆ ತೊಲಗಲಿ. ನೈಜ್ಯಧರ್ಮದ ಸೂರ್ಯ ಪ್ರಪಂಚವನ್ನ ಪ್ರಕಾಶಗೊಳಿಸಲಿ. ತಾವು ಬಯಸಿದ್ದನ್ನ ಎಲ್ಲರೂ ಸಾಧಿಸಲಿ.''

ಜ್ಞಾನೇಶ್ವರಿಯ ಈ ಆಶಯದೊಡನೆ, ನನ್ನ ಬಗ್ಗೆ ತೋರಿದ ಪ್ರೀತಿಗೆ ಮತ್ತೊಮ್ಮೆ ನಿಮ್ಮೆಲ್ಲರಿಗೆ ವಂದನೆಗಳನ್ನ ಹೇಳುತ್ತೇನೆ. ನಮಸ್ಕಾರ.

*(ಬೆಂಗಳೂರಿನ ಕಿತಾಬ್ ಖಾನಾ ವಾಚಕ ಮಂಚ್, ಇವರು ಮಹಾರಾಷ್ಟ್ರ ಮಂಡಳ್, ಗಾಂಧಿ ನಗರ, ಬೆಂಗಳೂರು ಇಲ್ಲಿ ಏರ್ಪಡಿಸಿದ್ದ ಮರಾಠಿ ಸಾಹಿತ್ಯ ಮೇಳವದಲ್ಲಿ ಮಂಡಿಸಿದ ಪ್ರಬಂಧ.)*

**ಡಾ|| ನಾ. ಡಿಸೋಜ**
೨ನೇ ಕ್ರಾಸ್, ನೆಹರು ನಗರ, ಸಾಗರ - ೫೭೭ ೪೦೧

# ಒಳಗೊಳ್ಳುವ ಚಳುವಳಿಯಾಗಬೇಕಿದೆ ಮಹಿಳಾ ಅಧ್ಯಯನ

ಡಾ|| ಎನ್. ಗಾಯತ್ರಿ

ಇಪ್ಪತ್ತೊಂದನೆಯ ಶತಮಾನ ಆರಂಭವಾಗಿ ಒಂದು ದಶಕವೇ ಸರಿದಿದೆ. ಈ ಅವಧಿಯು ಸರ್ಕಾರ, ಬಂಡವಾಳಶಾಹಿ ಮತ್ತು ಇತರ ಕೆಲವು ಸಾಮಾಜಿಕ ಶಕ್ತಿಗಳು ದೊಡ್ಡ ದೊಡ್ಡ ಜನಸಮುದಾಯದ ಗುಂಪುಗಳನ್ನು ಮತ್ತು ಅವುಗಳ ದನಿಯನ್ನು ಅಗೋಚರವನ್ನಾಗಿಸಿ, ಸದ್ದು ಅಡಗಿಸುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಅಂಚಿನ ನೆಲೆಯಲ್ಲಿರುವ ಹಲವಾರು ಗುಂಪುಗಳು ಹಳೆಯ ಅಸಮಾನತೆಯ ಜೊತೆಯಲ್ಲಿಯೇ. ಅವುಗಳನ್ನು ವಿರೋಧಿಸುತ್ತಾ ತಮ್ಮ ಹಕ್ಕುಗಳನ್ನು ಸಮರ್ಥಿಸಿಕೊಳ್ಳುತ್ತಾ ಹೊಸ ದನಿಗಳಾಗಿ ಮೇಲೇಳುತ್ತಿವೆ. ಸರ್ಕಾರ, ಪ್ರಾಕೃತಿಕ ಸಂಪತ್ತು, ಶ್ರಮ, ದೇಹ, ಮಾರುಕಟ್ಟೆ, ಸಂಸ್ಕೃತಿ ಹಾಗೂ ಸಿದ್ಧಾಂತ, ಸಂಘರ್ಷ, ಭಾಷೆ, ಕಾನೂನಿನ ಕ್ಷೇತ್ರಗಳು, ಮನುಷ್ಯ ಸಂಬಂಧದ ಎಲ್ಲೆಗಳು – ಈ ಎಲ್ಲ ವಿಷಯಗಳನ್ನು ಕುರಿತಂತೆ ಈ ಅಂಚಿನ ನೆಲೆಯ ಗುಂಪುಗಳು ಮುಖಾಮುಖಿಯಾಗುತ್ತಲೇ ಇವೆಲ್ಲವನ್ನೂ ಒಳಗೊಳ್ಳುವ ರಾಜಕೀಯದ ಚಳುವಳಿಗೆ ಒತ್ತಾಯಿಸುತ್ತಿವೆ. ಮಹಿಳಾ ಅಧ್ಯಯನದ ಚಳುವಳಿಯ ಭಾಗವಾಗಿ ಇತ್ತೀಚೆಗೆ ವಾರ್ಧಾದಲ್ಲಿ ಜನವರಿ ೨೧ರಿಂದ ೨೪ರವರೆಗೆ ಭಾರತ ಮಹಿಳಾ ಅಧ್ಯಯನ ಸಂಸ್ಥೆಯ ೧೩ನೇ ವಾರ್ಷಿಕ ಸಮ್ಮೇಳನವು ಈ ಕುರಿತು ವಿಸ್ತೃತವಾದ ಅಭ್ಯಾಸವನ್ನು ನಡೆಸಿದ್ದನ್ನು ಇಲ್ಲಿ ಗಮನಿಸಬಹುದಾಗಿದೆ. ಸಮಾಜದಲ್ಲಿ ಅಸಮಾನತೆಯನ್ನು ಹುಟ್ಟಿಹಾಕುವ ಅಧಿಕಾರದ ಸಂಬಂಧಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳುವ ಸ್ತ್ರೀವಾದಿ ಪಾಂಡಿತ್ಯದಲ್ಲಿ ಭಾರತೀಯ ಮಹಿಳಾ ಅಧ್ಯಯನ ಸಂಸ್ಥೆ ನಂಬಿಕೆಯಿಟ್ಟಿದೆ. ಅಂತಹ ದೃಷ್ಟಿಕೋನದಿಂದಲೇ ಜ್ಞಾನದ ಉತ್ಪತ್ತಿ, ಪ್ರಸಾರ ಮತ್ತು ರೂಪಾಂತರದ ಮೂಲಕ ಕಟ್ಟಬಹುದಾದ ಪರ್ಯಾಯ ಚಳುವಳಿಯೊಂದಿಗೆ ಹೆಜ್ಜೆಹಾಕಲಿದೆ. ಆದ್ದರಿಂದಲೇ ಅಧ್ಯಯನ ಸಂಸ್ಥೆಯು ಕೇವಲ ವಿಶ್ವವಿದ್ಯಾಲಯಕ್ಕೆ ಸೀಮಿತವಾಗದೆ, ಲಿಂಗನ್ಯಾಯವು ಅತಿ ಅಗತ್ಯವಾಗಿ ಬೇಕಾಗಿರುವ ದಿನ ನಿತ್ಯದ ಜೀವನದ ಹೋರಾಟದಲ್ಲೂ ಸ್ತ್ರೀಪುರುಷರನ್ನು ಒಳಗೊಳ್ಳುವಂತೆ ಕಾರ್ಯ ನಿರ್ವಹಿಸುತ್ತದೆ. ಈ ಪ್ರಮುಖ ಘಟ್ಟದಲ್ಲಿ ಸಾಮಾಜಿಕ ವಿಶ್ಲೇಷಣೆಗೆ ಅಗತ್ಯವಾದ ಸಾಧನವಾಗಿ ಮಹಿಳಾ ಅಧ್ಯಯನವು ಕಾರ್ಯ ನಿರ್ವಹಿಸಬೇಕೆಂಬ ಆಶಯದಲ್ಲಿ ಸಂಸ್ಥೆಯು ನಂಬಿಕೆಯಿಟ್ಟಿದೆ.

ಭಾರತ ಮಹಿಳಾ ಅಧ್ಯಯನ ಸಂಸ್ಥೆಯ ಸಂಸ್ಥಾಪಕ ಸದಸ್ಯರಲ್ಲಿ ಪ್ರಮುಖರಾದ ಮಾಧುರಿ ಶಾ ಅವರ ಹೆಸರಿನ 'ಮಾಧುರಿ ಶಾ ದತ್ತಿ ಉಪನ್ಯಾಸ'ವು ವಿಶೇಷ ಮಹತ್ವವುಳ್ಳದ್ದು. ಈ ಬಾರಿಯ ಉಪನ್ಯಾಸವನ್ನು ಖ್ಯಾತ ದಲಿತ ಸಾಹಿತಿ ಕುಮುದ್ ಪಾವ್ಡೆಯವರು ನಡೆಸಿಕೊಟ್ಟರು. ಸಂಸ್ಕೃತ ಕಲಿಯಲು ಆಕೆ ಮಾಡಿದ ಹೋರಾಟ ಗಾಥೆಯನ್ನು ಸಭಿಕರ ಮುಂದೆ ಬಿಚ್ಚಿಡುತ್ತಾ ಲಿಂಗ ಮತ್ತು ಜಾತಿಯ ಗಾಢ ಸಂಬಂಧವನ್ನು ಕುರಿತು ಅವರು ಪ್ರಸ್ತಾಪಿಸಿದರು.

ಇಂದು ದೇಶಾದ್ಯಂತ ಹೊಟ್ಟೆಯ ಹಸಿವು ಬಹುಮುಖ್ಯ ಸಮಸ್ಯೆಯಾಗಿದೆ. ಕೃಷಿ, ಗಣಿಗಾರಿಕೆಗಳಲ್ಲಿ ಕಾರ್ಪೊರೇಟ್ ವಲಯಗಳ ಪ್ರವೇಶ ಆದಿವಾಸಿಗಳ ಬದುಕನ್ನು ಮೂರಾಬಟ್ಟೆ ಮಾಡಿದೆ. ನೆಲ ಮತ್ತು ಇತರ ಸಂಪನ್ಮೂಲಗಳಿಗಾಗಿ ಹೋರಾಟ ಮಾಡುತ್ತಿರುವ ಚತ್ತೀಸಗಡ್, ಜಾರ್ಖಂಡ್ ಮತ್ತು ಒರಿಸ್ಸಾ ಮತ್ತು ವಾರ್ಧಾದ ನೆರೆಪ್ರದೇಶಗಳಲ್ಲಿನ ಆದಿವಾಸಿಗಳು ಇಂದು ಅನಾಥರಾಗುತ್ತಿದ್ದಾರೆ. ಒರಿಸ್ಸಾದ ಚಿಕ್ಕ ಹಳ್ಳಿ. ಅಲ್ಲಿ ಇತ್ತೀಚೆಗೆ ಒಂದು ದೊಡ್ಡ ಪೊಲೀಸ್ ಠಾಣೆಯನ್ನು ಕಟ್ಟಲಾಯಿತು. ಆದರೆ ಸಾರ್ವಜನಿಕ ಬೇಡಿಕೆಯಿದ್ದಾಗ್ಯೂ ಕಳೆದ ಐದು ವರ್ಷಗಳಲ್ಲಿ ಒಂದು ಆರೋಗ್ಯ ಕೇಂದ್ರವನ್ನಾಗಲೀ, ಶಾಲೆಯನ್ನಾಗಲೀ ರಾಜ್ಯ ಸರ್ಕಾರ ನಿರ್ಮಿಸಲಿಲ್ಲ. ಇದಕ್ಕೆ ಕಾರಣ, ಆ






ಹಳ್ಳಿಯಲ್ಲಿ ಒಂದು ಹೊಸ ಅಲ್ಯೂಮಿನಿಯಂ ಕಾರ್ಖಾನೆಯೊಂದು ಆರಂಭವಾಗುತ್ತಿದೆ. ಆದ್ದರಿಂದ ಸರ್ಕಾರಕ್ಕೆ ಅಲ್ಲಿ ಆರೋಗ್ಯ ಕೇಂದ್ರಕ್ಕಿಂತ ಪೊಲೀಸ್ ಠಾಣೆ ಮುಖ್ಯವಾಗಿ ಕಾಣುತ್ತಿದೆ. ಕಂಪೆನಿಗೆ ಪೊಲೀಸ್ ಠಾಣೆ ಮುಖ್ಯವಾಗುತ್ತದೆ. ಏಕೆಂದರೆ ಅವರು ತಮ್ಮ ಕಾರ್ಖಾನೆಗೆಂದು ನೆಲ ಕಬಳಿಸಲು ಹೊರಟಾಗ ಜನರ ಹೋರಾಟವನ್ನು ಅದುಮಿಡಲು. ಕಾರ್ಪೊರೇಟ್ ಕ್ಷೇತ್ರದಲ್ಲಿ ಬೀಜ ಮತ್ತು ಕ್ರಿಮಿ ನಾಶಕಗಳ ಕೇಂದ್ರೀಕರಣವು ಕೃಷಿಯ ಉತ್ಪಾದನಾ ವೆಚ್ಚವನ್ನು ಹೆಚ್ಚಿಸುತ್ತದೆ. ಯಾಂತ್ರೀಕರಣ ಹೆಚ್ಚಾದಾಗ ಸಣ್ಣ ರೈತರು ಕೆಲಸ ಕಳೆದುಕೊಂಡು ಉದ್ಯೋಗಕ್ಕಾಗಿ ವಲಸೆ ಹೋಗಬೇಕಾಗುತ್ತದೆ. ಕೃಷಿ ಮತ್ತು ಗಣಿಗಳಲ್ಲಿ ಕೆಲಸ ಕಳೆದುಕೊಳ್ಳುವ ಮಹಿಳೆಯರು ಉದ್ಯೋಗಕ್ಕಾಗಿ ಮನೆಗೆಲಸ ಅಥವಾ ಇನ್ನಿತರ ಚಿಕ್ಕ ಕೆಲಸಗಳನ್ನು ಅರಸಿ ವಲಸೆ ಹೋಗುತ್ತಾರೆ. ಆದ್ದರಿಂದಲೇ ಇಂತಹ ಸಂದರ್ಭಗಳಲ್ಲಿ ನಡೆಯುವ ಹೋರಾಟಗಳಲ್ಲಿ ಮಹಿಳೆಯರು ಮುಂಚೂಣಿಯಲ್ಲಿರುತ್ತಾರೆ ಮತ್ತು ಲೈಂಗಿಕ ಹಿಂಸೆಗೆ ಗುರಿಯಾಗುತ್ತಾರೆ. ಈ ಎಲ್ಲ ವಿಷಯಗಳ ಚರ್ಚೆ ಸಮ್ಮೇಳನದಲ್ಲಿ ನಡೆಯಿತು.

೧೯೫೮ರ ಶಸ್ತ್ರಾಸ್ತ್ರಗಳ ವಿಶೇಷ ಕಾಯಿದೆ (ಎ.ಎಫ್.ಎಸ್.ಪಿ.ಎ.)ಯನ್ನು ತೆಗೆದು ಹಾಕಬೇಕೆಂದು ಈಶಾನ್ಯ ಭಾರತದ ಇರೋಮ್ ಶರ್ಮಿಳಾ ಆಮರಣಾಂತ ಉಪವಾಸ ಸತ್ಯಾಗ್ರಹ ಆರಂಭಿಸಿ ಹತ್ತು ವರ್ಷಗಳು ಸಂದಿವೆ. ಈ ಕಾಯಿದೆಯು ಸೇನೆಗೆ ಪೈಶಾಚಿಕ ಹಕ್ಕುಗಳನ್ನು ನೀಡಿ ಕಾಶ್ಮೀರ ಮತ್ತು ಈಶಾನ್ಯ ಭಾರತದ ಜನತೆಗೆ ಸಿಂಹಸ್ವಪ್ನವಾಗಿದೆ. ಅಷ್ಟೇ ಅಲ್ಲ, ಮಹಿಳೆಯರ ಮೇಲಿನ ಅತ್ಯಾಚಾರ ಪ್ರಕರಣಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿವೆ. ವಿಶೇಷವಾಗಿ ಮಹಿಳೆಯರು ಮತ್ತು ಮಕ್ಕಳು ಈ ಕಾಯಿದೆಯ ಬಿಸಿಗೆ ತುತ್ತಾಗುತ್ತಿದ್ದಾರೆ. ಸೇನೆ, ಪೊಲೀಸ್ ಮತ್ತು ಭಯೋತ್ಪಾದಕರು ಈ ರೀತಿಯ ಹಿಂಸೆಯನ್ನು ಸಹಜ ಮತ್ತು ಅಂಗೀಕಾರಾರ್ಹ ಎಂಬಂತೆ ಪರಿಭಾಷಿಸಿರುವ ರೀತಿ ನಿಜಕ್ಕೂ ಭಯಂಕರ.

ಈ ಎಲ್ಲ ಸವಾಲುಗಳ ನಡುವೆ, ದೆಹಲಿ ಉಚ್ಚ ನ್ಯಾಯಾಲವು ಇಂಡಿಯನ್ ಪೀನಲ್ ಕೋಡ್‌ನ ಪ್ರಕರಣ ೩೭೭ರನ್ವಯ ಸಲಿಂಗಕಾಮ ಅಪರಾಧವಲ್ಲವೆಂದು ಘೋಷಿಸಿರುವುದನ್ನು ಸಭೆ ಸಂತೋಷದಿಂದ ಸ್ವಾಗತಿಸಿತು. ಲೆಸ್ಬಿಯನ್, ಗೇ, ಉಭಯಲಿಂಗಿ ಮತ್ತು ಟ್ರಾನ್ಸ್ ಜೆಂಡರ್ ಸಮುದಾಯಗಳು ತಮ್ಮ ಕುಟುಂಬದಿಂದ ಮಾತ್ರವಲ್ಲದೆ, ಸರ್ಕಾರ ಮತ್ತು ಹೊರಗಿನ ಸಮುದಾಯದಿಂದಲೂ ಅಂಗೀಕೃತವಾಗಬಹುದಾದ ಹೊಸ ಭವಿಷ್ಯವನ್ನು ಎದುರುನೋಡಬಹುದಾಗಿದೆ.

ಕವಯಿತ್ರಿ, ಕಾರ್ಯಕರ್ತೆ ಶರ್ಮಿಳಾ ಇರೋಮ್ ಆರಂಭಿಸಿದ ಆಮರಣಾಂತ ಉಪವಾಸ ಸತ್ಯಾಗ್ರಹ ಈಗ ಹತ್ತು ವರ್ಷಗಳನ್ನು ಪೂರೈಸಿದೆ. ಇಂಫಾಲದಲ್ಲಿ ಸರ್ಕಾರ ಅವಳಿಗೆ ಬಲವಂತವಾಗಿ ಮೂಗಿನ ಮೂಲಕ ಆಹಾರವನ್ನು ನೀಡುವ ದಬ್ಬಾಳಿಕೆ ನಡೆಸುತ್ತಿದೆಯೇ ಹೊರತು ಅವಳ ಪ್ರತಿಭಟನೆಯ ಗಾಯಕ್ಕೆ ಮುಲಾಮು ಹಾಕುವ ಯೋಚನೆ ಮಾಡುತ್ತಿಲ್ಲ. ೧೯೫೮ರ ಶಸ್ತ್ರಾಸ್ತ್ರಗಳ ವಿಶೇಷ ಕಾಯಿದೆ (ಎಎಫ್‌ಎಸ್‌ಪಿಎ)ಯನ್ನು ತೆಗೆದು ಹಾಕಬೇಕೆಂದು ಉಪವಾಸ ಮಾಡುತ್ತಿರುವ ಆಕೆಯ ಬೇಡಿಕೆಯನ್ನು ಧಿಕ್ಕರಿಸುತ್ತಿರುವ ಸರ್ಕಾರ ದಂಗೆಯನ್ನು ಹತ್ತಿಕ್ಕುತ್ತಿದ್ದೇವೆಂಬ ನೆಪದಲ್ಲಿ ಸೇನೆಯ ಮೂಲಕ ಅಮಾಯಕ ಜನರನ್ನು ಗುಂಡಿಕ್ಕಿ ಕೊಂದು, ಹಿಂಸಿಸಿ, ವಿಶೇಷವಾಗಿ ಹೆಂಗಸರ ಮೇಲೆ ನಿರಂತರ ಅತ್ಯಾಚಾರವೆಸಗುತ್ತಿದೆ. ಹೀಗೆ ಬಲಿಯಾದವರೆಷ್ಟೋ! ಕಾರ್ಯಕರ್ತೆ ಮನೋರಮಾ ಸೇನೆಯ ಅತ್ಯಾಚಾರಕ್ಕೆ ಬಲಿಯಾಗಿ ಕೊನೆಗೆ ಕೊಲೆಯಾದಾಗ ಆ ಕೃತ್ಯದ ಕ್ರೌರ್ಯವನ್ನು ಪ್ರತಿಭಟಿಸಿ ಬೆತ್ತಲೆ ಮೆರವಣಿಗೆ ಮಾಡಿದ ಮಣಿಪುರದ ಮಹಿಳೆಯರ ದಾರುಣ ಹಾಗೂ




ಶೌರ್ಯದ ಗಾಥೆಯನ್ನು ಇಂಗ್ಲಿಷಿನಲ್ಲಿ ಏಕವ್ಯಕ್ತಿ ಪ್ರದರ್ಶನದ ಮೂಲಕ ಸಮ್ಮೇಳನದಲ್ಲಿ ನೆರೆದಿದ್ದ ಜನ ನಿಬ್ಬೆರಗಾಗುವಂತೆ ಪ್ರಸ್ತುತ ಪಡಿಸಿದಳು, ಓಜಾ. 'ಲೇ ಮಶೇಲನ್ ಚಲ ಪಡೇ ಹೈ, ಲೋಗ್ ಮೇರೆ ಗಾಂವೋಂಕೆ' ಹಾಡಿನಿಂದ ಸ್ಫೂರ್ತಿಗೊಂಡು ಪುಣೆಯ ರಂಗ ಕಲಾವಿದೆ ಎಸ್. ವಿ. ಓಜಾ ಮಲಯಾಳದ 'ಮೇರಾ ಪೈಬಿ' ನಾಟಕವನ್ನು ಹಿಂದಿ ಮತ್ತು ಇಂಗ್ಲಿಷಿಗೆ ರೂಪಾಂತರಿಸಿ ಅಭಿನಯಿಸಿ ತೋರಿಸಿದಳು. ಕಲಾವಿದೆಯ ರಾಜಕೀಯ ಸಂಕಲ್ಪ ಮತ್ತು ಬದ್ಧತೆ ನಾಟಕಕ್ಕೊಂದು ಹೋರಾಟದ ಚೌಕಟ್ಟನ್ನು ಕೊಟ್ಟಿತು. 'ನನ್ನ ದೇಹ ನನ್ನ ಆಯುಧ' ಎನ್ನುತ್ತಾ ಹೋರಾಟದ ಪಂಜನ್ನು ಎತ್ತಿ ಹಿಡಿಯುವ ಶರ್ಮಿಳಾಳ ಸಾತ್ವಿಕ ಸಿಟ್ಟು ಇಡೀ ಸಭಾಂಗಣದಲ್ಲಿ ಹರಡಿ ಈ ಕಲಾ ಪ್ರಯೋಗ ಮಹಿಳಾ ಹೋರಾಟದ ಎಲ್ಲೆಯನ್ನು ವಿಸ್ತರಿಸಿದ್ದು ಒಂದು ಗಮನಾರ್ಹ ಅಂಶವಾಗಿತ್ತು.

ಪರ್ಯಾಯ ಧ್ವನಿಯಾಗಿ ಮೂಡಿಬರುತ್ತಿರುವ ಮುಸ್ಲಿಂ ಮಹಿಳೆಯರ ನಾಯಕತ್ವ ಕುರಿತು ಮಾತನಾಡಿದ ಭಾರತೀಯ ಮುಸ್ಲಿಂ ಮಹಿಳಾ ಆಂದೋಲನದ ಕಾರ್ಯಕರ್ತೆ ನೂರ್‌ಜಹಾನ್ ಕಳೆದೆರಡು ವರ್ಷಗಳಲ್ಲಿ ಅವರ ಸಂಘಟನೆ ಮುಸ್ಲಿಂ ಮಹಿಳೆಯರನ್ನು ಸಂಘಟಿಸಿದ ಅನುಭವವನ್ನು ಸಭೆಯಲ್ಲಿ ಹಂಚಿಕೊಂಡರು. ಮುಸ್ಲಿಂರನ್ನು ಅಲ್ಪಸಂಖ್ಯಾತ ರೆನ್ನುವುದಾದರೆ, ಮುಸ್ಲಿಂ ಮಹಿಳೆಯರು ಆ ಅಲ್ಪಸಂಖ್ಯಾತರಲ್ಲಿ ಅಲ್ಪಸಂಖ್ಯಾತರು. ಕಳೆದೆರಡು ದಶಕಗಳಲ್ಲಿ ಮುಸ್ಲಿಮ್ ಮಹಿಳೆ ಭಾರತದ ದೇಶದ ಸ್ವತಂತ್ರ ಪ್ರಜೆಯಾಗಿ ಹಕ್ಕುಗಳನ್ನು ಸಂಪಾದಿಸುವುದಕ್ಕಾಗಿ ಅವಳ ಸಮುದಾಯದೊಳಗೇ ಹೋರಾಟ ಮಾಡಬೇಕಾಗಿದೆ. ದೇಶದ ಹನ್ನೆರಡು ರಾಜ್ಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅವರ ಸಂಸ್ಥೆ ನಿಖಾನಾಮದ ಮದುವೆಯ ಮೂಲಕ ಮುಸ್ಲಿಂ ಹೆಣ್ಣಿನ ವೈವಾಹಿಕ ಸಮಸ್ಯೆಗಳ ವಿರುದ್ಧ ಹೋರಾಡುತ್ತಿದ್ದಾರೆ. 'ಮಹಿಳಾ ಮೀಸಲಾತಿಯ ಬಗ್ಗೆ ನಿಮ್ಮ ಸಂಸ್ಥೆಯ ನಿಲುವೇನು ?' ಎಂಬ ಸಭಿಕರ ಪ್ರಶ್ನೆಗೆ, ''ಮಹಿಳಾ ಮೀಸಲಾತಿಯನ್ನು ನಾವು ಬೆಂಬಲಿಸುತ್ತೇವೆ. ನಮಗೆ ಒಳ ಮೀಸಲಾತಿ ಬೇಕಿಲ್ಲ. ನಮ್ಮ ಎಲ್ಲಾ ಗಮನವಿರುವುದು ನಮ್ಮ ಮಹಿಳೆಯರೂ ಶಿಕ್ಷಣ, ಉದ್ಯೋಗ, ಆರೋಗ್ಯ – ಎಲ್ಲ ದೊರಕಿಸಿಕೊಂಡು ಸ್ವತಂತ್ರ ಪ್ರಜೆಗಳಾಗಿ ರೂಪುಗೊಳ್ಳಬೇಕಾಗಿದೆ'' ಎಂದ ನೂರ್‌ಜಹಾನ್‌ಳ ಉತ್ತರ ಅವಳ ಸಂಸ್ಥೆಯ ತಾತ್ವಿಕ ನಿಲುವನ್ನು ಪ್ರಕಟಪಡಿಸಿತು.

ಇಂದಿನ ಮಹಿಳಾ ಚಳುವಳಿಯ ಬಹುಮುಖತೆಯನ್ನು ಪರಿಚಯಿಸಿದ ಈ ಸಮ್ಮೇಳನ, ಆ ಬಹುಮುಖತೆಯ ಸ್ವರೂಪವನ್ನು ನಿರ್ಧರಿಸುತ್ತಿರುವ ಇಂದಿನ ಸಮಕಾಲೀನ ಒತ್ತಡಗಳನ್ನು ಚರ್ಚಿಸಿತು. ಸಮಾಜದ ಎಲ್ಲರನ್ನೂ ಒಳಗೊಳ್ಳುವ ರಾಜಕೀಯವೇ ಆರೋಗ್ಯದ ಲಕ್ಷಣಗಳುಳ್ಳ ಲಿಂಗ ಸಮಾನತೆಯ ನಿಜವಾದ ಪ್ರಜಾಪ್ರಭುತ್ವವಾದಿ ಸಮಾಜವನ್ನು ಸೃಷ್ಟಿಸಬಲ್ಲದು ಎಂಬ ತಾತ್ವಿಕತೆಯೊಂದಿಗೆ, ಅಂತಹ ಸ್ಥಿತಿಗೆ ಅಡ್ಡ ಬರುವವರ ವಿರುದ್ಧ ಅಗತ್ಯವಾಗಿ ನಡೆಯಬೇಕಾದ ಹೋರಾಟವನ್ನು ನೆನಪಿಸಿತು. ಛತ್ತೀಸ್‌ಗಢದ ಗುಡ್ಡಗಾಡು ಜನರ ನಡುವೆ ವೈದ್ಯನಾಗಿ ಕೆಲಸ ಮಾಡುತ್ತಿರುವ ಮಾನವ ಹಕ್ಕುಗಳ ಹೋರಾಟದ ಕಾರ್ಯಕರ್ತ ಹಾಗೂ ಸಾಲ್ವಾ ಜುಡುಂಅನ್ನು ವಿರೋಧಿಸುತ್ತಿರುವ ವಿನಾಯಕ ಸೇನ್‌ರವರಿಗೆ ಜೀವಾವಧಿ ಶಿಕ್ಷೆ ವಿರೋಧಿಸುವುದನ್ನು ಪ್ರತಿಭಟಿಸಲು ಮತ್ತು ಶರ್ಮಿಳಾ ಇರೋಮ್‌ಳ ಹೋರಾಟವನ್ನು ಬೆಂಬಲಿಸಿ, ಶಸ್ತ್ರಾಸ್ತ್ರಗಳ ವಿಶೇಷ ಕಾಯಿದೆಯನ್ನು ಹಿಂದಕ್ಕೆ ಪಡೆಯಲು ಒತ್ತಾಯಿಸಿ ಸಮ್ಮೇಳನದಲ್ಲಿ ಸೇರಿದ್ದ ಎಲ್ಲ ಪ್ರತಿನಿಧಿಗಳು ಮೆರವಣಿಗೆ ನಡೆಸಿದರು. ಅವರ ಪತ್ನಿ ಇಲಿನಾ ಸೇನ್ ಭಾರತ ಮಹಿಳಾ ಅಧ್ಯಯನ ಸಂಸ್ಥೆಯ ಕಾರ್ಯಕಾರಿ ಸಂಸ್ಥೆಯ ಸದಸ್ಯೆಯೂ, ಈ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷೆಯೂ ಆಗಿದ್ದಿದುದರಿಂದ ಅವರನ್ನು ಮಹಾರಾಷ್ಟ್ರ ಸರ್ಕಾರ ನಡೆಸಿಕೊಂಡ ರೀತಿ ನಾಚಿಕೆಗೇಡಿನದು. ವಿದೇಶಿ ಅತಿಥಿಗಳ ಭಾಗವಹಿಸುವಿಕೆಯನ್ನು ಅಲ್ಲಿನ ಪೊಲೀಸರಿಗೆ ತಿಳಿಸಿಲ್ಲವೆಂಬ ನೆಪ ಒಡ್ಡಿ ಅವರ ಮೇಲೆ ಮೊಕದ್ದಮೆ ಹೂಡಿದ ರಾಜ್ಯ ಸರ್ಕಾರದ ಕ್ರಮವನ್ನು ಕೇಂದ್ರ ಸರ್ಕಾರ ಛೀಮಾರಿ ಹಾಕಿದ ಮೇಲೆ ಹಿಂತೆಗೆದುಕೊಳ್ಳಲಾಯಿತು. ಮಾನವ ಹಕ್ಕುಗಳ ಸಾಮಾಜಿಕ ಕಾರ್ಯಕರ್ತರಾಗಿ ಅಪ್ರತಿಮ ಮಾನವತಾವಾದವನ್ನು ಮೆರೆದಿರುವ ವಿನಾಯಕ ಸೇನ್‌ರನ್ನು ಸರ್ಕಾರ ನಡೆಸಿಕೊಳ್ಳುತ್ತಿರುವ ರೀತಿಯನ್ನು ಇಡೀ ಸಭೆ ಪ್ರತಿಭಟಿಸಿ ಬೃಹತ್ ಮೆರವಣಿಗೆ ನಡೆಸಿತು.

ಸಮಾಜದ ವಿವಿಧ ಅಸ್ಮಿತೆಯನ್ನು ಒಪ್ಪಿಕೊಳ್ಳುತ್ತಲೇ, ಅದಕ್ಕಾಗಿ ನಡೆಸುವ ಹೋರಾಟವನ್ನು ಗೌರವಿಸುತ್ತಲೇ ''ತಮ್ಮನ್ನು ಅಂಚಿಗೆ ತಳ್ಳುವವರನ್ನು ಎದುರಿಸುವುದು, ಅಧಿಕಾರ ಹೇರುವವರಿಗೆ ಸವಾಲೆಸೆಯುವುದು ಮತ್ತು ಲಿಂಗ ರಾಜಕಾರಣವನ್ನು ಹೊಸ ದೃಷ್ಟಿಕೋನದಿಂದ ನೋಡುವುದು'' ಈ ಸಮ್ಮೇಳನದ ಮುಖ್ಯ ಅಜೆಂಡಾ ಆಗಿತ್ತು.

**ಡಾ॥ ಎನ್. ಗಾಯತ್ರಿ**
ನಂ. ೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಛತ್ರಂ ಬ್ಲಾಕ್, ಗವೀಪುರ, ಬೆಂಗಳೂರು - ೫೬೦ ೦೧೯



ನಭಾವಲೋಕನ

# ಅತಿ ದೊಡ್ಡ ಚಂದ್ರನ ಹುಣ್ಣಿಮೆ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

೧೯ರ ನಡುರಾತ್ರಿ ಹುಣ್ಣಿಮೆ; ಆದಾದ ಒಂದೇ ಗಂಟೆಯಲ್ಲಿ ಚಂದ್ರ - ಭೂಮಿ ನಡುವಿನ ಅಂತರ ಕನಿಷ್ಠ ಆದ್ದರಿಂದ ಅತಿ ದೊಡ್ಡ ಚಂದ್ರ ಅಂದು ಕಾಣುವುದು. ಕಡಲ ತೀರದಲ್ಲಿ ಉಬ್ಬರ ಇಳಿತಗಳು ಎಂದಿನ ಹುಣ್ಣಿಮೆಗಿಂತ ಜೋರು ಎಂಬುದನ್ನು ಗಮನಿಸಬಹುದು. ಆದರೆ ಬರಿಗಣ್ಣಿಗೆ ಚಂದ್ರ ಅತಿ ದೊಡ್ಡದು ಎಂದು ತಿಳಿಯುತ್ತದೆಯೇ ? ಪರೀಕ್ಷಿಸಿ ನೋಡಿ.

ಕಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ವಿಜೃಂಭಿಸುತ್ತಿದ್ದ ಗುರು ಈಗ ಪಶ್ಚಿಮದಂಚಿಗೆ ಸರಿದಿದೆ. ತಿಂಗಳ ಕೊನೆಗೆ ಕಾಣುವುದೇ ಕಷ್ಟವಾಗಬಹುದು. ಹೀಗೆ ವಿದಾಯ ಹೇಳುವ ಮೊದಲು ಅದು ಬುಧ ಗ್ರಹದೊಡನೆ ಹಸ್ತಲಾಘವ ನಡೆಸಿ ಬುಧವನ್ನು ಏಕಾಂಗಿಯಾಗಿಸಿ ತೆರಳುವುದು. ಪ್ರತಿ ಸಂಜೆ ಗುರು ಗ್ರಹವನ್ನೇ ಗಮನಿಸಿ. ತಿಂಗಳ ಮೊದಲಲ್ಲಿ ಸಣ್ಣ ಚುಕ್ಕೆಯೊಂದು ಗುರುಗ್ರಹದಿಂದ ಸಾಕಷ್ಟು ದೂರದಲ್ಲಿ ಪಶ್ಚಿಮ ದಿಗಂತದ ಅಂಚಿಗೆ ಕಾಣುವುದು. ದಿನ ಕಳೆದಂತೆ ಅದು ಮೇಲೇರಿ ಗುರುಗ್ರಹವನ್ನು ಸಮೀಪಿಸುವುದು. ಈ ಚುಕ್ಕೆಯೇ ಬುಧ ಗ್ರಹ. ಬುಧ ಮತ್ತು ಗುರುಗಳ ಸ್ಥಳ ಪಲ್ಲಟಗಳನ್ನು ಗಮನಿಸಲು ಎರಡನೆಯ ವಾರ ಬಹಳ ಸೂಕ್ತವಾಗಿದೆ. ಬುಧ ಇನ್ನೂ ಮೇಲೇರುತ್ತದೆ. ೨೩ರಂದು ಗರಿಷ್ಠ ಕೋನ. ಬರಿಗಣ್ಣಿನಿಂದ ಹುಡುಕಲು ಒಳ್ಳೆಯ ಅವಕಾಶ. ಅಷ್ಟು ಹೊತ್ತಿಗೆ ಗುರು ಗ್ರಹ ದಿಗಂತದ ಅಂಚಿಗೆ ಸರಿದಿರುತ್ತದೆ. ಬುಧ ಒಂಟಿಯಾಗುತ್ತದೆ. ತಿಂಗಳ ಕೊನೆಗೆ ಬುಧ ಗ್ರಹವೂ ದಿಗಂತದ ಅಂಚಿಗೆ ಸರಿಯುತ್ತದೆ.

ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಪೂರ್ವದ ಅಂಚಿನಲ್ಲಿ ಕಾಣುವ ಗ್ರಹ ಶನಿ. ಇದು ಚಿತ್ರಾ ನಕ್ಷತ್ರದ ಸಮೀಪವೇ ಇರುವುದರಿಂದ ಹುಡುಕಲು ಸುಲಭ. ೨೧ರ ರಾತ್ರಿ ಚಂದ್ರ ಇವೆರಡರ ಸಮೀಪವೇ ಇರುವ ಸಂದರ್ಭ ಬಳಸಿ ಹುಡುಕಿದ್ದು ಸರಿಯೇ ಎಂದು ಖಚಿತ ಪಡಿಸಿಕೊಳ್ಳಬಹುದು.



೧ರ ಮಾರ್ಚ್ ಮುಂಜಾವು ಚಂದ್ರ ಮತ್ತು ಶುಕ್ರ — ೩೧ರ ಮಾರ್ಚ್ ಮುಂಜಾವು ಚಂದ್ರ ಮತ್ತು ಶುಕ್ರ

ಶುಕ್ರ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಮೊದಲ ಮುಂಜಾವು ಮತ್ತು ಕೊನೆಯ ದಿನದ ಮುಂಜಾವನ್ನು ಮರೆಯದೇ ಗಮನಿಸಿ. ಶುಕ್ರ ಮತ್ತು ಚಂದ್ರ ಸಮಾಗಮದ ಚಿತ್ರ ಬರೆದಿಟ್ಟುಕೊಳ್ಳಿ; ಅಥವಾ ಫೋಟೋ ತೆಗೆಯಲು ಪ್ರಯತ್ನಿಸಿ. ೧ರಂದು ಮಾಡಿದ (ಮಾಡಬಹುದಾದ) ತಪ್ಪನ್ನು ತಿದ್ದಿಕೊಳ್ಳಲು ೩೧ರಂದು ಎರಡನೆಯ ಅವಕಾಶ ಎಂದುಕೊಳ್ಳಬಹುದು. ಛಾಯಾ ಚಿತ್ರ ತೆಗೆದಲ್ಲಿ ಶುಕ್ರದ ಪಕ್ಕ ನೆಪ್ಚ್ಯೂನ್ ಗ್ರಹವೂ ಕಾಣುವುದು.

ಈ ತಿಂಗಳಲ್ಲಿ ಮಂಗಳ ಗ್ರಹವನ್ನು ಕಾಣುವ ಅವಕಾಶ ಇಲ್ಲ.

ಸಂಜೆಯ ಆಕಾಶದಲ್ಲೆದ್ದು ಕಾಣುವ ಪುಂಜ ಮಹಾವ್ಯಾಧ ಅಥವಾ ಒರೈಯನ್. ಇದರ ಮಧ್ಯಭಾಗದ ಮೂರು ನಕ್ಷತ್ರಗಳು ವಿಷುವದ್ರೇಖೆಯ ಮೇಲಿವೆ. ಕಳೆದ ತಿಂಗಳು ಇವು ಅಸ್ತಮಿಸುವ ಬಿಂದು ಗುರುತಿಸಿಕೊಳ್ಳಿ ಎಂದು ಸಲಹೆ ಕೊಟ್ಟಿದ್ದೆ. ಅನೇಕರಿಗದು ಸಾಧ್ಯವಾಗಿರಲಾರದು; ಏಕೆಂದರೆ ಮಧ್ಯರಾತ್ರಿಯ ನಂತರ ಈ ಕೆಲಸಮಾಡ ಬೇಕಾಗುತ್ತದೆ.

ಈ ತಿಂಗಳ ೨೧ರಂದು ವಸಂತ ವಿಷುವ. ಅಂದರೆ ಸೂರ್ಯ ವಿಷುವದ್ ರೇಖೆಯನ್ನು ಹಾದು ಹೋಗುವ ದಿನ. ಹಗಲು-ರಾತ್ರಿಗಳ ಅವಧಿ ಸಮ ಎಂಬುದು ಸೂರ್ಯ ವಿಷುವದ್ ರೇಖೆಯ ಮೇಲಿದ್ದಾನೆ ಎಂಬುದರ ಪರಿಣಾಮವನ್ನು ಸರಳವಾಗಿ ಹೇಳಬಹುದಾದ ಅಂಶ. ಈ ದಿನದಿಂದ ಮುಂದಕ್ಕೆ ಹಗಲಿನ ಅವಧಿ ಹೆಚ್ಚು; ವಸಂತ ಮಾಸದ ಆಗಮನದ ಚಿಹ್ನೆ. ಆದ್ದರಿಂದಲೇ ಯುಗಾದಿಗಳೆರಡರ ಆಚರಣೆ (ಚಾಂದ್ರ ಮಾನ ಮತ್ತು ಸೌರಮಾನ) ಇದರ ಆಸುಪಾಸಿನಲ್ಲೇ ನಡೆಯುವುದು.

ನೆತ್ತಿಯಿಂದ ಸ್ವಲ್ಪ ಪಕ್ಕಕ್ಕೆ ಕಾಣುವ ನಕ್ಷತ್ರ ಪುಂಜ ಕೃತ್ತಿಕಾ. ಅದರ ಪಕ್ಕದ ಪುಟ್ಟ ತ್ರಿಕೋಣ ಮೇಷ. ಕೃತ್ತಿಕಾ ಮತ್ತು ರೋಹಿಣಿಗಳನ್ನೊಳಗೊಂಡದ್ದು ವೃಷಭ. ಹೀಗೆ ಪೂರ್ವದಿಂದ ಪಶ್ಚಿಮಕ್ಕೆ ಮೇಷ, ವೃಷಭ, ಮಿಥುನ, ಕಟಕ, ಸಿಂಹ ಇವುಗಳನ್ನು ಗುರುತಿಸಬಹುದು. ವಸಂತ ವಿಷುವದಂದು ಸೂರ್ಯ ಮೀನ ರಾಶಿಯಲ್ಲಿದೆ ಎಂದು ಹೀಗೆ ಪರೋಕ್ಷವಾಗಿ ತಿಳಿಯಬಹುದು.

**ಖಗೋಳ ದಿನಚರಿ**

೧ ಶುಕ್ರ - ಚಂದ್ರ ಜೋಡಿ (ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)
೪ ಮಂಗಳ - ಚಂದ್ರ ಜೋಡಿ
೫ ಅಮಾವಾಸ್ಯೆ ೦೧:೧೬ಕ್ಕೆ
೬ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೭ ಗುರು -ಚಂದ್ರ ಜೋಡಿ
೧೨ ಚಾಂದ್ರಮಾಸದ ಮೊದಲ ಪಾದ
೧೬ ಬುಧ - ಗುರು ಜೋಡಿ
೧೯ ಹುಣ್ಣಿಮೆ ೨೩:೪೦ಕ್ಕೆ
೨೦ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ ೦೦:೩೭ಕ್ಕೆ
೨೧ ಶನಿ - ಚಂದ್ರ - ಚಿತ್ರಾಗಳ ಪುಟ್ಟತ್ರಿಕೋಣ
ವಸಂತ ವಿಷುವ ೦೪:೫೧ಕ್ಕೆ
೨೩ ಬುಧ ಗ್ರಹದ ಗರಿಷ್ಠ ಕೋನೋನ್ನತಿ (ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)
೨೬ ಚಾಂದ್ರಮಾಸದ ಕೊನೆಯ ಪಾದ
೩೦ ಬುಧ ಗ್ರಹದ ಹಿನ್ನಡೆ ಆರಂಭ
೩೧ ಶುಕ್ರ - ಚಂದ್ರ ಜೋಡಿ (ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಹೊಸ ಓದು

## ಸೂಫಿ ಮಹಿಳೆಯರು

ಲೇ. : ಫಕೀರ್ ಮುಹಮ್ಮದ್ ಕಟ್ಪಾಡಿ
ಪುಟ : ೯೬
ಬೆಲೆ : ರೂ. ೬೦
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೧

ಸೂಫಿ ಸಂತರಲ್ಲಿ ಮಹಿಳೆಯರೂ ಇದ್ದಾರಾ? ಹೌದು ಖಂಡಿತವಾಗಿ ಇದ್ದರು. ''ಅಧ್ಯಾತ್ಮ ಚಿಂತನೆಗೆ ಎಳೆಯ ವಯಸ್ಸಿಗೆ ಸನ್ಯಾಸ ಸ್ವೀಕರಿಸಬೇಕು; ಸಾಂಸಾರಿಕ ಬಂಧನ ವಿದ್ದರೆ ಸಾಧನೆ ಕಷ್ಟ; ಸನ್ಯಾಸದ ನಂತರ ತಾಯಿ-ತಂದೆ-ಬಂಧುಗಳ ಮೋಹ ಇರಬಾರದು; ಈ ಲೋಕದ ಸಂಬಂಧ ತನ್ನ ಗುರುವಿಗೆ ಶಿಷ್ಯ ಮಾತ್ರ'' ಇವು ವೈದಿಕ ಸಂಪ್ರದಾಯದ ಕಟ್ಟಲೆಗಳು. ಇಲ್ಲಿ ನೋಡಿ-ಇಸ್ಲಾಂಧರ್ಮದಲ್ಲಿ ಇಂಥ ಕಠೋರ ನಿಯಮಗಳೇನೂ ಇಲ್ಲ, ಪೈಗಂಬರರ ಕಾಲದಲ್ಲಿ ಸ್ತ್ರೀಯರು ಸಮಾಜಸೇವೆ-ಧರ್ಮಪ್ರಸಾರ-ಜ್ಞಾನಾರ್ಜನೆಯಲ್ಲಿ ಪುರುಷರಿಗೆ ಸರಿಮಿಗಿಲೆನಿಸಿದ್ದರು. ಮತಾಂಧ ಮೂಲಭೂತವಾದಿಗಳ ತಕರಾರುಗಳೇನೇ ಇದ್ದರೂ, ಬಹಳಷ್ಟು ಮಹಿಳೆಯರು ಮನೆವಾರ್ತೆ ನೋಡಿಕೊಳ್ಳುತ್ತಲೇ, ಸಂಸಾರದ ಸುಖಕಷ್ಟಗಳಿಗೆ ಸ್ಪಂದಿಸುತ್ತ ತಮ್ಮ ಅನುಭವಗಳಿಂದ ಜ್ಞಾನ ಗಳಿಸಿ ಮಹಿಳಾ ಸೂಫಿಗಳೆಂಬ ಗೌರವಕ್ಕೆ ಪಾತ್ರರಾಗಿದ್ದರು. ಅಹಂಕಾರಿ ಮನೋಪ್ರವೃತ್ತಿಯ ಪುರುಷರಿಗೆ ತಮ್ಮ ಮಾತುಗಳಿಂದಲೇ ಛೇಡಿಸುತ್ತ ಅವರನ್ನು ನಿರುತ್ತರರನ್ನಾಗಿಸುತ್ತಿದ್ದರು. ಮನುಷ್ಯ ಸಂಬಂಧಗಳು ಸಾಧನೆಗೆ ಅಡ್ಡಿಯಾಗುತ್ತಿರಲಿಲ್ಲ. ಸಾಧಕಿಯರಲ್ಲಿ ರಾಬಿಯಾ ಅಲ್ ಅದವಿಯ, ಬೀಬಿ ನಫೀಸಾ, ಹಬಾ ಖಾತೂನ್ ಪ್ರಮುಖರು. ಇವರೆಲ್ಲ ಬಂಡಾಯಗಾರ್ತಿಯರೂ, ಕವಯಿತ್ರಿಯರೂ ಆಗಿದ್ದು ಯೋಗ್ಯ ಮಾರ್ಗದರ್ಶನ ನೀಡಬಲ್ಲವರಾಗಿದ್ದರು. ಕರ್ನಾಟಕ-ದೆಹಲಿಯಲ್ಲಿನ ಸಾಧಕಿಯರನ್ನೂ ಒಳಗೊಂಡಂತೆ ಈ ಅಪೂರ್ವ ಮಾಹಿತಿಯನ್ನು ಶ್ರಮವಹಿಸಿ ನೀಡಿದವರು ಶ್ರೀ ಫಕೀರ್ ಮುಹಮ್ಮದ್ ಕಟ್ಪಾಡಿಯವರು. ಅರಬರ ಮದುವೆ ಅವ್ಯಾಪಾರವನ್ನು ಬಯಲಿಗೆಳೆವ ವಸ್ತುವುಳ್ಳ ಕಾದಂಬರಿ ''ಸರಕುಗಳು'' ಇವರ ಪ್ರಸಿದ್ಧಕೃತಿ.

## ಕಾಲುಹಾದಿಯ ಕೋಲ್ಮಿಂಚುಗಳು ಮಹಿಳಾ ವಿಜ್ಞಾನಿಗಳು

ನೇಮಿಚಂದ್ರ
ಪುಟ : ೧೨೪ ಬೆಲೆ : ರೂ. ೭೫
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ನೇಮಿಚಂದ್ರ ಅವರ ಆಸಕ್ತಿಯ ವಿಷಯ ಮಹಿಳಾ ವಿಜ್ಞಾನಿಗಳ ಅಧ್ಯಯನ ಮತ್ತು ಮಹಿಳಾ ವಿಜ್ಞಾನಿಗಳ ಜೀವನ - ಸಾಧನೆಗಳನ್ನು ಪರಿಚಯಿಸಿ ಪುಸ್ತಕ ಹೊರತರುವುದು. ಇದೇನು ನೀರು ಕುಡಿದಷ್ಟು ಸುಲಭವೆಂದುಕೊಂಡಿರಾ? ಇಂದು ಸಾಕಷ್ಟು ಮಹಿಳಾ ವಿಜ್ಞಾನಿಗಳಿರಬಹುದು. ಆದರೆ ವಿಜ್ಞಾನ ಬೆಳೆದು ಬಂದ ಪ್ರಾರಂಭದ ದಿನಗಳಲ್ಲಿ ಸಾಕಷ್ಟು ಪ್ರತಿಭೆಯಿದ್ದೂ, ಸಾಧನೆಗೈದರೂ ಎಷ್ಟೋ ಮಹಿಳಾ ವಿಜ್ಞಾನಿಗಳು ಅನೇಕ ಕಾರಣಗಳಿಂದ ಇತಿಹಾಸದ ಪುಟಗಳಲ್ಲಿ ಉದ್ದೇಶಪೂರ್ವಕವಾಗಿ ದಾಖಲಾಗದೆ ಕಳೆದುಹೋಗಿದ್ದಾರೆ. ಇರುವ ಮಾಹಿತಿಗಳು ಕೂಡ ಅವರೇ ಹೇಳುವಂತೆ ಒಂದು ಪೂರ್ಣ ಮಾಹಿತಿಗಾಗಿ ಹಂಚಿಹೋದ ಹತ್ತಾರು ತುಣುಕುಗಳನ್ನು ಕಲೆಹಾಕುವ ಶ್ರಮ 'ಜಿಗ್‌ಸಾ ಪಜಲ್'ನಂತೆ. ಜಾಣ್ಮೆ ಮತ್ತು ತಾಳ್ಮೆ ಎರಡೂ ಬೇಕು. ತಾಳ್ಮೆಯಿಂದ, ಇಪ್ಪತ್ತೈದು ವರ್ಷಗಳಿಂದ ಈ ವಿವರಗಳನ್ನು ಕಲೆಹಾಕಲು ಭಾರತವಲ್ಲದೆ ಪ್ಯಾರಿಸ್, ಲಂಡನ್, ಪೆರು ಮುಂತಾದ ವಿವಿಧ ದೇಶಗಳಿಗೆ ಭೇಟಿ ನೀಡಿದ್ದಾರೆ. ವಿಜ್ಞಾನಿಗಳ ಹುಟ್ಟೂರಿಗೆ ಭೇಟಿ ನೀಡಿದರೆ ಕೆಲಸವಾದಂತೆಯೇ ಎಂದುಕೊಂಡು ಸಾವಿರಾರು ಮೈಲಿ ಪ್ರಯಾಣಿಸಿದರೂ ಅಲ್ಲಿ ಏನೂ ಸಿಗದೆ, ಮತ್ತೆಲ್ಲಿಂದಲೋ ಅದನ್ನು ಸಂಗ್ರಹಿಸಿದ್ದಿದೆ. ವಿಜ್ಞಾನರಂಗ ಮಹಿಳೆಯರಿಗೆ ಬಾಗಿಲು ಮುಚ್ಚಿದ್ದರಿಂದ ಪುರುಷವೇಷ ತೊಟ್ಟು ವೈದ್ಯ ಕಲಿತು ಸಾಧನೆ ಮಾಡಿ, ವಿಷಯ ಗೊತ್ತಾದಾಗ ಶಿಕ್ಷೆ ಅನುಭವಿಸಿದ ಮಹಿಳೆಯರಿದ್ದಾರೆ. ಇವರೆಲ್ಲರ ಬಗ್ಗೆ ಮಾಹಿತಿ ಕಲೆಹಾಕಿದ ನೇಮಿಚಂದ್ರ ಸ್ವತಃ ವಿಜ್ಞಾನಿಯೆ. ಅಂದಿನ ಅವರೆಲ್ಲರ ಶ್ರಮಕ್ಕಿಂತ ಇವರದ್ದು ಏನೂ ಕಡಿಮೆಯಿಲ್ಲ; ಓದೋಣ ಬನ್ನಿ.

## ಗರುಡಾವತಾರ (ಕವನ ಸಂಕಲನ)

ಲೇ : ಬಾಲಸುಬ್ರಹ್ಮಣ್ಯ ಕಂಜರ್ಪಣೆ
ಪುಟ : ೭೨ ಬೆಲೆ : ರೂ. ೪೦
**ಸುಮುಖ ಬುಕ್ ಹೌಸ್**, ೧೭೪೩/೨೮, ಟೋಲ್‌ಗೇಟ್, ವಿಜಯನಗರ, ಬೆಂ. ೪೦

ಈ ಕವನ ಸಂಕಲನವು ಪ್ರತಿಷ್ಠಿತ ಮುದ್ದಣ ಕಾವ್ಯ ಪ್ರಶಸ್ತಿ ಗಳಿಸಿದೆ. ಅನೇಕಾನೇಕ ಪ್ರತಿಮೆ ರೂಪಕಗಳನ್ನೊಳಗೊಂಡು ಇಲ್ಲಿನ ಸಾಲುಗಳು ಅತ್ಯಾಕರ್ಷಕವಾಗಿದ್ದು ಜೀವನದ ಕಾಲಗತಿಯ ಬಗ್ಗೆ ಸತ್ಯನಿಷ್ಠುರ ವರದಿ ಮಾಡುವಂತಿವೆ. ಸಂತೋಷವಾದಾಗ, ದುಃಖವಾದಾಗ ಕವಿಗಳು ಕವಿತೆ ಬರೆಯುತ್ತಾರೆ. ಬೀಜ ಮೊಳೆತು, ಚಿಗುರೊಡೆದು, ಗಿಡವಾಗಿ ಹೂ-ಹಣ್ಣು ತುಂಬಿಕೊಂಡರೆ ಅದನ್ನೇ ಕವನವೆನ್ನಬಹುದು. ಪ್ರಕೃತಿಯ ಸುಂದರ ಕವನವದು. ಅದು ಇನ್ನೊಬ್ಬರಿಗೆ ತನ್ನಲ್ಲಿದ್ದುದನ್ನೆಲ್ಲ ಕೊಟ್ಟುಬಿಡುತ್ತದೆ. ಆಸ್ವಾದಿಸುವುದು ಹೃದಯವಂತನ ಲಕ್ಷಣ, ನಮಗೆ ತಿಳಿದಿರುವಂತೆ ಕವಿ ಅಂತರ್ಮುಖಿ. ಆತ ಕಣ್ಮುಚ್ಚಿ ಧ್ಯಾನಿಸತೊಡಗಿದರೆ ಕವನಗಳ ಮಾಲೆ... ಮಾಲೆ... ಚಿರಂತನತೆ ಮತ್ತು ನಿತ್ಯನೂತನತೆ ಹೊಂದಿರುವ, ಆದರೆ ರೂಪ ನಶ್ವರ ತತ್ವವಿರುವ ಜಗತ್ತಿನ ಬಗೆಗೆ ವಿಪುಲವಾದ ಕವಿತೆಗಳಿಲ್ಲಿವೆ. ಸಂತೋಷ, ಉತ್ಸಾಹ ದ್ವಿಗುಣಿತಗೊಳಿಸುವ ಕವನಗಳು ಇಲ್ಲಿಲ್ಲ, ನಿಜ. ಅದೊಂದು ಕೊರತೆಯೇನಲ್ಲ. ಆದರೆ ಸಮಸ್ಥಿತ ಭಾವ - ನಿರ್ಲಿಪ್ತ ಭಾವವನ್ನುಂಟು ಮಾಡಿ ತನ್ಮೂಲಕ ಮನಸ್ಸನ್ನು ತಿಳಿಗೊಳಿಸುವ ಮಾಂತ್ರಿಕ ಶಕ್ತಿ ಇಲ್ಲಿದೆ. 'ತೆರೆ', 'ನಾಳೆಗಳು', 'ಗುರುತು', 'ದುಃಖ ಮತ್ತು ಶಾಂತಿ' ಈ ಕವನಗಳ ಚೌಕಟ್ಟಿನೊಳಗೆ ಪುಸ್ತಕವನ್ನು ಅರ್ಪಣೆ ಮಾಡಿದ ಮೂರಕ್ಷರಗಳು ಬಂದು ಕೂರುತ್ತವೆ.

## ಹಿತ್ತಿಲು (ಕೈತೋಟಕ್ಕೊಂದು ಕೈಪಿಡಿ)

ಅನುಸೂಯ ಶರ್ಮಾ
ಪುಟ : IV + ೧೧೨ ಬೆಲೆ : ರೂ. ೧೦೦
**ಭೂಮಿ ಪ್ರಕಾಶನ**, ನಂ. ೬/೩೨, 'ಕಾಂಚನ ನಿಲಯ', ೨ನೇ ಡಿ ಮುಖ್ಯರಸ್ತೆ, ೬೦ ಅಡಿ ರಸ್ತೆ
ಆರ್ ಎಂ ವಿ ೨ನೇ ಹಂತ, ಭೂಪಸಂದ್ರ, ಬೆಂಗಳೂರು - ೫೬೦೦೯೪

ಹಿಂದೆ ಮನೆಗೆ ಬೇಕಾದ ಆಹಾರ ಧಾನ್ಯ - ತರಕಾರಿ-ಹಣ್ಣು ಹಂಪಲುಗಳನ್ನು ಹಳ್ಳಿಯ ತಮ್ಮ ಜಾಗಗಳಲ್ಲೇ ಬೆಳೆಯುತ್ತಿದ್ದರು. ಕ್ರಮೇಣ ಪರಿಸ್ಥಿತಿ ಪಲ್ಲಟವಾಗಿ ಆ ಚಿತ್ರಣವೇ ಬದಲಾಯಿತು. ಹಿತ್ತಿಲು ಎಂದರೆ ಮನೆಯ ಸುತ್ತಲೂ ಇರುವ ಅತ್ಯಲ್ಪ ಜಾಗ ಎಂಬುದು ರೂಢಿಯ ಹೆಸರಾಯಿತು. ಮನೆಯಷ್ಟೇ ಆತ್ಮೀಯವಾಗಿ ಹಿತ್ತಿಲನ್ನೂ ರೂಪಿಸಿಕೊಳ್ಳಬಹುದೆಂದು ಈ ಪುಸ್ತಕ ಓದಿದಾಗ ನಿಮಗನ್ನಿಸದೆ ಇರಲು ಸಾಧ್ಯವೇ ಇಲ್ಲ. ತಮ್ಮ ಹಿತ್ತಿಲಲ್ಲೇ ಬೆಳೆದುಕೊಂಡ ತರಕಾರಿ, ಹೂವು, ಹಣ್ಣುಗಳನ್ನು ಉಪಯೋಗಿಸಿದಾಗ ಒಂದು ಸಾರ್ಥಕ ಭಾವನೆ ಖಂಡಿತವಾಗಿ ಉಂಟಾಗುತ್ತದೆ. ಅಲ್ಲದೆ ಸ್ವಂತ ಹಿತ್ತಲಲ್ಲೇ ಬೆಳೆದ ಇಂತಹ ಪದಾರ್ಥಗಳು ತಾಜಾ ಆಗಿದ್ದು ಆರೋಗ್ಯ ಪೂರ್ಣವೂ ಆಗಿರುತ್ತದೆ. ನಮ್ಮ ಸಮಯದ ಒಂದಿಷ್ಟನ್ನು ಅದಕ್ಕೆ ತೊಡಗಿಸಿಕೊಂಡರೆ ಎಲ್ಲವನ್ನೂ ಹಣ ತೆತ್ತುಕೊಂಡುಕೊಳ್ಳಬೇಕಾದಂಥ ದುಬಾರಿ ವೆಚ್ಚವೂ ಕಡಿಮೆಯಾಗುತ್ತದೆ. ಈ ಪುಸ್ತಕವೊಂದು ನಿಮಗೆ ಗೈಡ್ ಇದ್ದಂತೆ ಅಥವಾ ಮಾಹಿತಿ ನೀಡುವ ಮಿತ್ರನಂತೆ. ಕೈತೋಟದಲ್ಲಿ ಬೆಳೆದುಕೊಳ್ಳಬಹುದಾದ ಎಲ್ಲಗಿಡಗಳ ಬಗ್ಗೆ ಸಾಕಷ್ಟು ವಿವರ ಇಲ್ಲಿ ಸಿಗುತ್ತದೆ. ನಮಗೆ ಹಿತ್ತಿಲೇ ಇಲ್ಲ; ಪುಸ್ತಕ ಯಾಕೆ ಎನ್ನಬೇಡಿ. ಮುಖಪುಟದಲ್ಲಿ ಕಂಗೊಳಿಸುವ ಪ್ಯಾಷನ್ ಫ್ರೂಟ್ ಬಳ್ಳಿಯ ಗಡಿಯಾರದ ಹೂವಿನ ಕಡೆಗೊಮ್ಮೆ ನೋಡಿ- ಸಮಯ ಮೀರುತ್ತದೆಂದು ಅದು ಹೇಳುತ್ತಿದೆ. ತಡಮಾಡದೆ ಇಂದೇ ಪುಸ್ತಕ ಕೊಳ್ಳಿ. ಮುಂದೆ ಸಾಕಷ್ಟು ಹಿತ್ತಲನ್ನು ಒಳಗೊಂಡ ಮನೆ ನಿಮ್ಮದಾಗುತ್ತದೆ!

**ದಲಿತತ್ವ: ಅಕ್ಷರವಾಗದ ಆತ್ಮ ಕಥಾನಕ** (ಕವನ ಸಂಕಲನ)

*ಲೇ : ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ*

**ಪುಟ : ೧೩೨** **ಬೆಲೆ : ರೂ. ೭೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್‌ಹಾಸ್ಟೆಲ್, ಗದಗ - ೫೮೨೧೦೧

ರಾಜಕೀಯ ಇಚ್ಛಾಶಕ್ತಿ, ದಲಿತೇತರ ಸಹೃದಯ ಮನಸ್ಸು ಮತ್ತು ಎಚ್ಚೆತ್ತ ದಲಿತ ಧ್ವನಿ- ಈ ಮೂರೂ ಒಗ್ಗೂಡಿದಾಗ ಮಾತ್ರ ದಲಿತ ವಿಮೋಚನೆ ಸಾಧ್ಯವೆಂಬುದು ಇಲ್ಲಿನ ಅಭಿಪ್ರಾಯ. ಸಂವಿಧಾನದಲ್ಲಿ ಕೊಡಮಾಡಿದ ಸೌಲಭ್ಯಗಳಿಗಷ್ಟೇ ಹೋರಾಟಗಳು ಸೀಮಿತವಾಗುತ್ತಿರುವ ಇಂದಿನ ದಿನಗಳಲ್ಲಿ ಹೋರಾಟದ ಸ್ವರೂಪವನ್ನು ಮತ್ತೆ ಮತ್ತೆ ತಿದ್ದಿಕೊಂಡು ಸಾಮಾಜಿಕ ಸ್ಥಾನಮಾನ ಪಡೆಯುವತ್ತ ಸ್ವತಃ ಶೋಷಿತ ವರ್ಗವೇ ಮುಂದಾಗಬೇಕಿದೆ. ಶೋಷಕ ವರ್ಗದ ಬೆಂಬಲ ಇಂಥ ಕಡೆ ನಿರೀಕ್ಷಿಸುವುದು ಪೆದ್ದುತನ. ಒಂದು ವರ್ಗದ ದುಡಿಮೆಯ ಫಲವನ್ನು ಇನ್ನೊಂದು ವರ್ಗ ಕಸಿದುಕೊಂಡಾಗ, ಅಸಮಾನತೆ ತಲೆದೋರಿ, ನ್ಯಾಯದ ತಕ್ಕಡಿ ಏರು ಪೇರಾಗುತ್ತದೆ. ಸಂಘರ್ಷ ಅನಿವಾರ್ಯವಾಗುತ್ತದೆ. ಭಾರತದಲ್ಲಿ ಜನಸಂಖ್ಯೆಯು ಏರಿದಂತೆಲ್ಲಾ ಜಾತಿಗಳ ಸಂಖ್ಯೆಯೂ ಏಕೆ ಏರುತ್ತದೆ ? ಭಾರತೀಯ ಸಂದರ್ಭದಲ್ಲಿ ಶಾಸನದ ಮೂಲಕ ದಲಿತೋದ್ಧಾರ ಸ್ವಲ್ಪ ಮಟ್ಟಿಗೆ ಆಶಾದಾಯಕ. ಜಾತಿರಾಜಕಾರಣದ ಮೂಲಕ ಆಯ್ಕೆಯಾಗುವ ಪ್ರತಿನಿಧಿಗಳು ಹೆಚ್ಚಾದಾಗ, ಮೀಸಲಾತಿ ಸೌಲಭ್ಯ ಹೆಚ್ಚಾದಾಗ ಜಾತಿಗಳ ಸಂಖ್ಯೆ ಬೆಳೆದು ಪ್ರತ್ಯೇಕಗೊಂಡು ಏಕಾಂಗಿಯಾಗುತ್ತ ಬಲ ಕುಂದಿ ಸೋಲು ಸಿದ್ಧವಾಗಿರುತ್ತದೆ. ಮೊದಲು ಸಿದ್ಧಾಂತ-ನಂತರ ಸಂಘಟನೆ - ಮುಂದೆ ಹೋರಾಟ-ಇವು ಸಾಮಾಜಿಕ ಅಸಮಾನತೆಗೆ ಉತ್ತರವಾದೀತು. ಕಾಂ.ವೆಂ. ಅವರ ಇಲ್ಲಿನ ಬರಹಗಳು ಈ ನಿಟ್ಟಿನಲ್ಲಿ ಯೋಚಿಸುತ್ತವೆ. ಈ ಪುಸ್ತಕ ದಲಿತರ ಆತ್ಮಕಥೆಯಂತೆಯೇ ದಲಿತತ್ವದ ಆತ್ಮಕಥೆಯೂ ಆಗಿದೆ.



**ಹರಿವ ನೀರೊಳಗಿನ ಉರಿ** (ಅನುವಾದಿಸಿದ ಕವಿತೆಗಳು)

ಅನು : ವಿಭಾ

**ಪುಟ : xxvi + ೯೪=೧೨೦** **ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨೧೦೧

ವಿಭಾ ನಾವು ಕಳೆದುಕೊಂಡ ಉಜ್ವಲ ಪ್ರತಿಭೆ. ತನ್ನ ಜೀವನದ ಅತ್ಯಲ್ಪ ಕಾಲದಲ್ಲೇ ಕವಯಿತ್ರಿಯಾಗಿ, ಇತರ ಭಾಷೆಗಳ ಕವನಗಳ ಅನುವಾದಕಿಯಾಗಿ ಮಿಂಚಿ ಈ ಲೋಕದ ಅಸಡ್ಡೆಯೊಂದಕ್ಕೆ ಬಲಿಯಾದವರು. ಅನುವಾದಕ್ಕಾಗಿ ವಿಭಾ ಆಯ್ಕೆಮಾಡಿಕೊಳ್ಳುತ್ತಿದ್ದ ಕವನಗಳು 'ನೋವು ಮತ್ತು ಹತಾಶೆಯ ಆಳಕ್ಕಿಳಿದು ಮೇಲೆ ಬರಲಾಗದ ಅಸಹಾಯಕ' ಸ್ಥಿತಿಯನ್ನು ಬಿಂಬಿಸುವಂಥವು. ವೈಭವ ಮತ್ತು ಸೌಂದರ್ಯದ ಬೆನ್ನು ಹತ್ತುವ ಶೃಂಗಾರ ಕವಿಗಳಿಗೆ ಲೋಕದ ಕುರೂಪ ರುಚಿಸದೆ ವರ್ಜ್ಯವಾಗುತ್ತದೆ. ಎಲ್ಲ ಸಂಕಟಗಳೊಂದಿಗೆ ಕುರೂಪವೊಂದಿರುವುದು ಮಾತ್ರ ಸುಳ್ಳಲ್ಲ. ಗುರುತಿಸಲೇನಡ್ಡಿ ? ಎಲ್ಲರೂ ಆಕಾಶಗಾಮಿಯಾಗಿ ಸಂಚರಿಸುವವರೇ. ಭೂಮಿಯ ಸ್ಪರ್ಶದ ಆಪ್ತತೆ ಮತ್ತು ಈ ನೆಲದ ಆರ್ತನಾದಗಳನ್ನು ಕೇಳಿಸಿಕೊಂಡವರು ವಿಭಾ. ಇಲ್ಲಿ ಭಾರತದ ಕವಿಗಳು ಮಾತ್ರವಲ್ಲದೆ ಪ್ಯಾಲೆಸ್ತೀನ್‌ನ ಅಸ್ಮರ್, ಅಂಗೋಲಾದ ನೆಟೊ, ಅವರ ಕವನಗಳೂ ಸೇರಿವೆ. ಪ್ರಪಂಚದಾದ್ಯಂತ ಎಲ್ಲೇ ದೌರ್ಜನ್ಯ ನಡೆಯಲಿ, ಯುದ್ಧ ಸಂಭವಿಸಲಿ - ವಿಜಯದ ಉತ್ಸಾಹಕ್ಕೊಂದು, ಅಪಜಯದ ದುರದೃಷ್ಟಕ್ಕೊಂದು ಸಾಹಿತ್ಯ ಸೃಷ್ಟಿಯಾಗಬಲ್ಲದು. ಇದನ್ನೇ ಸೌಂದರ್ಯ ಮತ್ತು ಕುರೂಪವೆನ್ನಬಹುದಾದರೆ ಅಂಥ ಸಂದರ್ಭವನ್ನು ಸೃಷ್ಟಿಸಿದ ಹೊಣೆ ನಮ್ಮದೇ. ಈ ಕವನಗಳನ್ನು ಆಯ್ಕೆ ಮಾಡಿ ಅನುವಾದಿಸಿದ ವಿಭಾಗೆ ಈ ಹಿಂದಿನ ಕವನಗಳಿಗಾಗಿ ಕ್ರೈಸ್ಟ್ ಕಾಲೇಜಿನ ಕಾವ್ಯ ಪ್ರಶಸ್ತಿ ಗುಡಿಬಂಡೆ ಪೂರ್ಣಿಮಾ ಪ್ರಶಸ್ತಿ ಡಿ. ಎಸ್. ಕರ್ಕಿ ಕಾವ್ಯ ಪ್ರಶಸ್ತಿ ಅಲ್ಲದೆ ಇನ್ನೂ ಅನೇಕ ಗೌರವಗಳು ಸಂದಿವೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಸಂತೋಷದಾಯಕ ಕಲಿಕೆಗಾಗಿ ಸುಂದರ ಪರಿಸರ** (ಸಚಿತ್ರ) *ಜನಾರ್ಧನ ಗುಂಗುರುಮಳೆ*
*ಪುಟ : ೪೦* *ಬೆಲೆ : ರೂ. ೪೫*

**ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು** *ನೇಮಿಚಂದ್ರ*
*ಪುಟ : ೮೦* *ಬೆಲೆ : ರೂ. ೫೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಯಾರೂ ನೆಡದ ಮರ** (ಕವನ ಸಂಕಲನ) *ಗಣೇಶ ಹೊಸ್ಮನೆ*
*ಪುಟ : ೯೬* *ಬೆಲೆ : ರೂ. ೪೦*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್ ಗದಗ - ೫೮೨ ೧೦೧

**ವೈರಮುತ್ತುರವರ ೩೩ ಕವಿತೆಗಳು** *ತಮಿಳು ಮೂಲ : ಪದ್ಮಶ್ರೀ ವೈರಮುತ್ತು (ಅನು : ಪ್ರೊ|| ಕೆ. ಮಲರ್‌ವಿಳಿ)*
*ಪುಟ : ೧೯೦* *ಬೆಲೆ : ರೂ. ೧೧೦*
**ಕ್ರೈಸ್ಟ್, ಯೂನಿವರ್ಸಿಟಿ ಕನ್ನಡ ಸಂಘ,** ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

**ಅಂಗಳದಲ್ಲಿ ಆಕಾಶ** (ಕವನ ಸಂಕಲನ) *ರಾಜು ಹೆಗಡೆ*
*ಪುಟ : ೭೧* *ಬೆಲೆ : ರೂ. ೪೦*

**ದರುಶನ** (ಏಕಾಂಕ ನಾಟಕಗಳು) *ಡಾ|| ಆರ್. ವಿ. ಭಂಡಾರಿ*
*ಪುಟ : ೫೬* *ಬೆಲೆ : ರೂ. ೩೦*

**ಹಸಿರೂರಿನ ಹುಡುಗ** (ಮಕ್ಕಳ ಕಥಾ ಸಂಕಲನ) *ತಮ್ಮಣ್ಣ ಬೀಗಾರ*
*ಪುಟ : ೭೫* *ಬೆಲೆ : ರೂ. ೪೦*
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ, ಅರೇಅಂಗಡಿ, ಹೊನ್ನಾವರ (ಉ.ಕ.) - ೫೮೧ ೪೩೦

**ಸಣ್ಣ ಸಣ್ಣ ಕಥೆಗಳು** *ಎಸ್. ಆರ್. ಗುರುನಾಥ್*
*ಪುಟ : ೧೪೦* *ಬೆಲೆ : ರೂ. ೮೦*
**ಜಾಗೃತಿ ಪ್ರಿಂಟರ್ಸ್,** ನಂ. ೫೬/೧-೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆಪಾಳ್ಯ, ಮಾಗಡಿ ಮುಖ್ಯ ರಸ್ತೆ, ಬೆಂಗಳೂರು - ೫೬೦ ೦೯೧

**ದೇವರ ಮರ** (ಕಥಾ ಸಂಕಲನ) *ವಿಷ್ಣು ನಾಯ್ಕ*
*ಪುಟ : ೧೧೨* *ಬೆಲೆ : ರೂ. ೭೫*
**ರಾಘವೇಂದ್ರ ಪ್ರಕಾಶನ,** ಅಂಬಾರ ಕೊಡ್ಲ, ಅಂಕೋಲಾ

**ವಿಜ್ಞಾನ ವಿಹಾರ** (ಲೇಖನಗಳು) *ಬಿ. ಜಿ. ಕುಸುಮಾ*
*ಪುಟ : ೫೮* *ಬೆಲೆ : ರೂ. ೩೦*

**ತಮಾಷೆ ತಲೆ** (ಮಕ್ಕಳ ಕಥೆಗಳು) *ಬಿ. ಜಿ. ಕುಸುಮಾ*
*ಪುಟ : ೬೪* *ಬೆಲೆ : ರೂ. ೩೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸುಮುಖ ಪ್ರಕಾಶನ ,** ನಂ. ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಅನುಭವದಡಿಗೆಯ ಮಾಡಿ** (ಲಲಿತ ಪ್ರಬಂಧಗಳ ಸಂಕಲನ) *ವಿಜಯಾ ಶ್ರೀಧರ್*
*ಪುಟ : ೧೩೪* *ಬೆಲೆ : ರೂ. ೭೦*
**ಸ್ನೇಹಾ ಪಬ್ಲಿಷಿಂಗ್ ಹೌಸ್,** ನಂ. ೧೩೮ನೇ 'ಸಿ' ಮುಖ್ಯರಸ್ತೆ, ಹಂಪಿನಗರ (ಆರ್.ಪಿ.ಸಿ. ಲೇಔಟ್), ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೧೦೪

**ಗಳಿಗೆ ಬಟ್ಟಲ ತಿರುವುಗಳಲ್ಲಿ** (ಕಿರುಪದ್ಯಗಳು) ರೂಪ ಹಾಸನ
*ಪುಟ : ೮೬* *ಬೆಲೆ : ರೂ. ೬೦*
**ಸಿರಿವರ ಪ್ರಕಾಶನ,** ನಂ. ಎಂ. ೩೭/ಬಿ, ೮ನೇ ಅಡ್ಡರಸ್ತೆ, ಲಕ್ಷ್ಮೀನಾರಾಯಣಪುರ, ಬೆಂಗಳೂರು - ೫೬೦ ೦೨೧

**ಒಡಂಬಡಿಕೆ** (ಕವನ ಸಂಗ್ರಹ) *ಡಾ|| ಕೆ. ಬಿ. ಪವಾರ*
*ಪುಟ : ೭೩* *ಬೆಲೆ : ರೂ. ೩೫*
**ಸನ್ಮತಿ ಸಾಹಿತ್ಯ ಪೀಠ,** ಎಂ.ಐ.ಜಿ.-೩, ಸಿ.ಎಂ. ಉದಾಸಿನಗರ, ಸಿರಸಿ - ೫೮೧ ೪೦೨

**ಅಜೋಲಾ** (ಲೇಖನಗಳು) *ಗಾಣಧಾಳು ಶ್ರೀಕಂಠ*
*ಪುಟ : ೫೬* *ಬೆಲೆ : ರೂ. ೬೦*
**ಭೂಮಿ ಪ್ರಕಾಶನ,** ನಂ. ೬/೩೨, 'ಕಾಂಚನ ನಿಲಯ' ೨ನೇ 'ಡಿ' ಮುಖ್ಯರಸ್ತೆ, ೬೦ ಅಡಿ ರಸ್ತೆ, ಆರ್‌ಎಂವಿ ೨ನೇ ಹಂತ, ಭೂಪಸಂದ್ರ, ಬೆಂಗಳೂರು - ೫೬೦ ೦೯೪

**ಝನ್ನದಿ** (ಕವನ ಸಂಕಲನ) *ಎಚ್. ಆರ್. ರಮೇಶ*
*ಪುಟ : ೧೦೪* *ಬೆಲೆ : ರೂ. ೬೦*

**ಮುಕ್ತಿಯ ರಹಸ್ಯ** (ಕಥೆ-ನಾಟಕ) *ಮೂಲ : ಎಂ. ವೈ. ಘೋರ್ಪಡೆ, (ಅನು : ಭಾರತಿ ಕಾಸರಗೋಡು)*
*ಪುಟ : ೧೪೦* *ಬೆಲೆ : ರೂ. ೭೦*

**ಪಪ್ಪಿ ಕೊಟ್ರು ಬಾಪೂ** (ಮಕ್ಕಳ ಕವಿತೆಗಳು) ಆನಂದ ವಿ. ಪಾಟೀಲ
*ಪುಟ : ೧೫೨* *ಬೆಲೆ : ರೂ. ೭೫*

**ಅಲರು** (ಮಕ್ಕಳ ಸಾಹಿತ್ಯ) *ಆನಂದ ವಿ. ಪಾಟೀಲ*
*ಪುಟ : ೨೦೪* *ಬೆಲೆ : ರೂ. ೧೦೦*
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಅಭಿನವ,** ನಂ. ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೪೦

**ಈವರೆಗೆ** (ಕವಿತೆಗಳು) *ಸಂತೋಷ ಚೊಕ್ಕಾಡಿ*
*ಪುಟ : ೧೬೨* *ಬೆಲೆ : ರೂ. ೧೦೫*
**ಮೌಲ್ಯ ಪ್ರಕಾಶನ,** ನಲ್ಲೂರು, ಕಾರ್ಕಳ - ೫೭೪೫೦೨



# ಶಿಕ್ಷಣ - ಉದ್ಯೋಗ




"**ಕ**ಲಿಯುವುದು ಜ್ಞಾನ ಸಂಪಾದನೆಗೆ; ತಿಳಿವಳಿಕೆಯ ವರ್ಧನೆಗೆ. ಕಲಿತವರಿಗೆಲ್ಲ ಉದ್ಯೋಗ ಕೊಟ್ಟರೆ ದೇಶ ದಿವಾಳಿಯಾಗಿ ಹೋದೀತು."

"ಈಗ ಕಂಪ್ಯೂಟರ್ ಸೈನ್ಸ್‌ಗೆ ಬೆಲೆಯಿಲ್ಲ ಐಟಿ ಪ್ರಪಂಚದ ವರೆಲ್ಲ ಸ್ವರ್ಗದಿಂದ ಪಾತಾಳಕ್ಕೆ ಇಳೀತಾ ಇದ್ದಾರೆ. ದಿನವೊಂದರ ಹತ್ತೈವತ್ತು ಸಾವಿರ ಮಂದಿ ನಿರುದ್ಯೋಗಿಗಳಾಗ್ತಾ ಇದ್ದಾರೆ. ಒಮ್ಮೆಲೆ ಸಂಬಳ ಅರ್ಧಕ್ಕೆ ಅರ್ಧ ಕಡಮೆಯಾಗಿದೆ."

"ಸರ್, ನಾನು ಎಂಬಿಎ ಮಾಡ್ಲಾ? ಎಂಸಿಎ ಮಾಡ್ಲಾ? ಯಾವುದನ್ನು ಮಾಡಿದರೆ ನನಗೆ ಹೆಚ್ಚಿನ ಪ್ರಯೋಜನ ಇದೆ ? ಅವಕಾಶಗಳು ಯಾವುದರಲ್ಲಿ ಜಾಸ್ತಿ ?"

– ಈ ಎಲ್ಲ ಮಾತುಗಳೂ ಶಿಕ್ಷಣ ಹಾಗೂ ಉದ್ಯೋಗದ ನಡುವೆ ಇರಬಹುದಾದ ಸಂಬಂಧವನ್ನು ಅಥವಾ ಅವುಗಳ ನಡುವೆ ಸಂಬಂಧ ಕಡಿದುಹೋಗುತ್ತಿರುವುದನ್ನು ಸೂಚಿಸುತ್ತವೆ.

ಶಿಕ್ಷಣವು ಮಾನವ ವ್ಯಕ್ತಿತ್ವದ ನಿರ್ಮಾಣಕ್ಕಾಗಿ, ಸಾಂಸ್ಕೃತಿಕ ವ್ಯಕ್ತಿತ್ವ ರೂಪಿಸುವುದಕ್ಕಾಗಿ, ವ್ಯಕ್ತಿಯ ಸರ್ವಾಂಗೀಣ ವಿಕಸನಕ್ಕಾಗಿ, ವ್ಯಕ್ತಿಯಲ್ಲಿ ಹುದುಗಿರುವ ಸಾಮರ್ಥ್ಯಗಳ ಪ್ರಕಟಣೆಗಾಗಿ, ಜ್ಞಾನ ಸಂಪಾದನೆಗಾಗಿ – ಎಂದೆಲ್ಲ ಉದಾತ್ತವಾಗಿ ಶಿಕ್ಷಣದ ಗುರಿಗಳನ್ನು ನಿರೂಪಿಸಲಾಗಿದೆ. ಅಂತೆಯೇ ಶಿಕ್ಷಣವು ಹೊಟ್ಟೆಪಾಡಿಗಾಗಿ, ಉದ್ಯೋಗಕ್ಕಾಗಿ, ಆರ್ಥಿಕ ಸ್ವಾವಲಂಬನಕ್ಕಾಗಿ ಎಂದೂ ಹೇಳಲಾಗಿದೆ. ಹೊಟ್ಟೆಪಾಡಿಗಾಗಿ ಶಿಕ್ಷಣವೆಂಬುದು ತೀರ ಪ್ರಾಥಮಿಕ ಉದ್ದೇಶವಾಗಿದ್ದರೂ ಅದಕ್ಕೆ ಅದರದ್ದೇ ಆದ ಮಹತ್ವವಿದೆ. ಅನಕ್ಷರಸ್ಥರು, ಅವಿದ್ಯಾವಂತರು ದುಡಿಯುವುದಿಲ್ಲವೆ ? ಸಂಪಾದನೆ ಮಾಡುವು ದಿಲ್ಲವೆ ? ಇವರಲ್ಲಿ ಕೆಲವರು ವಿದ್ಯಾವಂತರಿಗಿಂತಲೂ ಹೆಚ್ಚಿನ ಸಂಪಾದನೆ ಮಾಡುವುದಿಲ್ಲವೆ ? ಹಾಗಿರುವಾಗ ಅನ್ನ ನೀಡದ ವಿದ್ಯೆ ಏಕೆ ? – ಎಂದು ಪ್ರಶ್ನಿಸುವವರಿದ್ದಾರೆ.

ಆದರೆ ವಿದ್ಯೆಯನ್ನು ಸಂಪಾದಿಸುವುದೆಂದರೆ ಜ್ಞಾನ ಸಂಪಾದನೆ, ತಿಳಿವಳಿಕೆಯ ವಿಸ್ತರಣೆ, ಮೌಲ್ಯಗಳ ವರ್ಧನೆ, ನಿರ್ದಿಷ್ಟ ಕೌಶಲಗಳ ಗಳಿಕೆ. ಈ ಕೌಶಲಗಳ ಗಳಿಕೆಯಿಂದ ಹಣ ಗಳಿಕೆ ಸುಲಭ ಸಾಧ್ಯ ಮತ್ತು ಅಧಿಕ ಸಂಪಾದನೆ ಸಾಧ್ಯ ಎಂಬ ಗ್ರಹಿಕೆ ಇದೆ.

ಇಂದು ಶಿಕ್ಷಣದ ಸಾರ್ವತ್ರೀಕರಣದ ದೆಸೆಯಿಂದಾಗಿ, ಪ್ರಜಾಪ್ರಭುತ್ವ ಹಾಗೂ ಸಾಮಾಜಿಕ ನ್ಯಾಯದ ಪರಿಕಲ್ಪನೆಗಳ ಆಚರಣೆಯಿಂದಾಗಿ ವಿದ್ಯಾವಂತರ ಸಂಖ್ಯೆ ನೂರು ಪಟ್ಟು ಹೆಚ್ಚಿದೆ. ಸರಕಾರಿ, ಅರೆಸರಕಾರಿ, ಅನುದಾನಿತ ಕ್ಷೇತ್ರಗಳಲ್ಲಿ ಅಥವಾ ಸಾರ್ವಜನಿಕ ರಂಗದಲ್ಲಿ ಉದ್ಯೋಗಗಳಿಗಾಗಿ ತೀವ್ರ ಸ್ವರೂಪದ ಪೈಪೋಟಿ ಏರ್ಪಟ್ಟಿದೆ. ವಿವಿಧ ಕ್ಷೇತ್ರಗಳ ವಿಸ್ತರಣೆಯಿಂದ ಉದ್ಯೋಗಾವಕಾಶಗಳು ವಿಪುಲವಾಗಿದ್ದರೂ ಉದ್ಯೋಗಾಕಾಂಕ್ಷಿ ವಿದ್ಯಾವಂತರ ಸಂಖ್ಯೆ ಮಿತಿಮೀರಿದೆ. ಪರಿಣಾಮವಾಗಿ ವಿದ್ಯಾವಂತ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಿದೆ. ಇದಕ್ಕೆ ಮುಖ್ಯ ಕಾರಣ ಸಾರ್ವಜನಿಕ ಅಥವಾ ಸರಕಾರಿ ವಲಯದಲ್ಲಿ ಹುದ್ದೆಗಳು ಖಾಲಿಯಾ ದಂತೆ ಆ ಹುದ್ದೆಗಳನ್ನು ತ್ವರಿತವಾಗಿ ತುಂಬುವುದಕ್ಕೆ ವ್ಯವಸ್ಥೆ ಮಾಡಲಾಗುತ್ತಿಲ್ಲ. ಆರ್ಥಿಕ ಬಿಕ್ಕಟ್ಟಿನ ಕಾರಣಗಳನ್ನು ನೀಡಿ ಸರಕಾರಗಳು ಇರುವ ಹುದ್ದೆಗಳನ್ನು ರದ್ದುಗೊಳಿಸುವ ಮೂಲಕ ಮಿತವ್ಯಯ ಸಾಧಿಸಲು ಹೆಣಗುತ್ತಿವೆ. ಹೊಸ ಹೊಸ ಉದ್ಯೋಗಗಳನ್ನು ಸೃಷ್ಟಿಸಲು ಪ್ರಯತ್ನಿಸುತ್ತಿಲ್ಲ. ಇದೀಗ ಖಾಸಗೀಕರಣ ಪ್ರಕ್ರಿಯೆಯು ಪ್ರಬಲವಾದಮೇಲಂತೂ ಸರಕಾರಗಳು ಕೆಲವು ಕ್ಷೇತ್ರಗಳನ್ನು ಖಾಸಗಿಯವರಿಗೆ ವಹಿಸಿಕೊಡಲು ಮುಂದಾಗುತ್ತಿವೆ. ಖಾಸಗಿ ರಂಗದಲ್ಲಿನ ಉದ್ಯೋಗಗಳ ಮೇಲೆ ಸರಕಾರಗಳಿಗೆ ಹಿಡಿತ ಇಲ್ಲವಾಗಿದೆ. ಹೊಸ ಹೊಸ ಒಲವುಗಳ ದೆಸೆಯಿಂದಾಗಿ ಯಾವುದೋ ಒಂದು ಕ್ಷೇತ್ರದಲ್ಲಿ ಮಾತ್ರ ಉದ್ಯೋಗಾವಕಾಶಗಳು ಹೆಚ್ಚುತ್ತಿವೆ; ಹೀಗೆ 'ವಿದ್ಯಾವಂತ ನಿರುದ್ಯೋಗ' ಎಂಬ ದಾರುಣ ಸ್ಥಿತಿ ಸಮಾಜದಲ್ಲಿ ಸೃಷ್ಟಿಯಾಗಿ ಸಾಮಾಜಿಕ ಸ್ವಾಸ್ಥ್ಯವನ್ನು ಕದಡುತ್ತಿದೆ.

ನಿಜವಾಗಿ ನೋಡಿದರೆ ಯಾವ ಪ್ರಗತಿಪರ ಸಮಾಜವೂ ನೂರಕ್ಕೆ ನೂರು ಉದ್ಯೋಗಗಳನ್ನು ಸೃಷ್ಟಿಸಿ ಎಲ್ಲ ವಿದ್ಯಾವಂತರಿಗೆ ಉದ್ಯೋಗಗಳನ್ನು ಒದಗಿಸಲಾರದು. ಅದೊಂದು ಸುಂದರ ಕನಸು. ಆದರೂ ಬಹುಮಂದಿ ಸಮರ್ಥ ಪ್ರತಿಭಾವಂತ ವಿದ್ಯಾವಂತರಿಗೆ ಅವರವರ ವಿದ್ಯಾರ್ಹತೆ, ಯೋಗ್ಯತೆ, ಕೌಶಲಗಳು ಇತ್ಯಾದಿಗಳಿಗೆ ತಕ್ಕಂತೆ ಉದ್ಯೋಗಗಳನ್ನು ಒದಗಿಸುವ ಹೊಣೆ ಸರಕಾರ ಹಾಗೂ ಖಾಸಗಿಯವರ ಮೇಲಿದೆ. ಈ ಹೊಣೆಗಾರಿಕೆಯಿಂದ ಸಂಬಂಧಪಟ್ಟವರು ನುಣುಚಿಕೊಳ್ಳುತ್ತಾರೆಂದರೆ ಉದ್ಭವಿಸುವ ಪ್ರಶ್ನೆ : ಹದಿನೈದು ವರ್ಷಗಳ ಕಾಲ ಕಷ್ಟಪಟ್ಟು ವ್ಯಾಸಂಗ ಮಾಡಿ ಪ್ರಯೋಜನವೇನು ?

ಉದ್ಯೋಗಕ್ಕಾಗಿ ಶಿಕ್ಷಣ ಎಂಬುದೇ ಗುರಿಯಾಗುವುದಾದರೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡುವುದು ಅಗತ್ಯ. ಈಗಿನ ಏಕರೂಪದ ಶಿಕ್ಷಣದಿಂದ ಹತಾಶೆ, ಅಸಮರ್ಥತೆ, ನಿರುಪಯುಕತ್ತೆಯ ಭಾವನೆಗಳು ಹೆಚ್ಚುತ್ತಿವೆ. ಶಿಕ್ಷಣದ ವಿವಿಧ ಹಂತಗಳಲ್ಲಿ ಅಗತ್ಯವುಳ್ಳವರಿಗೆ ನಾನಾ ಬಗೆಯ ಉದ್ಯೋಗಗಳನ್ನು, ಅದಕ್ಕೆ ಬೇಕಾದ ಪರಿಣತಿ ಒದಗಿಸುವುದನ್ನು ಈಗಿಂದೀಗಲೇ ಅಳವಡಿಸಬೇಕು. ತಂತ್ರಜ್ಞರು, ವೈದ್ಯರು, ಶಿಕ್ಷಕರು ಮುಂತಾದವರನ್ನು ಉತ್ಪಾದನೆ ಮಾಡುವುದಕ್ಕೆ ಬದಲು ನಿತ್ಯಜೀವನದ ವಿವಿಧ ಸ್ತರಗಳಲ್ಲಿ ಸಾಮಾಜಿಕ ಸಂತೋಷ ಹಾಗೂ ಉತ್ಪಾದನೆಗೆ ಯೋಗ್ಯರಾಗುವಂಥ ವ್ಯಕ್ತಿಗಳನ್ನು ರೂಪಿಸುವ ಶಿಕ್ಷಣ ನೀಡಬೇಕು. ಪ್ರಾಯೋಗಿಕ ವಿದ್ಯೆಗೆ ಅಧಿಕ ಬೆಂಬಲ ನೀಡಬೇಕು.


**ಡಾ|| ಮಹಾಬಲೇಶ್ವರ ರಾವ್**
ಪ್ರಾಂಶುಪಾಲರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಮಹಾವಿದ್ಯಾಲಯ,
ಕುಂಜಿಬೆಟ್ಟು, ಉಡುಪಿ - ೫೭೬ ೧೦೨



ಜ. ಹೊ. ನಾರಾಯಣಸ್ವಾಮಿ...

# ಡಾ॥ ಕೋ. ಚೆ. ಅವರ 'ಭಾರತದಲ್ಲಿ ಕೋಮುದ್ವೇಷ'

~~~

*'ಏಳು ಮೇಲೇಳೇಳು ಸಾಧುವೆ,*
*ಹಾಡು ಬಾಗಿಯ ಹಾಡನು*
*ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ*
*ಈ ತಾಯ್ನಾಡನು !'*

*– ಎಂದು ವಿವೇಕಾನಂದರು ಸನ್ಯಾಸಿಗಳಿಗೆ ತಾಯಿನಾಡನ್ನು ಎಚ್ಚರಿಸುವ ಕರೆಯನ್ನು ಕೊಟ್ಟರು. ಆದರೆ ಸಂಘಪರಿವಾರದ ಬಾಲಂಗೋಚಿಗಳಾಗಿರುವ ಈ ದೇಶದ ಕಾವಿಧಾರಿಗಳು (ಸನ್ಯಾಸಿಗಳು) ಮಾಡಲಾಗದ ಆ ಕರೆಯನ್ನು ಡಾ॥ ಕೋ. ಚೆ. ಅವರು ಈ ಕೃತಿಯ ಮೂಲಕ ಮಾಡಿದ್ದಾರೆ. ಇದು 'ಭಾರತದಲ್ಲಿ ಕೋಮುದ್ವೇಷ'ದ ಕೃತಿಯ ಹೆಗ್ಗಳಿಕೆ. ಇಡೀ ವಿಶ್ವದಲ್ಲಿಯೆ ಸರ್ವಧರ್ಮ ಸಮನ್ವಯದ ಪುಣ್ಯಭೂಮಿ ಎಂಬ ಕೀರ್ತಿಗೆ ಪಾತ್ರವಾಗಿರುವ ಈ ಭಾರತದೇಶವನ್ನು ಪ್ರೀತಿಸುವ ಎಲ್ಲರೂ – ಅದರಲ್ಲಿ ಯುವಜನತೆ – ತಪ್ಪದೆ ಓದಲೇಬೇಕಾದ ಸಕಾಲಿಕ ಹಾಗೂ ಅಪೂರ್ವ ಕೃತಿ ಇದಾಗಿದೆ.*

~~~

**ಎಲ್ಲರೂ – ಅದರಲ್ಲೂ ಯುವಜನತೆ – ತಪ್ಪದೇ ಓದಬೇಕಾದ ಅಪೂರ್ವ ಕೃತಿ**

**ಶ**ತಮಾನಗಳು ಕಳೆದಂತೆ ಧರ್ಮ ದೂರವಾಗಿ ಕೋಮುಭಾವನೆ ಬೆಳೆದು, ಕಾಲಕ್ರಮೇಣ ಕೋಮುವಾದವಾಗಿ ಅದು ಈಗ ಹೇಗೆ ಕೋಮುದ್ವೇಷವಾಗಿ ಪರಿಣಮಿಸಿದೆ ಎಂಬುದನ್ನು ವಾಸ್ತವ ಘಟನೆಗಳ ಹಾಗೂ ಪುರಾವೆಗಳ ಸಮೇತ ಡಾ॥ ಕೋ. ಚೆನ್ನಬಸಪ್ಪನವರ 'ಭಾರತದಲ್ಲಿ ಕೋಮುದ್ವೇಷ' ಕೃತಿ ಅರಿವಿಗೆ ತಂದುಕೊಡುತ್ತದೆ. ಆ ವಿಚಾರಗಳನ್ನು ಮಂಡಿಸುವಲ್ಲಿ ಲೇಖಕರು ಅಳವಡಿಸಿಕೊಂಡಿರುವ ತಂತ್ರವೂ ಪರಿಣಾಮಕಾರಿಯಾಗಿದೆ. ನ್ಯಾಯಾಧೀಶರಾಗಿ, ನ್ಯಾಯವಾದಿಗಳಾಗಿ ಅವರು ಪಡೆದುಕೊಂಡಿರುವ ಅನುಭವ ಹಾಗೂ ವೇದೋಪನಿಷತ್ತುಗಳ, ಮಹಾಕಾವ್ಯಗಳ ಅಧ್ಯಯನ; ಬುದ್ಧ, ಬಸವ, ನಾರಾಯಣಗುರು, ಫುಲೆ, ವಿವೇಕಾನಂದ, ಪೆರಿಯಾರ್, ಅರವಿಂದರು, ಕುವೆಂಪು ಮುಂತಾದ ದಾರ್ಶನಿಕ ಚಿಂತಕರಿಂದ ಹೊಂದಿರುವ ಪ್ರಭಾವ; ಜೊತೆಗೆ ಅಂತರ್ಮುಖಿ ಚಿಂತನೆಗಳಿಂದ ಪ್ರಾಪ್ತವಾಗುವ ಒಳನೋಟಗಳಿಂದ ರಚಿಸಿರುವ ಈ ಕೃತಿ ಮಾನವೀಯ ಮೌಲ್ಯಗಳ ಜೇನುಗೂಡಾಗಿದೆ.

ತನ್ನ ಹೃದಯ ವೈಶಾಲ್ಯತೆಯಿಂದ ವಿಶ್ವದ ಗಮನ ಸೆಳೆದ ರಾಷ್ಟ್ರಗಳಲ್ಲಿ ಭಾರತ ಮೊದಲ ಸ್ಥಾನದಲ್ಲಿದೆ. ವೈವಿಧ್ಯಮಯ ಸಂಸ್ಕೃತಿಗಳ ಸಂಗಮವಾಗಿ ಸರ್ವಧರ್ಮ ಸಮನ್ವಯವನ್ನು ಮನುಕುಲಕ್ಕೆ ಕರುಣಿಸಿದ ಕೀರ್ತಿ ಅದರದು. ಜರ್ಮನಿಯ ಶ್ರೇಷ್ಠ ಚಿಂತಕರೂ ಹಾಗೂ ಭಾರತದ ವೇದೋಪನಿಷತ್ತುಗಳನ್ನು ಮೊಟ್ಟಮೊದಲಿಗೆ ಸಂಪಾದಿಸಿದ ಕೀರ್ತಿಗೆ ಪಾತ್ರರಾದವರು ಮ್ಯಾಕ್ಸ್‌ಮುಲ್ಲರ್. ಅವರು ೧೮೮೩ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ 'ಭಾರತ ನಮಗೆ ಏನು ಕಲಿಸಬಹುದು' ಎಂಬ ವಿಷಯ ಕುರಿತು ಉಪನ್ಯಾಸ ನೀಡಿ :

''ಅತ್ಯಂತ ಆಳವಾದ ಚಿಂತನೆಗಳಿಂದ ಪರಿಹಾರ ರೂಪದಲ್ಲಿ ಮಾನವ ಪ್ರಗತಿಗೆ, ಬದುಕಿನ ಮೂಲಭೂತ ಸಮಸ್ಯೆಗಳಿಗೆ ಪ್ಲೇಟೋ ಮತ್ತು ಕ್ಯಾಂಟ್ ಅವರನ್ನು ಅಧ್ಯಯನ ಮಾಡಿರುವವರ ಗಮನವನ್ನೂ ಸೆಳೆವ ಕೊಡುಗೆ ಯಾವ ದಿಗಂತದಡಿಯಲ್ಲಿ ಗರಿಗೆದರಿವೆ ಎಂದು ನನ್ನನ್ನು ಕೇಳಿದರೆ ನಾನು ಭಾರತವನ್ನು ಸೂಚಿಸುತ್ತೇನೆ.

ಯೂರೋಪಿನಲ್ಲಿರುವ ನಾವು ಯಾವ ಗ್ರೀಕ್ ಮತ್ತು ರೋಮನ್ ಹಾಗೂ ಸೆಮಿಟಿಕ್ ಜನಾಂಗ ಜ್ಯೂಗಳ ಚಿಂತನೆಯನ್ನು ಪೂರ್ಣವಾಗಿ ಒಪ್ಪಿರುವೆವೋ ಆ ನಮ್ಮ ಅಂತರಂಗದ ಜೀವನ ಪಾವನಗೊಳ್ಳಲು, ವಿಸ್ತಾರಗೊಳ್ಳಲು, ವಿಶ್ವವ್ಯಾಪಕವಾಗಲು, ವಾಸ್ತವವಾಗಿ ಹೆಚ್ಚು ಮಾನವೀಯವಾಗಲು, ಭೌತಿಕ ಪ್ರಪಂಚಕ್ಕಷ್ಟೇ ಅಲ್ಲ ಆಧ್ಯಾತ್ಮಿಕ ಪ್ರಪಂಚದ ದಿವ್ಯರೂಪ ಪಡೆಯಲು ಯಾವ ಸಾಹಿತ್ಯದಿಂದ ಸಾಧ್ಯ ಎಂದು ನನ್ನನ್ನು ಕೇಳಿದರೆ ನಾನು ಮತ್ತೆ ಭಾರತವನ್ನು ಸೂಚಿಸುತ್ತೇನೆ.''

– ಎಂದು ಭಾರತದ ಹಿರಿಮೆಗರಿಮೆಗಳನ್ನು ತುಂಬು ಹೃದಯದಿಂದ ಕೊಂಡಾಡಿದ್ದಾರೆ. ಅಂಥ ಪ್ರಶಂಸೆಗೆ ಪಾತ್ರವಾದ ಭಾರತ ಈಗ ಎತ್ತಸಾಗುತ್ತಿದೆ ಎಂದು ನೊಂದು ಕೋ. ಚೆ. ಅವರು ಭಾರತೀಯರನ್ನು ಎಚ್ಚರಿಸುವ ಕೆಲಸವನ್ನು ಶ್ರದ್ಧೆಯಿಂದ ಈ ಕೃತಿಯ ಮೂಲಕ ಮಾಡಿದ್ದಾರೆ.

ಈ ಕೃತಿಯಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಪ್ರಾಚೀನ ಮುಕ್ತ ಭಾರತ, ದ್ರಾವಿಡರ ಸಿಂಧೂ ನಾಗರಿಕತೆ, ಆರ್ಯರ ದಾಳಿ,




ಲೇಖಕರು : **ಡಾ॥ ಕೋ. ಚೆನ್ನಬಸಪ್ಪ**
ಪ್ರಕಾಶಕರು : **ಲೋಹಿಯಾ ಪ್ರಕಾಶನ**, ಬಳ್ಳಾರಿ
ಪುಟಗಳು : ೨೦೦ ಬೆಲೆ : ರೂ. ೧೦೦

ಚಾತುರ್ವರ್ಣದ ಹುಟ್ಟು, ಬ್ರಾಹ್ಮಣ ಪರವಾದ ಮನುಸ್ಮೃತಿಯ ಶಾಸನ, ಬುದ್ಧ ಹಾಗೂ ಬಸವೇಶ್ವರರ ಕೊಡುಗೆಗಳು – ಇವುಗಳನ್ನು ಒಂಬತ್ತು ಅವತರಣಿಕೆಗಳಲ್ಲಿ ಕೊಡಲಾಗಿದೆ. ಎರಡನೆಯ ಭಾಗದಲ್ಲಿ ಪರಮತ ದ್ವೇಷ, ಕೋಮುದ್ವೇಷದ ವಿಷಬೀಜ ರಾಮ ರಥಯಾತ್ರೆಯಿಂದ ಹಿಡಿದು ಗೋದ್ರಾ ಹತ್ಯಾಕಾಂಡದವರೆಗೆ ಹೇಗೆ ಆಘಾತಕಾರಿಯಾಗಿ ಬೆಳೆಯಿತು ಎಂಬುದನ್ನು ೧೦ರಿಂದ ೧೬.ರವರೆಗಿನ ಅವತರಣಿಕೆಗಳಲ್ಲಿ ದಾಖಲಾತಿಗಳ ಮೂಲಕ ಸವಿವರವಾಗಿ ಶ್ರುತಪಡಿಸಿದ್ದಾರೆ. ಹದಿನೇಳನೆಯ ಅವತರಣಿಕೆಯಲ್ಲಿ ಭಾರತದಲ್ಲಿ ಕೋಮುದ್ವೇಷವನ್ನು ಹುಟ್ಟುಹಾಕಿ ಇಡೀ ದೇಶಕ್ಕೆ ಕಿಚ್ಚು ಹಚ್ಚುತ್ತಿರುವ ಸಂಘಪರಿವಾರಕ್ಕೆ ಮಾಡಿರುವ ಮನವಿ ಹೃದಯಂಗಮವಾದುದು. ಮೇಲಿನ ವಿಷಯಗಳಿಗೆ ಪೂರಕವಾಗಿ ನಾಲ್ಕು ಅನುಬಂಧಗಳಲ್ಲಿ ಪುರಾವೆಗಳನ್ನು ಕೊಡಲಾಗಿದೆ. ಐದನೆಯ ಅನುಬಂಧದಲ್ಲಿ ಇತ್ತೀಚೆಗೆ ಅಲಹಾಬಾದ್ ಹೈಕೋರ್ಟ್ ರಾಮ ಜನ್ಮಭೂಮಿ - ಬಾಬ್ರಿ ಮಸೀದಿ ಬಗ್ಗೆ ನೀಡಿದ ತೀರ್ಪನ್ನು ಕುರಿತು ಸ್ವತಃ ನ್ಯಾಯಾಧೀಶರಾಗಿ ಅನುಭವ ಪಡೆದಿರುವ ಕೋ. ಚೆ. ಅವರು ಅದರ ಪರಿಣಾಮಗಳನ್ನು ಕುರಿತು ಕಾನೂನಿನ ಹಿನ್ನೆಲೆಯಲ್ಲಿ ತರ್ಕಬದ್ಧವಾಗಿ ವಿಶ್ಲೇಷಿಸಿದ್ದಾರೆ.

೨

ಪ್ರಾಚೀನ ಕಾಲದಿಂದಲೂ ನಿರಾಶ್ರಿತರಿಗೆ ಆಶ್ರಯವಿತ್ತ, ಆಕ್ರಮಣ ಹಾಗೂ ಶುಷ್ಕ ವಾಣಿಜ್ಯದಿಂದ ದೂರವಾದ ಸಂಸ್ಕೃತಿಗೆ ಸ್ವಾಗತ ನೀಡಿದ ಹೃದಯವೈಶಾಲ್ಯತೆ ಹಾಗೂ ಭವ್ಯ ಪರಂಪರೆ ಭಾರತದ್ದು. ಮೂಲನಿವಾಸಿಗಳ ಸಿಂಧೂ ನಾಗರಿಕತೆಯು ಮನುಕುಲದ ಶ್ರೇಷ್ಠ ಸಂಸ್ಕೃತಿಯ ಪ್ರತೀಕವಾಗಿದೆ. ಕಾಲಕ್ರಮೇಣ ಈ ದೇಶದ ಮಣ್ಣಿನಲ್ಲಿ ಗ್ರೀಕರು, ಪರ್ಷಿಯನ್ನರು, ಶಕರು, ಹೂಣರು, ತುರುಷ್ಕರು, ಮೊಗಲರು ಬಂದು ಹೇಗೆ ಮಿಲನವಾದರು ಎಂಬೀ ಅಂಶಗಳನ್ನು ಕುರಿತು,

*ಎಲ್ಲಿಂದ ಬಂತೊ ಮತ್ತಾರು ಕರೆದರೊ ನುಗ್ಗಿ ಬಂತು ನೋಡು*
*ಲೆಕ್ಕವಿಲ್ಲದತಿ ಮನುಜ ನದಿಗಳಿವು ಲಯವಾಗಲೆಂದು ಇಲ್ಲಿ*
*ಆರ್ಯ ಅನಾರ್ಯ ದ್ರಾವಿಡ ಚೀನಿ ಶಕ ಹೂಣ ಮೊಘಲರೆಲ್ಲ*
*ಒಂದೆ ದೇಹದೊಳು ಮಿಲನವಾಗಿ ಲಯವಾಗಿ ಹೋದರೆಲ್ಲ...॥*

– ಎಂದು ವೈವಿಧ್ಯಮಯ ಸಂಸ್ಕೃತಿಯನ್ನು ತನ್ನಲ್ಲಿ ಅಳವಡಿಸಿಕೊಂಡ ಭಾರತದ ಹಿರಿಮೆಯನ್ನ ಅರಿವಿಗೆ ತಂದುಕೊಡುತ್ತಾರೆ. ಸ್ವಾಮಿ ವಿವೇಕಾನಂದರೂ ಕೂಡ ೧೮೯೩ರಲ್ಲಿ ಅಮೇರಿಕದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದ ವೇದಿಕೆಯಲ್ಲಿ,

> "...ಎಲ್ಲಾ ಜನಾಂಗದಲ್ಲೂ, ಎಲ್ಲಾ ಧಾರ್ಮಿಕ ಪಂಥಗಳಲ್ಲೂ ಕೋಟಲೆಗೆ ಸಿಕ್ಕಿ ತುತ್ತಾಗಿ ನಿರಾಶ್ರಿತರಾದವರಿಗೆ ಒಂದು ಆಶ್ರಯವನ್ನು ಕಲ್ಪಿಸಿಕೊಟ್ಟ ದೇಶಕ್ಕೆ ನಾನು ಸೇರಿದವನೆಂಬುದು ಒಂದು ಹೆಮ್ಮೆ. ಯಾವ ವರುಷ ರೋಮನ್ ಚಕ್ರಾಧಿಪತ್ಯದವರ ದೌರ್ಜನ್ಯದಿಂದ ಯಹೂದ್ಯರ ಪವಿತ್ರ ದೇವಾಲಯ ನುಚ್ಚುನೂರಾಗಿ ಹೋಯಿತೋ ಅದೇ ವರುಷ ಅವರು ದಕ್ಷಿಣ ಭರತ ಖಂಡಕ್ಕೆ ಬಂದು ನಮ್ಮಲ್ಲಿ ಆಶ್ರಯ ಪಡೆದರು. ಅವರನ್ನು ಕೂಡ ನಮ್ಮ ಹೃದಯದಲ್ಲಿ ಅಳವಡಿಸಿಕೊಂಡಿರುವೆವು ಎಂದು ಹೇಳುವುದಕ್ಕೆ ಒಂದು ಹೆಮ್ಮೆ. ಹಿಂದೆ ಪ್ರಖ್ಯಾತರಾದ ಜರತುಷ್ಟ ಜನಾಂಗದ ಅವಶೇಷಕ್ಕೂ (ಪಾರ್ಸಿ ಮತ) ಆಶ್ರಯವಿತ್ತು ಇಂದಿಗೂ ಅದನ್ನು ಪೋಷಿಸುತ್ತಿರುವ ಧರ್ಮಕ್ಕೆ ನಾನು ಸೇರಿದವನೆಂದು ಹೇಳಿಕೊಳ್ಳುವುದಕ್ಕೆ ಹೆಮ್ಮೆ."

ಎಂದು ಭಾರತದ ಪವಿತ್ರವಾದ ಪ್ರಾಚೀನ ಸಂಸ್ಕೃತಿಯ ಶ್ರೇಷ್ಠತೆಯನ್ನು ಮನವರಿಕೆ ಮಾಡಿ ಪ್ರಪಂಚದ ಇತರ ರಾಷ್ಟ್ರಗಳ ಕಣ್ಣು ತೆರೆಸಿದ್ದಾರೆ.

೩

ಆರ್ಯರು ಮೂಲನಿವಾಸಿಗಳೆ ಎಂಬುದನ್ನು ಈ ಕೃತಿ ಪ್ರಮುಖವಾಗಿ ಚರ್ಚಿಸುತ್ತದೆ. ಹೊರಗಿನಿಂದ ಬಂದ ಅವರು ಹೇಗೆ ಸಿಂಧೂ ನಾಗರಿಕತೆಯನ್ನು ನಾಶಮಾಡಿದರು, ಅಲ್ಲಿ ನೆಲೆನಿಂತಿದ್ದ ದ್ರಾವಿಡರನ್ನು ಹೇಗೆ ದಕ್ಷಿಣಕ್ಕೆ ಅಟ್ಟಿದರು, ದ್ರಾವಿಡರು ದಕ್ಷಿಣಕ್ಕೆ ಏಕೆ ಬರಬೇಕಾಯ್ತು, ದ್ರಾವಿಡರಲ್ಲಿದ್ದ ಅನೈಕ್ಯತೆ ಹೇಗೆ ಅವರಿಗೆ ಮುಳುವಾಯ್ತು ಎಂಬುದನ್ನು ಸಾಕ್ಷ್ಯಾಧಾರಗಳ ಮೂಲಕ ಸಾಬೀತುಪಡಿಸುತ್ತದೆ.

ಚಾತುರ್ವರ್ಣ ವ್ಯವಸ್ಥೆಯ ಜನಕರು ಯಾರು ? ಕಾಲಾನಂತರ ಮನುಸ್ಮೃತಿಯನ್ನು ರಚಿಸಿಕೊಂಡು ಆರ್ಯರು ಹೇಗೆ ತಮ್ಮ ಸ್ಥಾನವನ್ನು ಗಟ್ಟಿಗೊಳಿಸಿಕೊಂಡರು, ಯಾಗ, ಬಲಿ ಮುಂತಾದ ಮೌಢ್ಯ ಆಚರಣೆಗಳ ವಿರುದ್ಧ ಬೆಳಕನ್ನು ಬೀರಿದ ಗೌತಮ ಬುದ್ಧನನ್ನು ಹೇಗೆ ಈ ದೇಶದಿಂದಲೇ ಉಚ್ಚಾಟಿಸಲಾಯ್ತು, ಅನಂತರ ೧೨ನೇ ಶತಮಾನದಲ್ಲಿ ಬಸವೇಶ್ವರರು ಸಾಮಾಜಿಕ ಸುಧಾರಣೆ ತರುವುದರ ಮೂಲಕ ತುಚ್ಛೀಕರಿಸಲ್ಪಟ್ಟಿದ್ದ ತಳವರ್ಗದ ಜನಸಮೂಹ ಹಾಗೂ ಸ್ತ್ರೀಯರನ್ನು ಸಮಾನತೆಯಿಂದ ಕಂಡದ್ದು, ಅದನ್ನೂ ಸಹಿಸದ ಬ್ರಾಹ್ಮಣರು ವರ್ಣಸಂಕರವೆಂಬ ಹುಯಿಲೆಬ್ಬಿಸಿ ರಾಜಪರಿವಾರದಲ್ಲೆ ತಂದೆ ಮಕ್ಕಳ ನಡುವೆ ವೈಷಮ್ಯ ಹುಟ್ಟಿಸಿ ರಕ್ತದ ಕಾಲುವೆ ಹರಿಸಿದ್ದು ಮುಂತಾದ ಇತಿಹಾಸದಲ್ಲಿ

# ಮಾರಿ ಗುಡಿ ಮುಂದಿನ ಕೋಣ



- ೧ -

"ಸುತ್ತಲು ಉರುಳಿಬಿದ್ದ ಹೆಣಗಳ
ರಾಶಿ ನಡುವೆ ಒಳ ಬೇಗುದಿ
ಅರ್ಥವಾಗದೆ ನಿಂತ ದುರ್ಯೋಧನನ ತರಹ
ಬಿಟ್ಟ ಬಯಲಲಿ ನಿಂತಿರುವೆ ನೀನು"

- ೨ -

"ಕೆರೆ ಕಟ್ಟೆಗಳನ್ನು ಮುಚ್ಚಿ ಊರು ಕಟ್ಟಿವೆ
ನೀನು ಸೃಷ್ಟಿಸಿದ ತ್ಯಾಜ್ಯವನ್ನು ನದಿ
ಒಡಲಿಗೆ ಸುರಿದು ಅಮೃತಕ್ಕೆ ವಿಷ ಉಣಿಸಿದೆ.
ಭಗೀರಥನ ವೇಷ ಕಟ್ಟಿ ಕುಣಿದರೇನು ? ಹನಿ
ನೀರು ಹುಟ್ಟಿಸದೆ ಹೋದೆ. ಪಶು-ಪಕ್ಷಿಗಳ
ನೀರು ಕಿತ್ತಿ ಬಾಟಲಿಯಲಿ ತುಂಬಿ
ದುಡ್ಡು ಮಾಡಿದೆ."

- ೩ -

"ನೆಲದಾಳದ ಎದೆ ಬಗೆದು ಖಜಾನೆ ಲೂಟಿ
ಹೊಡೆದು ಗರ್ಭವನೆ ಬಂಜರು ಮಾಡಿದೆ
ನಿಸರ್ಗ ನಿಯಮಗಳಿಗೆ ನೀ ಯಮನಾಗಿ
ಅಲ್ಲೋಲ - ಕಲ್ಲೋಲ ಮಾಡಿದೆ."

- ೪ -

"ತೆನೆ ಖಾಲಿ ಮಾಡಿದ ಮಿಡತೆಯಂತೆ
ಹಾರಿ ಜೊಲ್ಲು ಸುರಿಸುವ ಹನಿ ನಾಲಿಗೆಯಿಂದ
ಅಂತರಿಕ್ಷ ಕಾಯಗಳನ್ನು ಜಾಲಾಡಿದೆ.
ಎಲ್ಲವು ನಿನ್ನದೆಂಬ ಅಹಂಕಾರದಲಿ
ಆಪೋಶನ ತೆಗೆದುಕೊಂಡು
ಆಧುನಿಕ ಅಗಸ್ತ್ಯನಾದೆ."

- ೫ -

"ನೀನೆ ನಡಿಸಿರುವ ಈ ಮಥನದಲ್ಲಿ ಉಕ್ಕುವ
ವಿಷಕ್ಕೆ ಕಂಠವೀವರು ಯಾರು ?
ಮೊದಲ ಬಲಿ ನೀನೆ ಅಲ್ಲಿ
ವೃಕೋದರುದರದ ನಿನ್ನಾಸೆಗೆ ತೃಪ್ತಿಯ
ತೇಗೆಂಬುದೆಲ್ಲಿ? ಚಿನ್ನದ ಮೊಟ್ಟೆ ಇಡುವ
ಕೋಳಿಯ ಗರ್ಭಕ್ಕೆ ಕೈ ಹಾಕಿದ ಮಂಕುದಿಣ್ಣೆ
ನೀನೆಂದಿದ್ದರು ಮಾರಿ ಗುಡಿ ಮುಂದಿನ ಕೋಣ."

ಆನಂದ ಬಿದರಕುಂದಿ
ಮನೆ ನಂ. ೮೨೦/೭೯, ೩ನೇ ಮುಖ್ಯರಸ್ತೆ, ೪ನೇ ವಿಭಾಗ
ರಾಜಾಜಿನಗರ, ಬೆಂಗಳೂರು - ೫೬೦ ೦೧೦

ನಡೆದುಹೋಗಿರುವ ಸತ್ಯ ಘಟನೆಗಳನ್ನು ಮೊದಲ ಭಾಗ ತೆರೆದಿಡುತ್ತದೆ.

ಎರಡನೆಯ ಭಾಗದಲ್ಲಿ ಆರ್ಯರ ಹೃದಯದಲ್ಲೆ ಆಳವಾಗಿ ಬೇರೂರಿರುವ ಪರಮತ ದ್ವೇಷದ ವಿಷಬೀಜ ಹೇಗೆ ಹೆಮ್ಮರವಾಗಿ ದೇಶದುದ್ದಗಲಕ್ಕೂ ಹರಡಿಕೊಂಡಿತು ಎಂಬುದನ್ನು ಸವಿವರವಾಗಿ ಕೊಟ್ಟಿದ್ದಾರೆ. ತಮ್ಮ ಕಾರ್ಯಸಾಧನೆಗೆ ಆರ್ಯೇತರರನ್ನು ಹಿಡಿತಕ್ಕೆ ತಂದುಕೊಳ್ಳಬೇಕೆಂಬ ಅವರ ಹುನ್ನಾರಗಳನ್ನು ಬಯಲುಗೊಳಿಸುತ್ತಾರೆ. 'ಬ್ರಾಹ್ಮಣ ಸಮಾಜದ ಗುಪ್ತಪತ್ರ'ವನ್ನು ಇದಕ್ಕೆ ಸಾಕ್ಷಿಯಾಗಿ ನೀಡಿದ್ದಾರೆ. ತಮ್ಮ ಕಾರ್ಯಸಾಧನೆಯಲ್ಲಿ ಆರ್ಯೇತರರನ್ನು ಸೆಳೆದುಕೊಳ್ಳುವ ಸಲುವಾಗಿ ಗೋಹತ್ಯೆ ನಿಷೇಧ ಎಂಬ ಭಾವನಾತ್ಮಕ ಅಂಶವನ್ನು ಬಿತ್ತಿ ಅದನ್ನು ವಿಜೃಂಭಿಸುವ ಮೂಲಕ ಸಮಸ್ಯೆಯಲ್ಲದ ಸಮಸ್ಯೆಯನ್ನು ಹುಟ್ಟುಹಾಕುತ್ತಾರೆ. ಆದರೆ ಇದೇ ಬ್ರಾಹ್ಮಣರು ವೇದಕಾಲದಲ್ಲಿ ದನದ ಮಾಂಸದ ಮಹಾನ್ ಭಕ್ಷಕರಾಗಿದ್ದರು ಎಂಬ ಅಂಶವನ್ನು ಸ್ವಾಮಿ ವಿವೇಕಾನಂದರಿಂದ ಹಿಡಿದು ಅನೇಕ ಸಂಶೋಧಕರ ವಿಚಾರಗಳಿಂದ ಶ್ರುತಪಡಿಸಿದ್ದಾರೆ.




ಹಿಂದೂರಾಷ್ಟ್ರವಾಗಬೇಕೆಂದು ವಿಷಬೀಜ ಬಿತ್ತಿದ ಸಂಘಪರಿವಾರದ ಸಾವರ್ಕರ್ ದೇಶದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ತಾನು ಸಂಕಷ್ಟಕ್ಕೆ ಸಿಲುಕಿಗೊಂಡಾಗ ಆತ್ಮಾಭಿಮಾನವನ್ನು ಗಾಳಿಗೆ ತೂರಿ ಬ್ರಿಟಿಷರಿಗೆ ಶರಣಾದ ಐತಿಹಾಸಿಕ ಅಂಶವೂ ಈ ಕೃತಿಯಲ್ಲಿ ಸ್ಫೋಟಗೊಂಡಿದೆ.

ಈ ಕಾರಣದಿಂದಲೇ ವಿವೇಕಾನಂದರು, ''ಬನ್ನಿ, ಮನುಷ್ಯರಾಗಿ! ಪ್ರಗತಿಗೆ ಯಾವಾಗಲೂ ವಿರುದ್ಧವಾಗಿರುವ ಪುರೋಹಿತರನ್ನು ಒದ್ದೋಡಿಸಿ. ಅವರೆಂದಿಗೂ ತಿದ್ದಿಕೊಳ್ಳುವುದಿಲ್ಲ, ಅವರ ಹೃದಯ ಎಂದಿಗೂ ವಿಶಾಲ ಆಗುವುದಿಲ್ಲ. ಶತಶತಮಾನಗಳಿಂದ ಬಂದ ಮೂಢನಂಬಿಕೆ ಮತ್ತು ದಬ್ಬಾಳಿಕೆಯ ಸಂತಾನ ಅವರು! ಮೊದಲು ಪುರೋಹಿತಶಾಹಿಯನ್ನು ಬೇರುಸಹಿತ ಕಿತ್ತೊಗೆಯಿರಿ. ಬನ್ನಿ, ಮನುಷ್ಯರಾಗಿ, ಮುಂದೆ ಬನ್ನಿ, ಸಂಕುಚಿತ ಬಿಲಗಳಿಂದ ಹೊರಗೆ ಬನ್ನಿ, ಕಣ್ಣುಬಿಟ್ಟು ಹೊರಗೆ ನೋಡಿ. ಇತರ ಜನಾಂಗಗಳು ಹೇಗೆ ಮುಂದುವರಿಯುತ್ತಿವೆ ಎಂಬುದನ್ನು ನೋಡಿ. ನೀವು ಮನುಷ್ಯರನ್ನು ಪ್ರೀತಿಸುವಿರಾ? ನಿಮ್ಮ ದೇಶವನ್ನು ಪ್ರೀತಿಸುವಿರಾ? ಹಾಗಾದರೆ ಬನ್ನಿ, ಉನ್ನತವಾದ ಕೆಲಸಗಳಿಗಾಗಿ ನಾವು ಹೋರಾಡುವ'' (೬-೮೧) ಎಂದು ನೊಂದು ಕರೆ ನೀಡಿದ್ದಾರೆ. ಸರ್ವಜನಾಂಗವನ್ನೂ ಒಂದಾಗಿ ಕಂಡ ಮನುಕುಲದ ಮಹಾನ್ ಪ್ರೇಮಿಯಾದ ಅಂಥ ಸ್ವಾಮಿ ವಿವೇಕಾನಂದರನ್ನು 'ಹಿಂದೂ ಸನ್ಯಾಸಿ' ಎಂದು ಕರೆದು ಅವರ ಸರ್ವಧರ್ಮಸಮನ್ವಯದ ವಿಶ್ವವ್ಯಾಪಕ ದೃಷ್ಟಿಯನ್ನು ಸಂಕುಚಿತಗೊಳಿಸಿ ಅನ್ಯಧರ್ಮೀಯರ ಮೇಲೆ ಎತ್ತಿಕಟ್ಟುವುದರ ಮೂಲಕ ಮಾಡುವ ಅವರ ನಾಚಿಕೆಗೆಟ್ಟ ನಡೆಯನ್ನೂ ಈ ಕೃತಿ ಅನಾವರಣಗೊಳಿಸುತ್ತದೆ.

ರಾಮಮಂದಿರದ ಹೆಸರಿನಲ್ಲಿ ಇಟ್ಟಿಗೆಯ ರಾಜಕೀಯ ಮಾಡಿ ಹೇಗೆ ಹಣಸಂಗ್ರಹಿಸುತ್ತಾರೆ, ರಾಮರಥಯಾತ್ರೆಯ ಮೂಲಕ ದೇಶದಲ್ಲಿ ಹೇಗೆ ರಾಜಕೀಯ ರಾಡಿ ಎಬ್ಬಿಸುತ್ತಾರೆ, ಸತ್ತ ಸಮಸ್ಯೆಯನ್ನು ಜೀವಂತಗೊಳಿಸಿ ಬಾಬ್ರಿ ಮಸೀದಿಯನ್ನು ಕೆಡುವುವುದರ ಮೂಲಕ, ಬಾಬಾಬುಡನ್‌ಗಿರಿಯನ್ನು ದಕ್ಷಿಣದ ಅಯೋಧ್ಯೆಯನ್ನಾಗಿಸುತ್ತೇವೆ ಎನ್ನುವುದರ ಮೂಲಕ ಧಾರ್ಮಿಕ ಸಂಘರ್ಷವನ್ನು ಹುಟ್ಟುಹಾಕಿ ಉದಾತ್ತವಾದ ದೇಶದ ಧಾರ್ಮಿಕ ಸಮನ್ವಯತೆಗೂ ಹೇಗೆ ಭಂಗತರುತ್ತಾರೆ, ಇಷ್ಟು ಸಾಲದೆಂಬಂತೆ ಗೋದ್ರಾ ದುರಂತಕ್ಕೆ ನಾಂದಿಹಾಡಿ ಗುಜರಾತಿನ ನರೇಂದ್ರ ಮೋದಿ ಹಿಟ್ಲರ್‌ನ ಪ್ರತಿರೂಪವಾಗಿ ಹರಿಸಿದ ರಕ್ತ, ಇದರ ಹಿನ್ನೆಲೆಯಲ್ಲಿ ಇದ್ದ ಸಂಘಪರಿವಾರದ ಕೈವಾಡಗಳು, ಬಿಲ್ಲು, ಬಾಣ, ತ್ರಿಶೂಲಗಳ ಹಂಚಿಕೆ ಮುಂತಾದ ಮಹತ್ವದ ವಿಚಾರಗಳು ಈ ಕೃತಿಯಲ್ಲಿ ಕೆನೆಗಟ್ಟಿ ಬಂದಿವೆ. ಇವರ ಈ ಹೀನಕೃತ್ಯಗಳಿಂದಾಗಿ ಪ್ರತೀಕಾರ ರೂಪವಾಗಿ ದೇಶದುದ್ದಗಲ ಭಯೋತ್ಪಾದನೆಯ ಭೂತ ಕಾಡಲು ಹತ್ತಿದೆ.

ಈ ಎಲ್ಲವನ್ನೂ ಎಸಗುತ್ತಿರುವ ಸಂಘಪರಿವಾರದವರನ್ನು ಕುರಿತು 'ಸಂಘಪರಿವಾರದವರಲ್ಲಿ ವಿನಮ್ರ ವಿನಂತಿ' ಎಂಬ ಅವತರಣಿಕೆಯಲ್ಲಿ ಮಾಡಿಕೊಂಡಿರುವ ಮನವಿ ಡಾ॥ ಕೋ. ಚೆನ್ನಬಸಪ್ಪನವರು ಮಾನವೀಯ ಅಂತಃಕರಣದಿಂದ ಮಾಡಿಕೊಂಡಿರುವುದಾಗಿರುತ್ತದೆ. ''ಯಾರೂ ಯಾವ ಧರ್ಮವನ್ನೂ, ಧರ್ಮದವರನ್ನೂ ಈ ದೇಶದಿಂದ ಕದಲಿಸಲು ಸಾಧ್ಯವಿಲ್ಲ. ಏಕೆಂದರೆ ಎಲ್ಲ ಧರ್ಮದವರೂ ಈ ದೇಶದ ಮಣ್ಣಿನಲ್ಲಿ ಬೆರೆತು ಒಂದಾಗಿದ್ದಾರೆ. ನಿಮ್ಮ ಸ್ವಾರ್ಥಸಾಧನೆಗಾಗಿ ಧರ್ಮ ಧರ್ಮಗಳ ನಡುವೆ ಹಾಗೂ ಧರ್ಮೀಯರ ನಡುವೆ ದ್ವೇಷದ ಕಿಚ್ಚನ್ನು ಹಚ್ಚಬೇಡಿ. ಅದು ಶ್ರೀರಾಮಚಂದ್ರನ ಘನ ವ್ಯಕ್ತಿತ್ವಕ್ಕೆ, ಆಶಯಕ್ಕೆ ವಿರೋಧಿಯಾದ ನಡೆಯಾಗುತ್ತದೆ, ಆತ್ಮವಂಚನೆಯ ಪಾಪಕೃತ್ಯವಾಗುತ್ತದೆ'' ಎಂಬುದನ್ನು ಮನವರಿಕೆ ಮಾಡುತ್ತಾರೆ. ಏಕೆಂದರೆ ಆತ್ಮವಂಚನೆ ಆತ್ಮಹತ್ಯೆಗಿಂತ ಕ್ರೂರವಾದುದು. ಎಚ್ಚರ ತಪ್ಪಿದರೆ ಅದು ರಾಷ್ಟ್ರವನ್ನೇ ರಕ್ತಮಯವನ್ನಾಗಿಸಲು ಪ್ರೇರೇಪಿಸಿಬಿಡುತ್ತದೆ.

ಈ ಆತ್ಮವಂಚಕ ವೈದಿಕಧರ್ಮ ಹಿಂದೂಧರ್ಮವೆಂಬ ಕವಚದಲ್ಲಿ ಅವಿತು ಎಸಗುತ್ತಿರುವ ಅವಘಡಗಳನ್ನು ನೋಡಿ ನೋಡಿ ನಾಗರಿಕ ಸಮಾಜ ನಾಚಿ ತಲೆತಗ್ಗಿಸುವಂತಾಗಿದೆ. ಈ ವೈದಿಕ ಸಂಸ್ಕೃತಿಯ ಅಂತರಂಗವನ್ನು ಅರಿತ ಪೂರ್ಣಚಂದ್ರ ತೇಜಸ್ವಿ ಅವರು, ''ವೈದಿಕ ಸಂಸ್ಕೃತಿ ಭಾರತಕ್ಕೆ ಅಂಟಿಕೊಂಡ, ಸದಾ ಅವನತಿಯ ಮತ್ತು ಸೃಷ್ಟಿ ವಿರೋಧಿಯಾದ ಒಂದು ಮುದಿ ಬಂದಳಿಕೆ'' ಎಂದು ಸರಿಯಾಗಿಯೆ ಗುರುತಿಸಿದ್ದಾರೆ. ''ಹಿಂದೂಧರ್ಮ ಹಾಳಾಗಲು ಕಾರಣವಾಗಿರುವುದು ಬ್ರಾಹ್ಮಣಶಾಹಿ ಎಂಬ ವಿಷ'' ಎಂದು ಡಾ॥ ಅಂಬೇಡ್ಕರ್ ತಮ್ಮ 'ಜಾತಿವಿನಾಶ' ಕೃತಿಯಲ್ಲಿ ಶ್ರುತಪಡಿಸಿದ್ದಾರೆ.

೪

ಈ ಕೃತಿಯ ಒಟ್ಟು ಪ್ರೇರಣೆ ಎಂದರೆ ಭಾರತೀಯರಾದ ನಾವು ಈಗ ಎಚ್ಚೆತ್ತು ಯೋಚಿಸಿ ಕಾರ್ಯಪ್ರವೃತ್ತರಾಗಬೇಕೆಂಬುದು. ಸ್ವಾತಂತ್ರ್ಯಪೂರ್ವದಲ್ಲಿ ಬಂಕಿಮಚಂದ್ರ ಚಟರ್ಜಿಯವರು ಹೋರಾಡಿದ ಹಿಂದೂಧರ್ಮದ ಹೋರಾಟದ ಸ್ವರೂಪಕ್ಕೂ ಈಗ ಸಂಘಪರಿವಾರದವರು ಹೋರಾಡುತ್ತಿರುವ ಸ್ವರೂಪಕ್ಕೂ ಭೂಮಿ ಆಕಾಶಗಳ ಅಂತರವಿದೆ. ಹಿಂದೂಧರ್ಮದ ಕವಚದೊಳಗೆ ಹೊಕ್ಕಿರುವ ಗೋಮುಖ ವ್ಯಾಘ್ರಗಳನ್ನು ಕುರಿತು ವಿವೇಕಾನಂದರು,

> ''ನೀಚರೂ ಕುತಂತ್ರಿಗಳೂ ಆದ ಪುರೋಹಿತರು ಎಲ್ಲಾ ವಿಧದ ಮೂಢನಂಬಿಕೆಗಳನ್ನೂ ವೇದ ಮತ್ತು ಹಿಂದೂಧರ್ಮದ ಸಾರ ಎಂದು ಬೋಧಿಸುತ್ತಾರೆ. ಈ ಠಕ್ಕುಗಾರರಾದ ಪುರೋಹಿತರಾಗಲೀ ಅಥವಾ ಅವರ ತಾತ ಮುತ್ತಾತಂದಿರಾಗಲೀ ಕಳೆದ ೪೦೦ ತಲೆಮಾರುಗಳಿಂದಲೂ ವೇದದ ಒಂದು ಭಾಗವನ್ನೂ ನೋಡಿಲ್ಲ. ಮೂಢಾಚಾರಗಳನ್ನು ಅನುಸರಿಸಿ ಹೀನಸ್ಥಿತಿಗೆ ಬರುತ್ತಾರೆ. ಕಲಿಯುಗದಲ್ಲಿ ಬ್ರಾಹ್ಮಣ ವೇಷದಲ್ಲಿರುವ ಈ ರಾಕ್ಷಸರಿಂದ ಮುಗ್ಧಜನರನ್ನು ಆ ದೇವರೇ ಕಾಪಾಡಬೇಕು.'' (೬-೬೬)
>
> – ಎಂದು ಅವರ ರಾಕ್ಷಸ ಗುಣವನ್ನು ಪರಿಚಯಿಸಿದ್ದಾರೆ.

ಏಳು ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!

– ಎಂದು ವಿವೇಕಾನಂದರು ಸನ್ಯಾಸಿಗಳಿಗೆ ತಾಯಿನಾಡನ್ನು ಎಚ್ಚರಿಸುವ ಕರೆಯನ್ನು ಕೊಟ್ಟರು. ಆದರೆ ಸಂಘಪರಿವಾರದ ಬಾಲಂಗೋಚಿಗಳಾಗಿರುವ ಈ ದೇಶದ ಕಾವಿಧಾರಿಗಳು (ಸನ್ಯಾಸಿಗಳು) ಮಾಡಲಾಗದ ಆ ಕರೆಯನ್ನು ಡಾ॥ ಕೋ. ಚೆ. ಅವರು ಈ ಕೃತಿಯ ಮೂಲಕ ಮಾಡಿದ್ದಾರೆ. ಇದು 'ಭಾರತದಲ್ಲಿ ಕೋಮುದ್ವೇಷ'ದ ಕೃತಿಯ ಹೆಗ್ಗಳಿಕೆ. ಇಡೀ ವಿಶ್ವದಲ್ಲಿಯೆ ಸರ್ವಧರ್ಮ ಸಮನ್ವಯದ ಪುಣ್ಯಭೂಮಿ ಎಂಬ ಕೀರ್ತಿಗೆ ಪಾತ್ರವಾಗಿರುವ ಈ ಭಾರತದೇಶವನ್ನು ಪ್ರೀತಿಸುವ ಎಲ್ಲರೂ – ಅದರಲ್ಲೂ ಯುವಜನತೆ – ತಪ್ಪದೆ ಓದಲೇಬೇಕಾದ ಸಕಾಲಿಕ ಹಾಗೂ ಅಪೂರ್ವ ಕೃತಿ ಇದಾಗಿದೆ.

ಜ. ಹೊ. ನಾರಾಯಣಸ್ವಾಮಿ
ನಂ. ೨೦೬೪/ಅ, 'ಮಾನವ', ಉತ್ತರ ಬಡಾವಣೆ
ಹಾಸನ - ೫೭೩ ೨೦೧

# ನಿರಂಜನ ಕವಿಯ 'ಕಂಚಿ ಪುರಾಣ'

ಕವಿ ನಿರಂಜನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಶಾಂತ ನಿರಂಜನ ಎಂದು ದಾಖಲಿಸಲ್ಪಟ್ಟಿದ್ದಾನೆ. ಈತನ ಕಾಲ ಸುಮಾರು ಕ್ರಿ. ಶ. ೧೫೦೦. 'ಕಂಚಿ ಪುರಾಣ' ಈತನ ಮೊದಲ ಕಾವ್ಯ; ಇನ್ನೊಂದು 'ಅಬ್ಬಲೂರು ಚರಿತೆ'. 'ಕಂಚಿ ಪುರಾಣ' ಭಾಮಿನಿ ಷಟ್ಪದಿ ಮತ್ತು ಅಲ್ಲಲ್ಲಿ ರಗಳೆ ಛಂದಸ್ಸಿನಲ್ಲಿ ರಚಿತವಾಗಿದೆ; 'ಅಬ್ಬಲೂರು ಚರಿತೆ' ಸಾಂಗತ್ಯ ಕಾವ್ಯ.

'ಕಂಚಿ ಪುರಾಣ' ವಸ್ತು, ನಿರೂಪಣೆ ಹಾಗೂ ಐತಿಹಾಸಿಕತೆಯಿಂದಾಗಿ ಗಮನ ಸೆಳೆಯುತ್ತದೆ. ಈ ಕಾವ್ಯರಚನೆಗೆ ನಿರ್ದಿಷ್ಟ ಉಮೇದು ಮತ್ತು ಉದ್ದಿಶ್ಯಗಳಿವೆ; ಹಾಗಾಗಿ ಈ ಕಾವ್ಯದ ಎರಡನೇ ಆಯಾಮವಾಗಿ ಈ ಕೆಳಕಂಡ ಅಂಶಗಳು ಕಂಡುಬರುತ್ತವೆ :

೧. ಶಿಲ್ಪಿಗಳಿಗಿರುವ ವೇದಕಾಲೀನ ಪ್ರಾಚೀನತೆ
೨. ಶಿಲ್ಪಿಗಳು ಆಳರಸರಾಗಿದ್ದರೆಂಬ ಮಾಹಿತಿ
೩. ವಿಶ್ವಕರ್ಮ ಬ್ರಾಹ್ಮಣರ ಇತಿಹಾಸ
೪. ಒಂದು ಕಾಲಘಟ್ಟದ ಐತಿಹಾಸಿಕ ಸಂದರ್ಭದ ನಿರ್ವಚನ
೫. ಸುಂಕ, ಶಿಲ್ಪಿಗಳ ಸ್ವಾತಂತ್ರ್ಯ, ವಾಣಿಜ್ಯ, ವ್ಯಾಪ್ತಿಗಳ ನಿಯಂತ್ರಣದ ಮಾಹಿತಿ
೬. ಬಸವಣ್ಣ ಬಿಜ್ಜಳರ ಉಲ್ಲೇಖ
೭. ಶಿಲ್ಪಿಗಳ ಆಡಳಿತ, ಕಲಾ ಸಾಮರ್ಥ್ಯ.

ಒಟ್ಟು ಹದಿನಾರು ಸಂಧಿಗಳಲ್ಲಿ ಅಡಕವಾಗಿರುವ ಈ ಕಾವ್ಯ, ಕಲ್ಯಾಣದಲ್ಲಿ ಬಿಜ್ಜಳನ ಆಳ್ವಿಕೆಯ ಸಂದರ್ಭವೊಂದರಿಂದ ಆರಂಭವಾಗುತ್ತದೆ. ಬಿಜ್ಜಳ ತನ್ನ ಸಂದೇಹಗಳನ್ನು ತಿಳಿಸಿದಾಗ ಬಸವಣ್ಣ ಅದಕ್ಕೆ ನೀಡಿದ ಉತ್ತರ, ಮಾಹಿತಿ ಎಂಬಂತೆ ನಿರೂಪಣೆ ಸಾಧಿತವಾಗಿದೆ. ಕಾವ್ಯ ಸಮಕಾಲೀನ ಧ್ವನಿ ಒಳಗೊಂಡಿರುವ ಬಗೆಗೆ ನಿದರ್ಶನವಾಗಿ ಬಿಜ್ಜಳ ಬಸವಣ್ಣನನ್ನು ಆಕ್ಷೇಪಿಸುವ ಸಂದರ್ಭವನ್ನು ಗಮನಿಸಬಹುದು. ನಂತರ ಶಿಲ್ಪಿಗಳಿಗೆ 'ಚೋಳರಾಯನ ಮಾನಮರ್ದನ' ಎಂಬ ಬಿರುದು ಬಂದ ಬಗೆ, ಕೃಷ್ಣನ ವಿವರಗಳು, ಕಾರ್ತವೀರ್ಯನ ಕತೆ, ಧ್ವಜ; ಅವುಗಳ ಬಗೆ, ವಿಶಿಷ್ಟತೆ, ಶಿಲ್ಪಿಗಳ ಕದನ ಸಾಮರ್ಥ್ಯ ಮೊದಲಾದ ಅಂಶಗಳು ಕಾವ್ಯದ ಮುಖ್ಯ ಸೆಲೆಯಾಗಿವೆ. ತನ್ನ ಕಾಲ ಸಂದರ್ಭದ ಪ್ರಚಲಿತ ಛಂದಸ್ಸನ್ನು ಕವಿ ಬಳಸಿಕೊಂಡಿರುವ ರೀತಿ ಗಮನಾರ್ಹ; ಕುಮಾರವ್ಯಾಸ ಸಹಜವಾಗಿಯೇ ಅಲ್ಲಲ್ಲಿ ನೆನಪಾಗುವುದು ಕವಿಯ ದೋಷವೇನೂ ಅಲ್ಲ.

## ಕಾವ್ಯದ ವಿಶೇಷ

ಕವಿ 'ಇದು ಐತಿಹಾಸಿಕ' ಎಂದಿರುವುದು, ಶ್ರುತಿ, ಪುರಾಣ, ಮಹಾಕಾವ್ಯಗಳ ಕಥಾನಕಗಳು ಅನುರಣಿಸುವುದು ಗಮನಾರ್ಹ.

ಅಕ್ಕಸಾಲಿಗರು, ಶಿಲ್ಪಿಗಳು, 'ವಿಶ್ವಕರ್ಮ ಬ್ರಾಹ್ಮಣರು', ಅವರ ಹನುಮ ಧ್ವಜ; ಅದು ಬಂದ ಬಗೆ, ಸೃಷ್ಟಿ ಮೀಮಾಂಸೆ, ಅರ್ಧಾಂಗಿಯ ಸೃಷ್ಟಿ, ಸ್ತ್ರೀ ವಿಶೇಷತೆಗಳು, ಕಾರ್ತವೀರ್ಯನ ವಂಶವಿಚಾರ, ಮೊದಲಾದ ಅಂಶಗಳನ್ನು ಮೊದಲ ಬಾರಿಗೆ ಕಾವ್ಯದ ಪರಿಧಿಯಲ್ಲಿ ನಿರ್ವಚಿಸಿರುವುದು ಕಾವ್ಯದ ವೈಶಿಷ್ಟ್ಯವಾಗಿದೆ. ಅಲ್ಲದೆ ಶಿಲ್ಪೋದ್ಯಮ, ಮಾರಾಟ ವ್ಯವಸ್ಥೆ, ಸುಂಕ ಕುರಿತ ವ್ಯಾಜ್ಯಗಳ ಮೇಲೆಯೂ ಕಾವ್ಯ ಬೆಳಕು ಚೆಲ್ಲಿದೆ.

ಅಂತೆಯೇ ಕವಿಗೆ ತನ್ನ ಪ್ರತಿಭೆಯ ಬಗ್ಗೆ ಅಪಾರ ವಿಶ್ವಾಸವಿದ್ದು, ಅದಕ್ಕೆ ಕಾರಣ ತನ್ನ ಕಾವ್ಯ ಒಳಗೊಂಡಿರುವ ಶಾಸ್ತ್ರೀಯ, ಐತಿಹಾಸಿಕ ನೆಲೆ ಎಂದು ಘೋಷಿಸಿದ್ದಾನೆ. ಪುರಾಣ, ಕಾವ್ಯಗಳ ಒಳಗೊಳ್ಳುವಿಕೆ ಕಾವ್ಯಕ್ಕೆ 'ಸಾಹಿತ್ಯ'ದ ಆಯಾಮ ಕಲ್ಪಿಸಿದೆ. ಶಂಕರಾಚಾರ್ಯರ ಮಾಹಿತಿ, ಅವರು ವಿಶ್ವಕರ್ಮ ಬ್ರಾಹ್ಮಣ ವಂಶಜರೆಂಬ ನಿಲುವು ಹೊಸತು. ಅಲ್ಲದೆ ಧರ್ಮಪಾಲನ ಉಲ್ಲೇಖ, ಬಸವ-ಬಿಜ್ಜಳರ ವಾಗ್ವಾದಗಳಿಂದ ಕಾವ್ಯಕ್ಕೆ ರಾಜಕೀಯ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಆಯಾಮಗಳು ದಕ್ಕಿವೆ. ಅಪರೂಪಕ್ಕೆಂಬಂತೆ ದುಡಿದು ಗಳಿಸುವ ಬ್ರಾಹ್ಮಣರ ವಿವರಗಳು ಈ ಕಾವ್ಯದಲ್ಲಿ ದಾಖಲಾಗಿದ್ದು, ಅದೇ ಕಾರಣಕ್ಕೆ ಅವು ಉಲ್ಲೇಖಾರ್ಹವೂ ಆಗಿವೆ. ಕಾವ್ಯ ಒಳಗೊಂಡಿರುವ ಅನೇಕ ಉಪಾಖ್ಯಾನಗಳು ಕಾವ್ಯದ ಓದಿಗೆ ಓಟ ಮತ್ತು ಓಘ ನೀಡಿವೆ. 'ಕನ್ನಡಿ' ಕುರಿತ ಸೊಗಸಾದ ನಿರ್ವಚನ ಕುತೂಹಲಕರವಾಗಿದೆ.

ಅರ್ಥ, ಲಾಲಿತ್ಯ, ಗೇಯತೆ, ಧ್ವನಿ, ಸಮಕಾಲೀನತೆ ಮತ್ತು 'ಅಸ್ತಿತ್ವ' ಪ್ರಜ್ಞೆಯನ್ನು ಒಳಗೊಳ್ಳುವ ಮೂಲಕ ಈ ಕಾವ್ಯ ಗಮನೀಯವೆನಿಸುತ್ತದೆ. ಭಾಷಿಕವಾಗಿಯೂ ಸಫಲ ರಚನೆಯಾಗಿದೆ. ಕನ್ನಡದ ಬೆಡಗು, ಆಡುಮಾತಿನ ಬನಿ ಕವಿಗೆ ಸಿದ್ಧಿಸಿವೆ. ಕಾವ್ಯ ಲಕ್ಷಣಗಳನ್ನು ಧಿಕ್ಕರಿಸಿಯೂ – ನಾಯಕಿ, ಸ್ತ್ರೀಪಾತ್ರಗಳಿಲ್ಲದಿರುವುದು – 'ಕಾವ್ಯ'ವಾಗಿರುವುದೇ ಈ ಕೃತಿಯ ವಿಶೇಷತೆ. 'ರಸ'ದ ದೃಷ್ಟಿಯಿಂದ ನೋಡಿದಾಗ 'ಉದ್ದಿಶ್ಯ ಮತ್ತು ನಿರ್ದಿಷ್ಟತೆ'ಗೆ ಪಕ್ಕಾಗಿ ಸಾಹಿತ್ಯಿಕ ಆಶಯಗಳಿಂದ ಕೊಂಚ ದೂರ ನಿಂತಿದೆ ಎನಿಸುತ್ತದೆ.

## ಕೃತಿ ಸಂಪಾದನೆ ಕುರಿತು

ಡಾ|| ಜಿ. ಜ್ಞಾನಾನಂದರು ವಿದ್ವಾಂಸರು; ನಿರ್ದಿಷ್ಟ ಕ್ಷೇತ್ರದಲ್ಲಿ ಆಳವಾದ ಪಾಂಡಿತ್ಯ ಹೊಂದಿದವರು. ಅವರ ಈ ಸಂಪಾದನೆ 'ಸಾಹಿತ್ಯ ಕೃತಿ'ಯೊಂದು 'ಸಂಪಾದಿತ'ವಾಗ ಬೇಕಾದ 'ರೀತಿ'ಗೆ ಮಾದರಿ ರೂಪದಲ್ಲಿದೆ. ಸುಮಾರು ಇಪ್ಪತ್ತು ವರ್ಷಗಳ ದೀರ್ಘ ಶೋಧನೆ, ಅಧ್ಯಯನಗಳ ಶ್ರಮ ಈ ಕೃತಿಯ ಸಂಪಾದನೆಗೆ ವ್ಯಯವಾಗಿದೆ.

ಅಪರೂಪದ್ದೂ, ವಿಸ್ತಾರವಾದ್ದೂ ಆದ ಪ್ರಸ್ತಾವನೆ ಸಂಪಾದಕರ ಜ್ಞಾನ, ಶ್ರದ್ಧೆ ಹಾಗೂ ಸಾಹಿತ್ಯ ಪ್ರೀತಿಯನ್ನು ವ್ಯಂಜಿಸಿದೆ. ಕಾವ್ಯದ ಉದ್ದೇಶ, ಮೂಲ, ಆಧಾರ, ಆಕರ, ಆಯಾಮ, ವಸ್ತು, ಜೋಡಣೆ, ಸಂಕಲನ, ಭಿನ್ನತೆ, ಕವಿಯ ಕಾಲ, ಕಾವ್ಯದ ಐತಿಹಾಸಿಕತೆ, ಕಾವ್ಯಸಾರ, ಕಾವ್ಯದ ಮೌಲ್ಯ ಮೊದಲಾದ ಅಂಶಗಳನ್ನು ಸರಳವಾಗಿ, ವಿವರವಾಗಿ ದಾಖಲಿಸಿರುವ ಸಂಪಾದಕರು ಅಲ್ಲಲ್ಲಿ ನೀಡಿರುವ ಅಭಿಪ್ರಾಯ ಮೌಲ್ಯಮಾಪನದಂತೆ ಭಾಸವಾಗುತ್ತದೆ; ಸಮರ್ಥನೀಯವಾಗಿದೆ. ಅವೆಂದರೆ :

೧. ಕಿನ್ನರಿ ಬ್ರಹ್ಮಯ್ಯನ ವಿಚಾರ.
೨. ಧ್ವಜ ಮಾಹಿತಿ.
೩. ಸೃಷ್ಟಿ ಮೀಮಾಂಸೆ ಕುರಿತ ಜಿಜ್ಞಾಸೆ.
೪. ಕಾರ್ತವೀರ್ಯನ ವಂಶ ವಿಚಾರ ಕುರಿತ ವಿಶ್ಲೇಷಣೆ.
೫. ಕಾಮಾಕ್ಷಿದೇವಿಯ ಮುಂದಿರುವ ಶಾಸನ ಕುರಿತ ವಿವರಣೆ.
೬. ''ಶಿಲ್ಪಿಗಳು ತಾವು ತಯಾರಿಸಿದ ವಸ್ತುಗಳನ್ನು ತಾವೇ ಮಾರಾಟ ಮಾಡುವುದು ಪ್ರಾಚೀನ ಭಾರತದಲ್ಲಿ ರೂಢಿಯಲ್ಲಿತ್ತು. ಅದಕ್ಕೆ ಸಂಬಂಧಿಸಿದ ಉದಂತವೇ ಕಂಚಿ ಪುರಾಣ.''
೭. ಬಸವಣ್ಣನ ಆಲೋಚನೆ ಮತ್ತು ಕ್ರಿಯೆ, ಕುರಿತ ಮಾತು.
೮. ''ಈ ಕೃತಿಯು ಸ್ವಲ್ಪ ವ್ಯತ್ಯಾಸದೊಂದಿಗೆ ವೀರಶೈವ ಸಾಹಿತ್ಯದ ಬಹುಪಾಲು ಕೃತಿಗಳಲ್ಲಿ ದೊರೆಯುತ್ತದೆ.''
೯. ''ಇದೇ ಕಾರಣದಿಂದ ಶ್ರೇಷ್ಠ ಖಂಡಕಾವ್ಯವಾಗಬಹುದಾಗಿದ್ದ 'ಕಂಚಿ ಪುರಾಣ'ದ ಮೌಲ್ಯ ಇಳಿದಿದೆ. ಕಥಾ ವಿನ್ಯಾಸ ದೋಷ, ಕಾಲಮಾನದ ಪರಿವೆ ಇಲ್ಲದೆ ಹೆಸರುಗಳನ್ನು ಬಳಸಿರುವುದು ಬಿಟ್ಟರೆ ಕಾವ್ಯ ಮಾತ್ರ ಉತ್ತಮವಾದದ್ದು.''
೧೦. ತೆಲುಗು ಕಾವ್ಯ ಪರಂಪರೆಯ ವಿಶ್ಲೇಷಣೆ ಮತ್ತು 'ಕಂಚಿ ಪುರಾಣ'ದ ತುಲನೆ, ತೆಲುಗು ಕಾವ್ಯ ಕುರಿತ ಮಾತು.
೧೧. ''ಆದ್ದರಿಂದಲೇ ಶಿವಭಕ್ತರಾಗಿದ್ದ ವಿಶ್ವಕರ್ಮ ಬ್ರಾಹ್ಮಣರೆಲ್ಲರೂ ವೀರಶೈವ ಧರ್ಮದ ಆರಂಭದ ಕಾಲದಲ್ಲಿ ಅದರ ನೆರವಿಗೆ ನಿಂತರು.''
೧೨. ''ಕಂಚಿ ಪುರಾಣವು ವ್ಯಾಪಕವಾಗಿ ವಿಶ್ವಕರ್ಮ ಬ್ರಾಹ್ಮಣ ಸಂಪ್ರದಾಯಕ್ಕೆ ಸೇರಿರುವ ಐತಿಹ್ಯವನ್ನೂ ಗರ್ಭೀಕರಿಸಿಕೊಂಡಿರುವ ಕಾವ್ಯ.''
೧೩. 'ಕಂಚಿ ಪುರಾಣ'ವನ್ನು ಈ ಕವಿ ಮೊದಲು ಬರೆದು ನಂತರವೇ 'ಅಬ್ಬಲೂರು ಚರಿತೆ'ಯನ್ನು ಬರೆದಿದ್ದಾನೆ.''
೧೪. 'ಕಂಚಿ ಪುರಾಣ'ಕ್ಕೆ ಕನ್ನಡ ವಿದ್ವಾಂಸರಿಂದ ದೊರೆಯಬೇಕಾಗಿದ್ದ ಮನ್ನಣೆ ಇದುವರೆವಿಗೂ ದೊರೆತಿಲ್ಲ. ಅದರ ಫಲವಾಗಿ ಇಲ್ಲಿ ಪ್ರಸ್ತಾಪಿತ ಸಂಗತಿಗಳು ಕನ್ನಡ ವಿದ್ವತ್ ಲೋಕವನ್ನು ಇದುವರೆವಿಗೂ ತಲುಪಿಲ್ಲ.''

ಡಾ|| ಎಸ್. ಪ್ರಸಾದಸ್ವಾಮಿ

(ಪುಟ ೫೩ಕ್ಕೆ)

# ಹೊಸ ಬಾಳಿಗೆ ಹೊರಟ ಮಗಳಿಗೆ...

## ಶರೀಫ, ವಿ. ಸೀ., ಕಂಬಾರರ ಕವಿತೆಗಳನ್ನು ಕುರಿತು

ಶಿವಕುಮಾರ್ ಕಂಪ್ಲಿ



ಪ್ರಸ್ತುತ ಲೇಖನದಲ್ಲಿ ವಿವಾಹ ಕುರಿತ ವಿಕಾಸ ಕ್ರಮವನ್ನು ಅರಿಯಲಿಕ್ಕಾಗಿ ಸುಮಾರು ನೂರು ವರ್ಷಗಳ ಅಂತರದಲ್ಲಿ ಮೂರು ಕವಿಗಳೂ ಹೇಗೆ ವಿವಾಹದ ಕ್ರಿಯೆಯನ್ನು ನೋಡಿದ್ದಾರೆ ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಶಿಶುನಾಳ ಶರೀಫ ವಿ. ಸೀತಾರಾಮಯ್ಯ ಮತ್ತು ಚಂದ್ರಶೇಖರ ಕಂಬಾರರು ವಿವಾಹ ಕುರಿತ ವಸ್ತುವನ್ನು ಹೇಗೆ ಭಿನ್ನ ಭಿನ್ನವಾಗಿ ಕಂಡಿದ್ದಾರೆಂಬುದನ್ನು ನೋಡಬಹುದಾಗಿದೆ. ಅವರ ಕವಿತೆಗಳೆಂದರೆ, 'ಅಳಬ್ಯಾಡ ತಂಗೀ ಅಳಬ್ಯಾಡ', 'ಮನೆ ತುಂಬಿಸುವುದು', 'ಹೊಸಬಾಳಿಗೆ ಹೊರಟ ಮಗಳಿಗೆ'.

ವಿವಾಹ ಮತ್ತು ಕುಟುಂಬಗಳು ಪರಸ್ಪರ ಪೂರಕವಾದ ಹಾಗೂ ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆಗಳಾಗಿವೆ. ಮನೋಜೈವಿಕ ಆಧಾರಗಳ ಮೇಲೆ ರಚಿತವಾಗಿರುವ ಈ ಸಂಸ್ಥೆಗಳು ಸಾಮಾಜಿಕ ವ್ಯವಸ್ಥೆಯ ಕೇಂದ್ರ ಬಿಂದುಗಳಿದ್ದಂತೆ.

''ಕುಟುಂಬದ ಕಟ್ಟಡಕ್ಕೆ ಮದುವೆಯೇ ಮಹಾದ್ವಾರ. ಕುಟುಂಬದಲ್ಲಿ ಕಾಣಬರುವ ಎಲ್ಲಾ ಸಂಬಂಧಗಳನ್ನು ನಿರ್ದೇಶಿಸುವುದು ಮದುವೆಯೇ. ಹಲವಾರು ವ್ಯಕ್ತಿಗಳನ್ನು ಒಂದು ಆರ್ಥಿಕ ನೆಲೆಯಲ್ಲಿ ನಿಲ್ಲಿಸಿ ಅವರ ಸುತ್ತಲೂ ಸಾಮಾಜಿಕ, ಧಾರ್ಮಿಕ ಹಿನ್ನೆಲೆಯುಳ್ಳ ಬಲೆ ಹೆಣೆದು ಅವರ ಬಾಳಿಗೊಂದು ಅರ್ಥವನ್ನೂ, ಸಾರ್ಥಕತೆಯನ್ನೂ, ಸ್ವಾರಸ್ಯವನ್ನೂ ಒದಗಿಸಿ, ಕುಟುಂಬವನ್ನು ಸಾಮಾಜಿಕ ಸಂದರ್ಭಕ್ಕೆ ಸಂಯೋಜಿಸಿ ಅದರ ವೈಶಿಷ್ಟ್ಯವನ್ನು ಉಳಿಸಿಕೊಡುವುದು ಮದುವೆ. ಈ ದೃಷ್ಟಿಯಿಂದ ಮದುವೆಯನ್ನು ಕುಟುಂಬದ ಪೂರ್ವಸಿದ್ಧತೆ ಎನ್ನಬಹುದು.''

''ಪುರುಷನಿಲ್ಲದವಳ ಬಾಳುವೆ ನೀರೊಳಕ್ಷರವ ಬರೆದಂತೆ, ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆಯ ಹೊಯ್ದಂತೆ'' ಎಂಬ ನಾಣ್ನುಡಿಗಳು ವಿವಾಹವೆಂಬುದು ಅತಿ ಮುಖ್ಯವಾದ ಶರೀರ-ಸಂಸ್ಕಾರ ಎಂಬುದನ್ನು ತಿಳಿಸುತ್ತವೆ. ಹಿಂದೂ ಪರಂಪರೆಯಲ್ಲಿ ವಿವಾಹವನ್ನು ವ್ಯಾವಹಾರಿಕ ಅಥವಾ ಪ್ರಾಪಂಚಿಕ ದೃಷ್ಟಿಗಿಂತಲೂ ಆಧ್ಯಾತ್ಮಿಕ, ನೈತಿಕ ಹಾಗೂ ಪಾರಮಾರ್ಥಿಕ ದೃಷ್ಟಿಯಿಂದಲೂ ಅರ್ಥೈಸಲಾಗುವುದು. ಆದ್ದರಿಂದಲೇ ಹಿಂದೂ ವಿವಾಹವು ಒಂದು ಪವಿತ್ರವಾದ ಧಾರ್ಮಿಕ ವಿಧಿ ಎಂದೆನಿಸಿಕೊಂಡಿದೆ. ಈಗಲೂ ಹಿಂದೂ ವಿವಾಹದಲ್ಲಿ ಕನ್ಯಾದಾನದ ಕಲ್ಪನೆಯು ಮಹತ್ವಪೂರ್ಣದ್ದೆನಿಸಿದೆ. ವೈವಾಹಿಕ ಪ್ರಕ್ರಿಯೆಯು ಸಾಕಷ್ಟು ಬದಲಾವಣೆ ಹೊಂದುತ್ತಾ ಹೊರಟಿದೆ. ಬಾಲ್ಯ ವಿವಾಹದಿಂದ ಪ್ರೌಢ ವಿವಾಹದವರೆಗೆ, ಒಳಪಂಗಡದಿಂದ ಹೊರಪಂಗಡ ವಿವಾಹದವರೆಗೆ, ಜಾತಿಯಿಂದ ಅಂತರ್‌ಜಾತಿಯತೆ ಕಡೆಗೆ ಭಿನ್ನ ಭಿನ್ನ ರೀತಿಯಲ್ಲಿ ನಡೆಯುತ್ತಿದೆ. ಸಾಮೂಹಿಕ ವಿವಾಹ, ವಿಧವಾ ವಿವಾಹ, ಗಡಿ, ಭಾಷೆ, ಧರ್ಮವನ್ನು ದಾಟುವ ಇಂಟರ್‌ನೆಟ್ ವಿವಾಹ, ಒಪ್ಪಂದ ವಿವಾಹ ಹೀಗೇ ವಿವಾಹದ ಕ್ರಿಯೆಯ ವಿಕಾಸ, ರೂಪಾಂತರ, ಬದಲಾವಣೆಗಳ ಅಧ್ಯಯನವೇ ಕುತೂಹಲಕಾರಿಯಾದದ್ದು.

ಪ್ರಸ್ತುತ ಲೇಖನದಲ್ಲಿ ವಿವಾಹ ಕುರಿತ ವಿಕಾಸ ಕ್ರಮವನ್ನು ಅರಿಯಲಿಕ್ಕಾಗಿ ಸುಮಾರು ನೂರು ವರ್ಷಗಳ ಅಂತರದಲ್ಲಿ ಮೂರು ಕವಿಗಳು ಹೇಗೆ ವಿವಾಹದ ಕ್ರಿಯೆಯನ್ನು ನೋಡಿದ್ದಾರೆ ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಶಿಶುನಾಳ ಶರೀಫ, ವಿ. ಸೀತಾರಾಮಯ್ಯ ಮತ್ತು ಚಂದ್ರಶೇಖರ ಕಂಬಾರರು ವಿವಾಹ ಕುರಿತ ವಸ್ತುವನ್ನು ಹೇಗೆ ಭಿನ್ನ ಭಿನ್ನವಾಗಿ ಕಂಡಿದ್ದಾರೆಂಬುದನ್ನು ನೋಡಬಹುದಾಗಿದೆ. ಅವರ ಕವಿತೆಗಳೆಂದರೆ, 'ಅಳಬ್ಯಾಡ ತಂಗೀ ಅಳಬ್ಯಾಡ', 'ಮನೆ ತುಂಬಿಸುವುದು', 'ಹೊಸಬಾಳಿಗೆ ಹೊರಟ ಮಗಳಿಗೆ'.

ಶರೀಫರ 'ಅಳಬೇಡ ತಂಗೀ ಅಳಬೇಡ' ಕವಿತೆಯು ೧೮-೧೯ನೇ ಶತಮಾನದ ಅವಿಭಕ್ತ ಕುಟುಂಬ ಕ್ರಮದೊಳಗಿನ ವಿವಾಹವನ್ನು ಪ್ರತಿನಿಧಿಸುತ್ತದೆ. ಅದು ಕೃಷಿಪ್ರಧಾನ ಸಮಾಜ. ಅಲ್ಲಿರುವುದು ಅನೇಕ ಜೋಡಿ ದಂಪತಿಗಳೂ, ಮಕ್ಕಳು, ಮೊಮ್ಮಕ್ಕಳು. ಅದು ಒಂದೇ ಸೂರಿನಡಿಯಲ್ಲಿದ್ದ ಭದ್ರಕೋಟೆ. ಬಾಲ್ಯವಿವಾಹ ಪದ್ಧತಿಯ ಆ ಕಾಲದಲ್ಲಿ ಗಂಡು ಹೆಣ್ಣುಗಳು ಪ್ರತ್ಯೇಕವಾಗಿರುವ ಅವಕಾಶಗಳೇ ಕಡಿಮೆ. ಅಲ್ಲಿ ವಿವಾಹ ಪೂರ್ವನಿರ್ಧರಿತವಾಗಿತ್ತು. ಸಂಗಾತಿಗಳ ಆಯ್ಕೆ ಯಜಮಾನನಿಗೇ ಬಿಟ್ಟದ್ದು. ಆತನದೇ ಅಂತಿಮ ನಿರ್ಣಯ. ಸಮಾಜಶಾಸ್ತ್ರಜ್ಞರು ಅವಕ್ಕಿರುವ ಧಾರ್ಮಿಕ ಕಾರಣಗಳನ್ನು ತಿಳಿಸುತ್ತಾರೆ. ಚ. ನ. ಶಂಕರ್‌ರಾವ್ ತಮ್ಮ 'ಭಾರತೀಯ ಸಮಾಜ' ಎಂಬ ಪುಸ್ತಕದಲ್ಲಿ, ''ಪರಾಶರ ಸ್ಮೃತಿಯ ಪ್ರಕಾರ ೮ ವರ್ಷದ ಬಾಲಕಿಯು 'ಗೌರಿ' ಎಂಬುದಾಗಿ, ಒಂಭತ್ತು ವರ್ಷದಾಕೆಯು 'ರೋಹಿಣಿ' ಎಂಬುದಾಗಿ, ಹತ್ತು ವರ್ಷದಾಕೆ 'ಕನ್ಯಾ' ಎಂಬುದಾಗಿ ಕರೆಯಲ್ಪಡುವುದಲ್ಲದೆ ಅದಕ್ಕೂ ಹೆಚ್ಚು ವಯಸ್ಸಿನ ಬಾಲಿಕೆಯನ್ನು 'ರಜಸ್ವಲೆ' ಎಂದು ಕರೆಯಲಾಗುವುದು. ಅವಿವಾಹಿತಳಾದ ರಜಸ್ವಲೆಯ ತಂದೆ ತಾಯಿಯರು ಮತ್ತು ಅವಿವಾಹಿತನಾದ ಆಕೆಯ ಹಿರಿಯ ಸೋದರನು ನರಕಕ್ಕೆ ಹೋಗುವರೆಂದು ವಿವರಿಸುವ ಪರಾಶರ ಸ್ಮೃತಿಯು ಬಾಲ್ಯವಿವಾಹವನ್ನು ಪ್ರತಿಪಾದಿಸುವುದು. ರಜಸ್ವಲೆಯಾದ ಬಳಿಕ ಆಕೆಯನ್ನು ವಿವಾಹವಾಗುವಾತನನ್ನು 'ವೃಶಾಲಿಯ' (ಕೀಳುಜಾತಿಯ ಕನ್ಯೆ) ಗಂಡನೆಂದು ಸಂಬೋಧಿಸಲಾಗುವುದೆಂದು ತಿಳಿಸುವ ಪರಾಶರ ಸ್ಮೃತಿಯು ಅಂತಹ ವಿವಾಹವು ಪಾಪಯುಕ್ತವಾದುದು

ಮತ್ತು ಸಾಮಾಜಿಕ ಬಹಿಷ್ಕಾರಕ್ಕೆ ಅರ್ಹವಾದುದು ಎಂಬುದಾಗಿಯೂ ತಿಳಿಸುವುದು. ಕೆಲವು ಶಾಸ್ತ್ರಕಾರರ ಇಂತಹ ಆಗ್ರಹಗಳು ಬಾಲ್ಯವಿವಾಹಕ್ಕೆ ಪ್ರಚೋದನೆ ನೀಡಿದವು.''

ಶರೀಫರು ಎರಡು ಧರ್ಮಗಳ ಕರ್ಮಠ ಮೌಢ್ಯಗಳನ್ನು ವಿರೋಧಿಸುತ್ತಲೇ ಬಂದ ತತ್ವಪದಕಾರ. ಶರೀಫರ ಹೆಜ್ಜೆಗಳು ಮೋಕ್ಷ, ವೈರಾಗ್ಯದ ಹಾದಿಯೊಳಗೆ ಹೊರಟಾಗಲೂ ಅವರ ಕಣ್ಣುಗಳು ಸಮಾಜದ ಸುತ್ತಲೂ ಹರಿದಾಡಿವೆ. ಆಚರಣೆ, ಜವಾಬ್ದಾರಿ ಎಂಬ ಪದಗಳು ಕೆಲವೊಮ್ಮೆ ಹೇಗೆ ಅನರ್ಥಕಾರಿ ಕಾರಣಕ್ಕೆ ಹಾದಿಯಾಗುತ್ತವೆ ಎಂಬುದೇ ಶರೀಫರ 'ಅಳಬೇಡ ತಂಗಿ ಅಳಬೇಡ' ಕವಿತೆಯ ನಿಲುವು.

ತನ್ನ ತವರಿನಲ್ಲಿ ಸಂಪೂರ್ಣ ಸ್ವಾತಂತ್ರ್ಯ, ಸುಖವನ್ನು ಅನುಭವಿಸಿದ ಹೆಣ್ಣು ಇದುವರೆಗೂ ತಾನು ನೋಡದ, ಅಷ್ಟಾಗಿ ಗೊತ್ತಿರದ ಗಂಡನ ಮನೆಗೆ ಹೋಗುವ ಸಂದರ್ಭ ಭಾರತೀಯ ಸಂಸ್ಕೃತಿಯ ರೀತಿಗಳಲ್ಲೊಂದು. ಆ ಮನೆ ಆಕೆಗೆ ಹೊಸದು. ಅಲ್ಲಿ ಆಕೆ ತನ್ನ ಇದುವರೆಗಿನ ಆಯ್ಕೆ, ಅಭಿಪ್ರಾಯ, ನಿರ್ಣಯಗಳನ್ನು ಆ ಮತ್ತೊಂದು ಮನೆಗಾಗಿ, ಮನೆಯವರಿಗಾಗಿ ಬದಲಿಸಿಕೊಳ್ಳಬೇಕಾಗುತ್ತದೆ. ತನ್ನದೆನ್ನುವುದಕ್ಕಿಂತ ತನ್ನವರದೆನ್ನುವ ಭಾವಕ್ಕೆ ಬರಬೇಕಾಗುತ್ತವೆ. ಹಾಗಾಗಿ ಆಕೆಗೆ ಆ ಮನೆ ಹೊಸಮನೆ. ಆ ಬಾಳು ಹೊಸಬಾಳು. ಹೊಸಬಾಳಿಗೆ ಹೊರಟ ಆ ಗಳಿಗೆ ಆಕೆಗೆ ಹಳೆಮನೆಯ ನೆನಪು ಒತ್ತರಿಸಿ ಕಣ್ಣೀರು ತರಿಸುತ್ತದೆ.

'ಅಳಬೇಡ ತಂಗೀ ಅಳಬೇಡ' ಎನ್ನುವ ಶರೀಫರ ಕವಿತೆ ಮದುವೆಯ ಮೂಲಕ ವೈರಾಗ್ಯ, ಮೋಕ್ಷದ ಹಾದಿ ತೋರುವುದಾದರೂ ಸಾಮಾಜಿಕ ಎಚ್ಚರವನ್ನು ಮರೆತಿಲ್ಲ. 'ಮದುವೆ' ಎಂಬ ಪದ ಹೇಗೆ ಅನರ್ಥಕಾರಿ ಸಂಗತಿಗಳಿಗೆ ಹಾದಿಯಾಗುತ್ತದೆ ಎಂಬುದನ್ನೇ ತೋರಿಸಿದೆ.

*ಖಡಕೀಲೆ ಉಡಿಯಕ್ಕಿ ಹಾಕುವರಮ್ಮಾ। ಒಳ್ಳೆ*
*ದುಡುಕೀಲೆ ಮುಂದಕ್ಕೆ ದೂಡುವರಮ್ಮಾ*
*ಮಿಡುಕ್ಯಾಡಿ ಮದುವ್ಯಾದಿ ಮೋಜು ಕಾಣಮ್ಮಾ। ಮುಂದೆ*
*ಹುಡುಕ್ಯಾಡಿ ಮಾಯದ ಮರವೇರಿದೆಮ್ಮಾ*

– ಇಲ್ಲಿ ಬರುವ 'ಖಡಕೀಲೆ' ಎಂಬ ಪದ ಜವಾಬ್ದಾರಿ ಹೊತ್ತವರ ಗತ್ತನ್ನು ತೋರಿಸುತ್ತದೆ. ಹೊಸಬಾಳನ್ನು ಮಗಳು ಬಯಸುವ ಮುನ್ನವೇ ಅಥವಾ ಇಷ್ಟಪಡದಿದ್ದರೂ ಆಕೆ ಇಷ್ಟಪಡಲೇಬೇಕು ಎಂಬ ಸಂಗತಿಯನ್ನು ತೋರಿಸುತ್ತದೆ. ಎರಡನೇ ಸಾಲಿನ 'ದುಡುಕೀಲೆ', 'ಉಡಿಯಕ್ಕಿ' ಎಂಬ ಪದಗಳು ಗಂಡನ ಮನೆಗೆ ಕಳಿಸುವ ಅವಸರವನ್ನೇ ತೋರಿಸುತ್ತವೆ. ಮುಂದುವರಿದು 'ಮಿಡುಕ್ಯಾಡಿ' ಎಂಬ ಪದ ಬಳಸಿ ಆಕೆಯ ಹೊಯ್ದಾಟವನ್ನೂ ಇರಸುಮುರಸನ್ನೂ ಸೂಚಿಸುತ್ತಾರೆ. ಅವರ ಮನೆಯವರಿಗೆ ಮತ್ತು ನೆರೆದವರಿಗೆ ಮಾತ್ರ ಮದುವೆ ಎಂಬುದು 'ಮೋಜು ಕಾಣಮ್ಮಾ' ಎಂಬ ಪದದೊಳಗೇ ತೆರೆದು ತೋರಿಸುತ್ತಾರೆ.

*ಅಳಬ್ಯಾಡ ತಂಗೀ ಅಳಬ್ಯಾಡ। ನಿನ್ನ*
*ಕಳುಹ ಬಂದವರೆಲ್ಲ ಉಳುಹೀಕೊಂಬುವರಿಲ್ಲ*

– ಎಂಬ ಈ ಮೇಲಿನ ಸಾಲುಗಳಲ್ಲಿ 'ಉಳುಹೀಕೊಂಬುವರಿಲ್ಲ' ಎಂಬ ಪದದ ಮೂಲಕ ಮೊದಲು ಹೇಳಿದ ಖಡಕೀಲೆ ಎಂಬ ಅರ್ಥವನ್ನು ಗಟ್ಟಿಗೊಳಿಸುವುದರ



ಜೊತೆಗೇ ಸಮಾಧಾನ ಮಾಡುತ್ತಿರುವ ಅಜ್ಜನೊಬ್ಬನ ಅಸಹಾಯಕ ಸ್ಥಿತಿಯನ್ನು ತೋರಿಸುತ್ತಾರೆ. ಈ ಅರ್ಥಕ್ಕೆ ಪೂರಕವಾಗಿ ಶರೀಫರು ಇನ್ನೂ ಎರಡು ಸಾಲನ್ನು ತರುತ್ತಾರೆ :

*ಕಂಡವರ ಕಾಲ್ಬಿದ್ದು ಕೈಮುಗಿದು ನಿಂತರೆ*
*ಗಂಡನ ಮನಿ ನಿನಗೆ ಬಿಡದಾಯಿತ್ತವ್ವ ತಂಗೀ...*

ಹೀಗೆ ಕವಿ ಶರೀಫರು ಕುಟುಂಬದ ಆಚೆ ನಿಂತೂ ಹೆಣ್ಣಿನ ಮಿಡುಕಾಟವನ್ನು, ಮೋಜಿನೊಳಗಿನ ಖಡಕನ್ನು, ಏನೂ ಮಾಡಲಾಗದೆ ನಿಂತ ಅಸಹಾಯಕ ಸ್ಥಿತಿಗಳನ್ನು ಒಟ್ಟೊಟ್ಟಿಗೇ ತಂದಿದ್ದಾರೆ.

ವಿ. ಸೀ. ಅವರ 'ಮನೆ ತುಂಬಿಸುವುದು' ಎಂಬ ಕವಿತೆ ಭಾರತೀಯ ಅವಿಭಕ್ತ ಕುಟುಂಬಗಳು ಮರೆಯಾಗಿ ನಗರದ ಮಧ್ಯಮ ವರ್ಗದ ವಿಭಕ್ತ ಕುಟುಂಬದ ಚಿತ್ರಣ ನೀಡುವಂಥದ್ದು. ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ್ ಅವರು, ''ಇದೊಂದು ಸುಕೋಮಲ ಪದ್ಯ, ಸುಕೋಮಲ ಭಾವಗಳೇ ಇದರ ಆಧಾರವೆನ್ನುತ್ತ ಈ ಪದ್ಯದ ಮೇಲೆ ಕಾಳಿದಾಸನ ಶಾಕುಂತಲ ನಾಟಕದ ನಾಲ್ಕನೇ ಅಂಕದ 'ಶುಶ್ರೂಷಸ್ವ ಗುರೂನ್' ಎಂಬ ಎರಡು ಮೂರು ಶ್ಲೋಕಗಳ ಪ್ರಭಾವ ನೇರವಾಗಿ ಅಲ್ಲದಿದ್ದರೂ ಕವಿಯ ಮನಸ್ಸನ್ನು ಗಾಢವಾಗಿ ತಟ್ಟಿದೆ'' ಎನ್ನುತ್ತಾರೆ.

*ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು*
*ನಿಮ್ಮ ಮಡಿಲೊಳಗಿಡಲು ತಂದಿರುವೆವು.*
*ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು*
*ನಿಮ್ಮ ಮನೆಯನು ತುಂಬಲೊಪ್ಪಿಸುವೆವು*

– ಎಂದು ಆರಂಭವಾಗುವ ಈ ಸಾಲುಗಳಲ್ಲಿ ವಿ. ಸೀ. 'ಮಗು' ಎಂಬ ಪದವನ್ನು ಬಳಸುತ್ತ ತಂದೆಯೊಳಗಿನ ಬತ್ತದ ಮಮತೆಯನ್ನು ತೋರಿದ್ದಾರೆ. ಇಲ್ಲಿ ಅಪ್ಪ - ಮಗಳ ಮನೆ ತುಂಬಿಸೋ ಕ್ರಿಯೆಯನ್ನು ಖಡಕೀಲೆ ನಡೆಸದೆ ಅತ್ಯಂತ ಅಸಹಾಯಕನಂತೆ ನಡೆಸಿದ್ದಾನೆ. ''ಮರೆ ಮೋಸ ಕೊಂಕು ಗೊತ್ತಿಲ್ಲ ಕಷ್ಟಗಳನ್ನು ಅನುಭವಿಸಿಲ್ಲ'' ಎನ್ನುತ್ತಲೇ ಆಕೆಯನ್ನ ನಾನು ಸಾಕಿದಂತೆ ನೀವೂ'' ಸಲಹಿಕೊಳ್ಳಿರೀ ಮಗಳನೊಪ್ಪಿಸುವೆವು'' ಎನ್ನುತ್ತಾರೆ.

*ಕಠಿಣಗಳ ನೆಳಲ್ ಸುಳಿಯಲದುರಿ ಬಾಡುವಳು*
*ಹಿರಿಮಂಜು ಬಳಲಿಸಿದ ಹೂವಿನಂತೆ*

– ಎಂದು ಹೇಳುವಾಗಲಂತೂ ಆಕೆಯ ನಾಜೂಕುತನಕ್ಕೆ ಎಳೆಹೂವಿನ ಸಮರ್ಥ ಉಪಮೆಯನ್ನು ತಂದಿದ್ದಾರೆ. ಇಲ್ಲಿನ ನಿವೇದನೆಯಲ್ಲಿ ಶರೀಫರು ತರುವ ಅಪ್ಪನ ಖಡಕಿಲ್ಲ, ಗತ್ತಿಲ್ಲ. ಅದು ಗಂಡಿನ ಮನೆಯ ಪುರುಷಾಧಿಪತ್ಯದ ಸೊತ್ತಾಗಿಬಿಟ್ಟಿದೆ. ವಿನಯವನ್ನೇ ಹೊತ್ತ ಅಪ್ಪ ಇಲ್ಲಿ ಮಗಳಿಂದಲೂ ಅಷ್ಟೇ ನಾಜೂಕಾಗಿ ದೂರವಾಗುತ್ತಾನೆ :

*ಎಮ್ಮ ಕುಲ ಮನೆಗಳಿಗೆ ಹೊರಗಾಗಿ ಬಂದಿಹಳು*
*ನಿಮ್ಮ ಕುಲವನು ಬೆಳೆಸೆ ಬಂದಿರುವಳು.*

– ಹೀಗೆ ಹತ್ತಿರವಿದ್ದೂ ದೂರವಾಗುವ ಅಪ್ಪ, ಮಗಳಿಗೆ ಹೇಳುವ ಮಾತುಗಳು 'ಗಂಜೀಯ ಕುಡಿದರೂ ಗಂಡನ ಮನಿ ಲೇಸು' ಎಂಬ ಜನಪದ ಹಾಡನ್ನು ನೆನಪಿಸುತ್ತವೆ.

*ಹೆತ್ತವರ ಮನೆಗಿಂದು ಹೊರಗಾದೆ ನೀ ಮಗಳೆ*
*ಈ ಮನೆಯೆ ಈ ಇವರೆ ನಿನ್ನವರು ಮುಂದೆ*
*ಇವರೆ ತಾಯ್ಗಳು, ಸಖಿರು, ಭಾಗ್ಯವನು ಬೆಳೆಸುವರು*
*ಇವರ ದೇವರೇ ನಿನ್ನ ದೇವರುಗಳು*

ಅಪ್ಪನ ಜವಾಬ್ದಾರಿ ಅಲ್ಲಿನ ಶರೀಫರ ಊರ ಹೊರಗಿನ ಅಜ್ಜನಂತೆಯೇ ಆಗಿದೆ. ಕರುಳ ಕಳಚಿಕೊಳ್ಳುವ ಸರದಿ ಅಪ್ಪನದಾದರೆ ಕಣ್ಣೀರ ಸರದಿ ಮಗಳದ್ದಾಗಿದೆ.

*ನಿಲ್ಲು ಕಣ್ಣೊರಸಿಕೊಳ್ಳು ನಿಲ್ಲು ತಾಯ್ ಹೋಗುವೆವು*
*ತಾಯ್ವಿರಾ, ತಂದೆಯಿರಾ, ಕೊಳ್ಳಿರಿವಳ :*
*ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ*
*ತುಂಬಿದಾಯುಷ್ಯದಲಿ ಬಾಳಿ ಬದುಕು*

– ಎಂದು ಹರಸುವ ಅಪ್ಪನಲ್ಲಿ ಕರುಳ ಮಿಡಿತಗಳಿವೆ. ಆದರೆ ಅವು ಶರೀಫರ ಊರ ಅಜ್ಜನಂತೆ, ಹೊರಗಿನವನಂತೆ ಕ್ಷಣದ ಮಿಡಿತವನ್ನು ಬಿಟ್ಟು ಬೇರೇನೂ ನೀಡಲಾರವು. ಅಲ್ಲಿ ಹೊರ ವ್ಯಕ್ತಿ, 'ಅಂಗಳಕ ಹೊರತಾದೆಲ್ಲವ್ವ ನಾರಿ' ಎಂದಂತೆ ಇಲ್ಲಿ ಒಳ ವ್ಯಕ್ತಿಯಾದ ಅಪ್ಪ, 'ತುಂಬಿದಾಯುಷ್ಯದಲಿ ಬಾಳಿ ಬದುಕು' ಎಂದೆನ್ನುವ ಮೂಲಕ ದೂರವಾಗಿದ್ದಾರೆ.



ಕಂಬಾರರ 'ಹೊಸಬಾಳಿಗೆ ಹೊರಟ ಮಗಳಿಗೆ' ಕವಿತೆ ಆಧುನಿಕ ಕಾಲದ್ದು. ಬ್ರಿಟಿಷರ ನಂತರದ ಹೊಸ ಓದು, ವೈಚಾರಿಕತೆ, ಹೊಸ ಚಿಂತನೆಗಳ ಕಾಲದಲ್ಲಿ ಬಂದದ್ದು. ಇಲ್ಲಿನ ಅಪ್ಪ ಸುಶಿಕ್ಷಿತ. ವಿವಾಹವನ್ನು ಧಾರ್ಮಿಕ, ಪಾರಮಾರ್ಥಿಕ ಎಂದಷ್ಟೇ ನೋಡಲಾರ – ಅದನ್ನು ವೈಚಾರಿಕ ಆಕೃತಿಯಲ್ಲಿಟ್ಟು ನೋಡುತ್ತಾನೆ. ಹಾಗಾಗಿ ಶರೀಫರ ಕವಿತೆ ಪಾರಮಾರ್ಥಿಕತೆಯನ್ನು,

ವಿ. ಸೀ.ಯವರ ಕವಿತೆ ಹಿಂದೂ ಧಾರ್ಮಿಕ ದೃಷ್ಟಿಯನ್ನು ನೀಡಿದಂತೆ ಕಂಬಾರರ ಕವಿತೆ ವೈಚಾರಿಕ, ವೈಜ್ಞಾನಿಕ ಆಲೋಚನೆಗಳನ್ನು ನೀಡುತ್ತದೆ.

''ಹೆಣ್ಣನ್ನು ಗಂಡಿಗೆ ಒಪ್ಪಿಸುವಾಗ ಆಕೆಯ ಮೇಲೆ ಆತನ ಮೂಲಕ ಆತನ ಇಡೀ ಕುಟುಂಬದ ಅಧಿಕಾರವನ್ನು ಸ್ಥಾಪಿಸುವಂತಹ ಒಂದು ವ್ಯವಸ್ಥೆಯನ್ನು ವಿವಾಹ ಸೃಷ್ಟಿಸುತ್ತದೆ. ವಿವಾಹ ಸಂಬಂಧ ಆಚರಣೆಗಳು ವಿವಾಹ ಎನ್ನುವ ಸಂಬಂಧಕ್ಕೆ ಸಾಮಾಜಿಕ ಮಾನ್ಯತೆಯನ್ನು ನೀಡುತ್ತವೆ ಹಾಗೂ ಆ ಸಂಬಂಧವನ್ನು ಪ್ರವೇಶಿಸಿದವರಿಗೆ ತಮ್ಮ ತಮ್ಮ ಜವಾಬ್ದಾರಿಗಳ ಬಗ್ಗೆ ಅರಿವನ್ನು ಮೂಡಿಸುತ್ತವೆ ಎನ್ನುವುದು ನಿಜವಾದರೂ ಈ ಆಚರಣೆಗಳೇ ಅನೇಕ ಸಂದರ್ಭಗಳಲ್ಲಿ ಸ್ತ್ರೀ ಶೋಷಣೆಗೆ ಕಾರಣವಾಗುತ್ತವೆ ಎಂಬುದನ್ನು ವಿಶೇಷವಾಗಿ ಗಮನಿಸಬೇಕಾಗಿವೆ'' ಎಂಬ ಸ್ತ್ರೀಪರ ನಿಲುವೇ ಕಂಬಾರರ ಕವಿತೆಯದ್ದಾಗಿದೆ.

ಶರೀಫರ ಕವಿತೆ 'ಅಳಬ್ಯಾಡ ತಂಗೀ ಅಳಬ್ಯಾಡ' ಎಂದು ಹೇಳುವಷ್ಟಕ್ಕೆ ಸೀಮಿತವಾದರೆ, ವಿ. ಸೀ.ಯವರ ಕವಿತೆ 'ಮನೆ ತುಂಬಿಸುವುದಕ್ಕೆ' ಮಾತ್ರ ಸೀಮಿತವಾಗಿದೆ. ಕಂಬಾರರ ಕವಿತೆ ಮಾತ್ರ ಹೊಸಬಾಳು ಎಂದರೇನು, ಏಕೆ, ಹೇಗೆ, ಹೊಸಬಾಳು ಸಾಧ್ಯ, ಎಂಬ ಪ್ರಶ್ನೆಗಳಿಂದ ಕಣ್ಣೀರಿಗೆ ಮಾತ್ರ ಸೀಮಿತವಾದ ಹಿಂದಿನ ಎರಡೂ ಕವಿತೆಗಳ ಹೆಣ್ಣಿಗಿಂತಲೂ ಭಿನ್ನವಾಗಿ ಸೋಲನ್ನೆದುರಿಸುವ, ಕನಸನ್ನು ಸಾಕಾರಗೊಳಿಸುವ, ಛಲಬಿಡದ ಸ್ವಾಭಿಮಾನಿ ಹೆಣ್ಣನ್ನು ಇಲ್ಲಿ ತಂದಿದ್ದಾರೆ. ಇಂದು ಹೆಣ್ಣಿಗೆ ಬೇಕಾದ್ದು ಧಾರ್ಮಿಕ ಶರಣಾಗತಿಯಲ್ಲ, ಸ್ವತಂತ್ರ ಬದುಕಿನ ಕನಸು. ಆ ಛಲವನ್ನೇ ಆ ಹಾದಿಯ ಹೋರಾಟವನ್ನೇ ಕವಿ ಇಲ್ಲಿ ತಂದಿದ್ದಾರೆ.

ಬಡತನದ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸಿದ ತಂದೆ ಮಗಳಿಗೆ ವಿವರಿಸುತ್ತಾನೆ :

ಮಳೆಗಾಲದಲ್ಲಿ ಆಕೀಗೆ ಹ್ಯಾಗೋ ಆಗಿ
ಜಾರಿ ಬಿದ್ದದ್ದು ಇದೆ, ಮುಂದೆ ಹ್ಯಾಗೆಂದು
ಮ್ಯಾಲೆ ಸುರಿಯೋ ಮುಗಿಲು, ಕೆಳಗೆ ಜಾರೋ ನೆಲ,
ದಾರಿ ಸಾಗಿಸೊ ಶಿವನೆ ಅಂದದ್ದಿದೆ

– ಹೀಗೆ ಹೇಳುವ ತಂದೆ ತನ್ನ ಅಸಹಾಯಕತೆಯನ್ನು ಮಗಳಿಗೆ ಕಲಿಸಲಾರ. ಬದಲಿಗೆ, 'ಇನ್ನು ಮುಂದೆ ಶುರುವಾಗಬೇಕು ನಿಮ್ಮ ಪ್ರಯಾಣ' ಎಂದು ತಿಳಿಸುತ್ತಾನೆ.




ಇಲ್ಲಿ ಪ್ರೀತಿಯ ಜೊತೆಗೆ ಮಗಳು ಬದುಕಬಲ್ಲಳೆಂಬ ವಿಶ್ವಾಸ ಇಣುಕುತ್ತದೆ.

ಏನೇನೋ ಆದದ್ದು ಎಷ್ಟೋ ಇದೆ
ಸೋಲಿಂದ ಬಹಳಷ್ಟು ಕಲಿಯೋದಿದೆ

ಎಂದು ಬದುಕು ಎದುರಿಸುವ ಕ್ರಮ ತಿಳಿಸುವ ಅಪ್ಪ ನಿಜವಾದ ಜವಾಬ್ದಾರನಂತೆ ಕಾಣಿಸುತ್ತಾನೆ.

ನಾವು ಬಿತ್ತಿದ್ದೆಷ್ಟೋ ಬೆಳೆಯಲಾಗಲೆ ಇಲ್ಲ
ನಿಮ್ಮಲ್ಲಿ ಅದು ಬೆಳೆದು ಫಲ ನೀಡಲಿ

– ಎಂದು ಹಾರೈಸುವ ತಂದೆ ವಿ. ಸೀ. ಕವಿತೆಯ ಅಪ್ಪನಂತೆ ಕ್ರಿಯಾ ಶೂನ್ಯ ಪ್ರೀತಿ ತೋರದೆ ಕ್ರಿಯೆಯ ಕಟ್ಟುವ ಜೀವನ ಮಾರ್ಗ ಕಲಿಸುತ್ತಾನೆ. ಗಂಡು ಹೆಣ್ಣುಗಳ ಕೌಟುಂಬಿಕ ಶ್ರೇಣೀಕರಣಗಳನ್ನು ದಾಟಿದ ಆಧುನಿಕ ಕಾಲದ ಕಂಬಾರರು ಬಾಳಿನ ದಾರಿಯಲ್ಲಿ ವಹಿಸಬೇಕಾದ ಎಚ್ಚರವನ್ನು, ಅರಿವನ್ನು ಇಲ್ಲಿ ತುಂಬಿದ್ದಾರೆ.

ನಾವು ಮಾಡಿದ ಬೆಳಕು ಸಾಲದೆ ಬಂದಲ್ಲಿ
ನೀವೂನು ಮಾಡ್ರಿ ತುಸು ಬೆಳಕು
ಸುಡಬೇಕು ಪ್ರೀತಿಯಲಿ ಸುಟ್ಟು ಬೆಳಕಾಗುತ್ತ
'ನೊಗವೆ ನಾರಾಯಣಾ' ಅನ್ನಬೇಕು.

– ಪ್ರೀತಿಯಲ್ಲಿ ಸುಡುವ ಹೆಣ್ಣುಗಳ ಜಾಗದಲ್ಲಿ ಹೊಸ ಅಪ್ಪ ಸುಟ್ಟು ಬೆಳಕಾಗುವ ಕ್ರಿಯೆಯನ್ನು, ಅದಕ್ಕೆ ತಕ್ಕ ಛಲವನ್ನು ಹೇಳುತ್ತಾನೆ ಅಲ್ಲಿಗೇ ನಿಲ್ಲದೆ,

ಸೂರ್ಯ ತಿಳಿದಿರಬೇಕು ಬೆಳಗೊ ಕರ್ತವ್ಯವನು
ತಿಳಿಯದಿದ್ದರೆ ಅವನ ಗೊಡವೆ ಬೇಡ
ಸೂರ್ಯ ಇರದಿದ್ದರೂ ಹಸಿರು ತಿಳಿದಿರಬೇಕು
ಬಿರಿದು ಹಣ್ಣಾಗುವ ಪವಾಡವನ್ನು

– ಎಂಬ ಸಾಲುಗಳ ಮೂಲಕ ವಿ. ಸೀ. ಅವರ ಪುರುಷಾಧಿಪತ್ಯದ 'ಇವರ ದೇವರೇ ನಿನ್ನ ದೇವರುಗಳು' ಎಂಬ ಸ್ಥಿತಿ ದಾಟಿ 'ಹಸಿರು ತಿಳಿದಿರಬೇಕು ಬಿರಿದು ಹಣ್ಣಾಗುವ ಪವಾಡವನ್ನು' ಎಂಬ ಸ್ವತಂತ್ರ ವಾಂಛೆಯನ್ನು, ಸ್ವಾವಲಂಬಿತನವನ್ನು, ನಿಜವಾದ ಹೊಸಬಾಳನ್ನು ಅಪ್ಪ ಹೇಳುತ್ತಿದ್ದಾನೆ. ಈ ಕವಿತೆ ಶರೀಫರ ಪಾರಮಾರ್ಥಿಕತೆಯನ್ನು, ವಿ. ಸೀ.ಯವರ ಪುರುಷ ಧರ್ಮದ ಶರಣಾಗತಿಯನ್ನು ಅಂತಿಮವಾಗಿ ಹೊಡೆದುಹಾಕುತ್ತ, 'ಬದುಕಿಗೆ ತುದಿಯಿಲ್ಲ ಕ್ಷಿತಿಜದಾಚೆಗೂ ಲೋಕವಿದೆ, ಹೊಸಬಾಳು ನಿನ್ನ ಕನಸುಗಳನ್ನು ನಿಲ್ಲಿಸದಿರಲಿ' ಎಂದು ಹೊಸ ಉತ್ಸಾಹವನ್ನು ತುಂಬುವ ಅಪ್ಪ ನಿಜಕ್ಕೂ ಇಷ್ಟವಾಗುತ್ತಾನೆ.

ಕಾಲರಾಯನ ಗೇಹ ಈ ದೇಹ; ಕೊನೆಯಲ್ಲ
ಲೋಕ ಎಷ್ಟೋ ಉಂಟು ಇದರ ಆಚೆ
ಕನಸು ವಿರಮಿಸದಿರಲಿ ತುದಿಯ ತಲುಪುವ ತನಕ
ತುದಿಯೆಲ್ಲಿ, ಗೊತ್ತಲ್ಲ? ಕ್ಷಿತಿಜದಾಚೆ!

'ಮಗಳನ್ನು ಗಂಡನ ಮನೆಗೆ ಕಳುಹಿಸುವ' ವಸ್ತುವೊಂದು ಹೀಗೆ ಮೂರೂ ಕವಿತೆಗಳಲ್ಲಿ ಭಿನ್ನ ಭಿನ್ನವಾಗಿದೆ. ಈ ಮೂರೂ ಕವಿತೆಗಳಿಗೆ ನೂರು ವರ್ಷಗಳ ಪರಂಪರೆ ಇದೆ, ಸಾಂಸ್ಕೃತಿಕ ಪರಿಸರಗಳಿವೆ. ಸಾಂಪ್ರದಾಯಿಕ ನೆಲೆಯಿಂದ ಅಸಾಂಪ್ರದಾಯಿಕ ನೆಲೆಯವರೆಗೆ ಕ್ರಮಿಸಿದ ದಾರಿಯಿದೆ.

**ಶಿವಕುಮಾರ್ ಕಂಪ್ಲಿ**
ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೂಡ್ಲಿಗಿ - ೫೮೩ ೧೩೫, ಬಳ್ಳಾರಿ ಜಿಲ್ಲೆ

(*೫೦ನೇ ಪುಟದಿಂದ*) **ನಿರಂಜನ ಕವಿಯ 'ಕಂಚಿ ಪುರಾಣ'**

೧೫. ''ಕವಿಗೆ ಶಂಕರಾಚಾರ್ಯ ಮತ್ತು ಬಸವಣ್ಣ ಇಬ್ಬರ ಬಗ್ಗೆಯೂ ಸಮಾನ ಪ್ರೀತಿಯುಂಟು.''

೧೬. ''ಕಂಚಿ ಪುರಾಣ ಕನ್ನಡದ ಸತ್ಕಾವ್ಯಗಳಲ್ಲಿ ಒಂದು. ಇಲ್ಲಿನ ಕಥನ ದೇಶೀಯವಾದದ್ದು ಮತ್ತು ಇತಿಹಾಸಕ್ಕೆ ಸಂಬಂಧಿಸಿದ್ದು. ವಿಶ್ವಕರ್ಮ ಬ್ರಾಹ್ಮಣರ ಪರಂಪರೆ, ಇತಿಹಾಸವನ್ನು ಬಹು ಸಮರ್ಥವಾಗಿ ಉಲಿಯುವ ಕಾವ್ಯ.''

ಮೇಲಿನ ಉಲ್ಲೇಖಗಳು ಸಂಪಾದಕರ ದೃಷ್ಟಿ-ಧೋರಣೆಗಳನ್ನು ಬಿಂಬಿಸಿವೆ. ಕನ್ನಡ ಸಾಹಿತ್ಯ ಪರಂಪರೆ ಗಣಿಸದಿದ್ದ ಕೃತಿಯೊಂದನ್ನು ಸಂಪಾದಿಸಿ, ಮಹತ್ವದ ಪ್ರಸ್ತಾವನೆ ಮೂಲಕ 'ಸಾಹಿತ್ಯ ಚರಿತ್ರೆ'ಗೆ ಹೊಸ ಕೃತಿಯನ್ನು ಸೇರಿಸಿದ ಕೀರ್ತಿ ಸಂಪಾದಕರದು.

ಅನುಬಂಧ - ೧ರಲ್ಲಿ ನೀಡಿರುವ 'ಕಾವ್ಯ ಪದಕೋಶ' ಕನ್ನಡ ಭಾಷೆ, ಸಂಸ್ಕೃತಿಯ ದೃಷ್ಟಿಕೋನದಿಂದ ಅಮೂಲ್ಯವಾದದ್ದು. ಒಂದು ಕೃತಿಯ ಅರ್ಥವನ್ನು ನೀಡುತ್ತಲೇ, ಆ ಕೃತಿಯ ಸಮಕಾಲೀನತೆ - ಸಾಮಾಜಿಕತೆಯನ್ನು ಧ್ವನಿಸುವಲ್ಲಿ ಈ ಪದಕೋಶ ಸಫಲವಾಗಿದೆ.

ಅನುಬಂಧ - ೨ರ ಆಕರ ಗ್ರಂಥಸೂಚಿ ಈ ಸಂಪಾದನೆಯ ಶಾಸ್ತ್ರೀಯತೆಯನ್ನು, ಸಂಪಾದಕರ ಹುಡುಕಾಟದ ವಿಸ್ತಾರ ಮತ್ತು ಸಾರ್ಥಕತೆಯನ್ನು ಬಿಂಬಿಸುತ್ತದೆ.

ಈ ಕೃತಿಯನ್ನು ಪ್ರಕಟಿಸುವ ಮೂಲಕ ಪತ್ರಾಗಾರ ಇಲಾಖೆ ಕನ್ನಡ ಸಂಸ್ಕೃತಿಗೆ ಹೊಸ ಆಯಾಮವನ್ನು ನೀಡಿದೆ. ಹಾಗಾಗಿ ಸಂಪಾದಕರ ಶ್ರಮ ಸಾರ್ಥಕ್ಯ ಪಡೆದಿದೆ. ಶಾಸ್ತ್ರೀಯ, ತೌಲನಿಕ, ಹಳಗನ್ನಡ - ನಡುಗನ್ನಡ ಕಾವ್ಯಗಳ ಅಧ್ಯಯನ, ಸಂಶೋಧನೆ, ಸಂಪಾದನೆಗಳೇ ಇಲ್ಲವಾಗುತ್ತಿರುವ ಈ ಕಾಲಘಟ್ಟದಲ್ಲಿ ತಮ್ಮ ಅಪೂರ್ವ ಕ್ರಿಯಾಶೀಲತೆ ಮತ್ತು ಶ್ರದ್ಧೆಗಳಿಂದ ಈ ಕೃತಿಯನ್ನು ಸಂಪಾದಿಸಿರುವ ಡಾ|| ಜ್ಞಾನಾನಂದರು ಅಭಿನಂದನಾರ್ಹರು.

**ಡಾ|| ಎಸ್. ಪ್ರಸಾದಸ್ವಾಮಿ**
'ನುಡಿ', ನಂ. ३, ೧ನೇ 'ಎ' ಮುಖ್ಯರಸ್ತೆ
ಮುನೇಶ್ವರ ಬಡಾವಣೆ, ೪ನೇ ಬ್ಲಾಕ್,
ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ
ಬೆಂಗಳೂರು - ೫೬೦ ೦೯೭

ಸೀಯಾರ್ಕೆ




# ಪಶ್ಚಿಮ ಏಷ್ಯಾದಲ್ಲಿ ತಳಮಳ – ಪಶ್ಚಿಮ ರಾಷ್ಟ್ರಗಳಲ್ಲಿ ಕಳವಳ

ಹದಿನೆಂಟು ದಿನಗಳ ಜನಾಂದೋಳನ ಈಜಿಪ್ಟಿನ ಸರ್ವಾಧಿಕಾರಿ ಹೋಸ್ನಿ ಮುಬಾರಕ್‌ನನ್ನು ಅಧಿಕಾರದಿಂದ ಕೆಳಗಿಳಿಸಿತು. ಮೂವತ್ತು ವರ್ಷಗಳ ಕಾಲ ಪಶ್ಚಿಮ ರಾಷ್ಟ್ರಗಳ, ಮುಖ್ಯವಾಗಿ ಅಮೆರಿಕದ ಬೆಂಬಲದಿಂದ ಬಿಗಿ ಆಡಳಿತ ನಡೆಸಿದ ಭ್ರಷ್ಟ ಆಡಳಿತ ಅಂತ್ಯಗೊಳ್ಳಲು ಮುನ್ನೂರಕ್ಕೂ ಹೆಚ್ಚು ಮಂದಿ ಹೋರಾಟಗಾರರು ಬಲಿಯಾಗಬೇಕಾಯಿತು. ದಬ್ಬಾಳಿಕೆಯಲ್ಲಿ ಗಾಯಗೊಂಡವರು ನೂರಾರು ಮಂದಿ. ಕೈರೋದ ತಹ್ರೀರ್ ಚೌಕ ವಸ್ತುಶಃ ರಣರಂಗವಾಗಿತ್ತು. ಒಂದು ಮಿಲಿಯಕ್ಕೂ ಹೆಚ್ಚು ಜನ ಅಹರ್ನಿಶಿ ಅಲ್ಲಿ ಬೀಡುಬಿಟ್ಟಿದ್ದರು. ಮುಬಾರಕ್ ಬೆಂಬಲಿಗರೂ ಒಂದು ಹಂತದಲ್ಲಿ ಆಡಳಿತ ದರ್ಪದ ಪ್ರದರ್ಶನ ನಡೆಸಿದಾಗ ಅಂತರ್ಯುದ್ಧದ ಭೀತಿ ಆವರಿಸಿತ್ತು. ಪರಸ್ಪರ ಕಲ್ಲು ತೂರಾಟದಲ್ಲೇ ಅದು ಮುಗಿದದ್ದು ಸಮಾಧಾನದ ಸಂಗತಿ. ಜನತೆಯ ಹೋರಾಟ ಕೈರೋಗೆ ಮಾತ್ರ ಸೀಮಿತವಾಗಿರಲಿಲ್ಲ. ದೇಶದ ಎಲ್ಲ ಕಡೆಗಳಿಗೂ ಹರಡಿತು. ಅಲೆಕ್ಸಾಂಡ್ರಿಯ, ಪೋರ್ಟ್ ಸಯಿದ್, ಆಸ್ವಾನ್ – ಮೊದಲಾದ ನಗರಗಳಲ್ಲಿಯು ಜನರು ಪ್ರದರ್ಶನ ನಡೆಸಿದರು. ಕುರ್ಚಿಗೆ ಅಂಟಿಕೊಂಡಿರಲು ಮುಬಾರಕ್ ನಡೆಸಿದ ಕಸರತ್ತೆಲ್ಲ ವಿಫಲಗೊಂಡ ಮೇಲೆ ಸೇನೆ ಪ್ರವೇಶಿಸಿತು. ಈಗ ಸೇನಾಡಳಿತೆ. ಆರು ತಿಂಗಳಲ್ಲಿ ಚುನಾವಣೆ ನಡೆಸಿ ಪರ್ಯಾಯ ವ್ಯವಸ್ಥೆಯನ್ನು ಸ್ಥಾಪಿಸುವುದಾಗಿ ಪ್ರಕಟಿಸಿದೆ. ಇದು ಕಾರ್ಯಗತವಾದೀತೆ, ಕಾದು ನೋಡಬೇಕಿದೆ. ಏಕೆಂದರೆ ಸೇನಾಧಿಕಾರಿಗಳು ಮುಬಾರಕ್ ಆಡಳಿತೆಯೊಂದಿಗೆ ಶಾಮೀಲಾಗಿದ್ದವರೆ. ಅದಲ್ಲದೆ ಪಶ್ಚಿಮ ರಾಷ್ಟ್ರಗಳವರಿಗೂ ಬೇಕಾದವರೆ. ಪ್ರಜಾಪ್ರಭುತ್ವಕ್ಕಾಗಿ ಹೋರಾಟ ನಡೆಸುತ್ತಿರುವವರು ಇನ್ನೂ ತಮ್ಮ ಹೋರಾಟವನ್ನು ಹಿಂತೆಗೆದುಕೊಂಡಿಲ್ಲ. ಅದೇನೇ ಇರಲಿ ಈಜಿಪ್ಟ್ ಜನತೆಯ ಆಂದೋಳನ ವಿಶಿಷ್ಟವಾದದ್ದು, ಐತಿಹಾಸಿಕವಾದದ್ದು. ಆ ರಾಷ್ಟ್ರದ ಮಟ್ಟಿಗೆ ಇದು ಎರಡನೆಯ ಕ್ರಾಂತಿ. ಸುಮಾರು ಆರು ದಶಕಗಳ ಹಿಂದೆ ಕರ್ನಲ್ ಅಬ್ದುಲ್ ನಾಸೆರ್ ನಾಯಕತ್ವದಲ್ಲಿ ಜರುಗಿದ ಕ್ಷಿಪ್ರಕ್ರಾಂತಿ ಅರಸೊತ್ತಿಗೆಯನ್ನು ಕಿತ್ತೊಗೆದು, ಈಜಿಪ್ಟ್ ಗಣರಾಜ್ಯವಾಯಿತು. ಆ ದಿನಗಳಲ್ಲಿ ಈಜಿಪ್ಟ್ ಅಲಿಪ್ತ ಚಳವಳಿಯ ಆದ್ಯಪ್ರವರ್ತಕರಲ್ಲಿ ಒಂದಾಗಿ ಪ್ರಮುಖ ಪಾತ್ರ ವಹಿಸಿತ್ತು. ಸೂಯೆಜ್ ಕಾಲುವೆಯನ್ನು ರಾಷ್ಟ್ರೀಕರಣ ಮಾಡಿ, ಇಂಗ್ಲಿಷ್-ಫ್ರೆಂಚ್ ಸಾಮ್ರಾಜ್ಯಶಾಹಿಗಳ ದುರಾಕ್ರಮಣವನ್ನು ಎದುರಿಸಿ ನಿಂತಿತು. ಇಷ್ಟೆಲ್ಲ ಹಿನ್ನೆಲೆ ಇದ್ದಾಗ್ಯೂ ಈಜಿಪ್ಟಿಗೆ ಪ್ರಜಾಪ್ರಭುತ್ವ ವ್ಯವಸ್ಥೆಯ ಪರಂಪರೆ ಇಲ್ಲವಾಗಿದೆ. ೧೯೬೭ರಿಂದ ಈಜಿಪ್ಟ್‌ನಲ್ಲಿ ತುರ್ತು ಪರಿಸ್ಥಿತಿ ಕಾಯಿದೆ ಅಮಲಿನಲ್ಲಿದೆ. ಹಾಗಾಗಿ ಅದು ಬಹುಬೇಗ ಅಮೆರಿಕದ ಆಮಿಷಗಳಿಗೆ ಬಲಿಯಾಯಿತು. ಅಮೆರಿಕದ ಒತ್ತಡಗಳಿಗೆ ಮಣಿದು ಇಸ್ರೇಲಿಗೆ ಮಾನ್ಯತೆ ನೀಡಿ ಅದರೊಂದಿಗೆ ಒಪ್ಪಂದ ಮಾಡಿಕೊಂಡಿತು. ಎರಡು ಯುದ್ಧಗಳಲ್ಲಿ ಇಸ್ರೇಲಿನ ದುರಾಕ್ರಮಣವನ್ನು ಒಟ್ಟಾಗಿ ಎದುರಿಸಿದ್ದ ಅರಬ್ ರಾಷ್ಟ್ರಗಳಲ್ಲಿ ಒಡಕು ಉಂಟುಮಾಡಿದ್ದೇ ಈಜಿಪ್ಟಿನ ಆಡಳಿತೆ. ಈ ರಾಷ್ಟ್ರದ ಆಗುಹೋಗುಗಳಲ್ಲಿ ಯಾವತ್ತೂ ಸೇನೆ ಪ್ರಮುಖ ಪಾತ್ರ ವಹಿಸಿದೆ. ಅದರಿಂದಲೇ ಈಗಿನ ಬೆಳವಣಿಗೆಯ ಬಗ್ಗೆ ಎಚ್ಚರ ಅಗತ್ಯ.

ಅದೇನೇ ಇರಲಿ. ಈಜಿಪ್ಟಿನ ಜನತೆಯ ಶಕ್ತಿಯುತ ಹೋರಾಟ ಇಡೀ ಪಶ್ಚಿಮ ಏಷಿಯಾದಲ್ಲಿ ತಳಮಳ ಉಂಟುಮಾಡಿದೆ. ಹಾಗೆ ನೋಡಿದರೆ ಪಶ್ಚಿಮ ಏಷಿಯಾದಲ್ಲಿ ಈ ವರ್ಷಾರಂಭದಲ್ಲಿ ಸಂಚಲನ ಉಂಟುಮಾಡಿದ್ದು ಟ್ಯುನಿಷಿಯದ ಜನತೆಯು ನಡೆಸಿದ ಸುಮಾರು ಒಂದು ತಿಂಗಳ ಹೋರಾಟ. ಅದು ಬೆನ್ ಆಲಿಯ ಇಪ್ಪತ್ತಮೂರು ವರ್ಷಗಳ ಸರ್ವಾಧಿಕಾರಿ ಆಡಳಿತವನ್ನು ಅಂತ್ಯಗೊಳಿಸಿತು. ಸರ್ವಾಧಿಕಾರಿ ಬೆನ್ ಆಲಿ ಸೌದಿ ಅರೇಬಿಯದಲ್ಲಿ ಆಶ್ರಯ ಪಡೆದಿದ್ದಾನೆ. ಈ ಪ್ರದೇಶದಲ್ಲಿ ಅಮೆರಿಕದ ಕಟ್ಟಾ ಅನುಯಾಯಿ ಸೌದಿ ಅರೇಬಿಯ. ಇಲ್ಲಿನ ಭ್ರಷ್ಟ ಶ್ರೀಮಂತ ಅರಸು ಮನೆತನದ ಆಡಳಿತದ ವಿರುದ್ಧ ಜನ ಬೇಸತ್ತಿದ್ದಾರೆ. ಅದು ಯಾವಾಗ ಸ್ಫೋಟಗೊಳ್ಳುವುದೋ ನೋಡಬೇಕು. ಟ್ಯುನೀಷಿಯ ಮತ್ತು ಈಜಿಪ್ಟಿನ ಜನಾಂದೋಳನಗಳು ಈಗಾಗಲೇ ಪಶ್ಚಿಮ ಏಷಿಯಾದಲ್ಲಿ, ಇಡೀ ಆಫ್ರಿಕಾದಲ್ಲಿ ಒಂದು ರೀತಿಯ ಸರಣಿ ಪ್ರತಿಕ್ರಿಯೆಯನ್ನು ಉಂಟುಮಾಡಿದೆ. ರೊಟ್ಟಿ, ಸ್ವಾತಂತ್ರ್ಯ, ಸ್ವಾಭಿಮಾನ ಟ್ಯುನೀಷಿಯ ಜನರ ಕ್ರಾಂತಿಯ ಈ ಘೋಷಣೆ ಇಡೀ ಪ್ರದೇಶದಲ್ಲಿ ಮೊಳಗುತ್ತಿದೆ. ಮೊರಾಕ್ಕೋದಲ್ಲಿ ಜನತೆ ಬೆಲೆ ಏರಿಕೆ ವಿರುದ್ಧವಾಗಿ ಹೋರಾಟ ಪ್ರಾರಂಭಿಸಿದ್ದಾರೆ. ಆಲ್ಜೀರಿಯಾದಲ್ಲಿ ಜನತೆ ಆಹಾರ ಪದಾರ್ಥಗಳ ಬೆಲೆ ಏರಿಕೆ ವಿರೋಧಿಸಿ ನಡೆಸಿದ ಪ್ರದರ್ಶನಗಳಿಗೆ ಪ್ರತಿಫಲ ದೊರೆತಿದೆ. ಲಿಬಿಯಾದಲ್ಲಿ ನಲವತ್ತು ವರ್ಷಗಳಿಂದ ಅಧಿಕಾರಾರೂಢನಾಗಿರುವ ಮುಮ್ಮಾರ್ ಗಡಾಫಿ ವಿರುದ್ಧವಾಗಿ ಪ್ರತಿಭಟನೆ ಪ್ರಾರಂಭವಾಗಿದೆ. ಲೆಬನಾನ್‌ನಲ್ಲಿ ಪಶ್ಚಿಮ ರಾಷ್ಟ್ರಗಳ ಪರವಾಗಿದ್ದ ಸಾದ್ ಹಲೀರಿ ಆಡಳಿತ ಅಂತ್ಯಗೊಂಡು ಹಿಜ್ಬೊಲ್ಲಾ ಬೆಂಬಲಿತ ಸರಕಾರ ಅಧಿಕಾರಕ್ಕೆ ಬಂದಿದೆ. ಜೋರ್ಡಾನಿನಲ್ಲಿ ಸರಕಾರದ ವಿರುದ್ಧ ಜನತೆ ಪ್ರತಿಭಟನೆಯಲ್ಲಿ ನಿರತವಾಗಿದ್ದಾರೆ. ಆಹಾರ ಪದಾರ್ಥಗಳಿಗಾಗಿ ಜನ ರಸ್ತೆಗಿಳಿದಿದ್ದಾರೆ. ಯೆಮೆನ್‌ನಲ್ಲಿ ಮೊದಲ ಬಾರಿಗೆ ಜನ ಸರಕಾರದ ಬದಲಾವಣೆಗಾಗಿ ಬೀದಿಗಿಳಿದು ಹೋರಾಟ ಪ್ರಾರಂಭಿಸಿದ್ದಾರೆ. ಸೂಡಾನಿನಲ್ಲಿ ಇಪ್ಪತ್ತು ವರ್ಷಗಳಿಂದ ಅರಮನೆ ಕ್ರಾಂತಿಯಿಂದ ಅಧಿಕಾರಕ್ಕೆ ಬಂದ ಅಧ್ಯಕ್ಷ ಒಮರ್ ಅಲ್ ಬಷೀರ್ ವಿರುದ್ಧ ಪ್ರತಿಭಟನೆಗಳು ನಡೆದಿವೆ. ಅದಲ್ಲದೆ ಈ ದೇಶ ಇಬ್ಭಾಗವಾಗಲಿದೆ.

ಈ ಎಲ್ಲ ಬೆಳವಣಿಗೆಗಳಿಂದ ಪಾಶ್ಚಾತ್ಯ ರಾಷ್ಟ್ರಗಳು ಕಳವಳಗೊಂಡಿವೆ. ಪಶ್ಚಿಮ ಏಷಿಯಾದ ಸರ್ವಾಧಿಕಾರಿ ಆಡಳಿತಗಳು ಅವಕ್ಕೆ ಪ್ರಿಯವಾಗಿದ್ದುವು. ಈಜಿಪ್ಟಿನಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ಇತರರು ಹೋರಾಟ ಪ್ರಾರಂಭಿಸಿದ ಮೇಲೆ. ಮುಬಾರಕ್ ಮುಂದುವರಿಯುವುದು ಅಸಾಧ್ಯ ಎಂದು ತೋರಿದಾಗ ಅಮೆರಿಕ ಮಿಲಿಟರಿ ಆಡಳಿತದ ಪರವಾಗಿತ್ತು. ಇರಾನಿನಲ್ಲಿ ಆದಂತೆ ಈಜಿಪ್ಟಿನಲ್ಲಿ ಇಸ್ಲಾಮಿಕ್ ಆಡಳಿತ ಬಾರದಂತೆ ತಡೆಯುವುದು ಅದರ ಉದ್ದೇಶ. ಇದನ್ನು ಅಮೆರಿಕದ ವಿದೇಶಾಂಗ ಖಾತೆಯ ಕಾರ್ಯದರ್ಶಿ ಜನವರಿ ೩೦ರಂದು ಬಹಿರಂಗವಾಗಿಯೇ ಹೇಳಿದ್ದರು. ಪಶ್ಚಿಮ ಏಷಿಯಾದಲ್ಲಿ ಇಸ್ರೇಲನ್ನು ಬಿಟ್ಟರೆ ಅಮೆರಿಕದ ನೆರವನ್ನು ದೊಡ್ಡ ಪ್ರಮಾಣದಲ್ಲಿ ಪಡೆಯುತ್ತಿರುವ ಇನ್ನೊಂದು ದೇಶ ಈಜಿಪ್ಟ್. ಪ್ರತಿವರ್ಷ ಅದು ಎರಡು ಬಿಲಿಯನ್ ಡಾಲರ್ ನೆರವನ್ನು ಪಡೆದುಕೊಳ್ಳುತ್ತಿದೆ. ಅದಕ್ಕಾಗಿಯೇ ಪ್ರಾರಂಭದಲ್ಲಿ ಮುಬಾರಕ್‌ಗೆ ಬೆಂಬಲ ನೀಡಿ, ಸುಧಾರಣೆಗಳನ್ನು ತರಬೇಕೆಂದು ಸೂಚಿಸಿದ ಪಶ್ಚಿಮ ದೇಶಗಳು ನಂತರ ಚಳವಳಿ ಬೃಹತ್ತಾಗಿ ಹರಡಿದ ಮೇಲೆ ಅವು ರಾಜಕೀಯ ಪರಿವರ್ತನೆಗೆ, ಅಧಿಕಾರದ ಶಾಂತಿಯುತ ಹಸ್ತಾಂತರಕ್ಕೆ ಕರೆ ನೀಡಿದವು. ಅಮೆರಿಕದ ಅಧ್ಯಕ್ಷ ಒಬಾಮಾ ರಾಜಕೀಯ ಬದಲಾವಣೆಯನ್ನು ಪ್ರಾರಂಭಿಸಲು ಇದು ಸಕಾಲ ಎಂದು ಅಭಿಪ್ರಾಯಪಟ್ಟರು. ಫ್ರಾನ್ಸ್, ಇಟಲಿ, ಜರ್ಮನಿ, ಸ್ಪೇನ್ ಮೊದಲಾದ ದೇಶಗಳೂ ಕೂಡ ಇದೇ ನಿಲುವನ್ನು ತಳೆದುವು. ತೈಲ ಸಂಪದ್ಭರಿತ ಪಶ್ಚಿಮ ಏಷಿಯಾ ದೇಶಗಳು ತಮ್ಮ ಹಿಡಿತದಿಂದ ಕೈಜಾರಿ ಹೋದೀತೆಂಬ ಭೀತಿ ಈ ದೇಶಗಳನ್ನಾವರಿಸಿದೆ. ಲೆಬನಾನ್‌ನಲ್ಲಿ ಹಿಜ್ಬೊಲ್ಲಾ ಪಕ್ಷ ಅಧಿಕಾರಕ್ಕೆ ಬಂದಿರುವುದು ಇಸ್ರೇಲ್ ಮತ್ತು ಅಮೆರಿಕಗಳಿಗೆ ತಲೆನೋವಾಗಿದೆ. ಈಜಿಪ್ಟಿನಲ್ಲಿ 'ಮುಸ್ಲಿಮ್ ಬ್ರದರ್‌ಹುಡ್' ತಂಡ ಅಧಿಕಾರಕ್ಕೆ ಬರುವ ಭೀತಿ ಆವರಿಸಿತ್ತು. ಸೇನೆ ಆಡಳಿತ ವಹಿಸಿಕೊಂಡಿರುವುದು ಪಶ್ಚಿಮ ರಾಷ್ಟ್ರಗಳಿಗೆ ಸಮಾಧಾನ ತಂದಿದೆ.

ಈಜಿಪ್ಟಿನಲ್ಲಿ ಸೇನಾಡಳಿತ ಮುಂದೆ ಏನು ಕ್ರಮ ತೆಗೆದುಕೊಳ್ಳುವುದು ಎನ್ನುವುದನ್ನು ಕಾದು ನೋಡಬೇಕಾಗಿದೆ. ಕಾರ್ಮಿಕರ ಮುಷ್ಕರ ಮುಂದುವರಿಯುತ್ತಿದ್ದು, ಪ್ರದರ್ಶನಗಳೂ ಯಥಾಸ್ಥಿತಿಯಲ್ಲಿವೆ. ಈಗಾಗಲೇ ಸಂವಿಧಾನವನ್ನು ಸ್ಥಗಿತಗೊಳಿಸಿರುವ ಮಿಲಿಟರಿ ಆಡಳಿತ ತುರ್ತು ಪರಿಸ್ಥಿತಿಯನ್ನು ಮಾತ್ರ ಹಿಂತೆಗೆದುಕೊಂಡಿಲ್ಲ. ಇದು ಪ್ರದರ್ಶನಕಾರರ ಮುಖ್ಯ ಬೇಡಿಕೆಗಳಲ್ಲಿ ಒಂದು. ಬಂಧನದಲ್ಲಿರುವ ರಾಜಕೀಯ ಕೈದಿಗಳ ಬಿಡುಗಡೆ, ಪತ್ರಿಕಾ ಸ್ವಾತಂತ್ರ್ಯ ಮತ್ತು ವಾಕ್ ಸ್ವಾತಂತ್ರ್ಯ ಮತ್ತು ಚುನಾವಣೆಗಳಲ್ಲಿ ಭಾಗವಹಿಸಲು ಎಲ್ಲರಿಗೂ ಅವಕಾಶ – ಇವು ಪ್ರಮುಖ ಬೇಡಿಕೆಗಳು. ಸಂಧಾನಗಳು ನಡೆಯುತ್ತಿವೆಯಾದರೂ ಯಾವುದೂ ಖಚಿತವಾಗಿಲ್ಲ. ಒಟ್ಟಿನಲ್ಲಿ ಈಜಿಪ್ಟಿನಲ್ಲಷ್ಟೇ ಅಲ್ಲ, ಇಡೀ ಪಶ್ಚಿಮ ಏಷಿಯಾದಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ. ಇದು ಭ್ರಷ್ಟ ಸರ್ವಾಧಿಕಾರಿ ಆಡಳಿತಗಳಿಗೆ ಎಚ್ಚರಿಕೆಯ ಗಂಟೆ. ❍

# ಜನಪದ ಕಾವ್ಯದಲ್ಲಿ ಸ್ತ್ರೀ ಸಂವೇದನೆ



ಗಂಡು ಮೋಹಿಸಿ ಹೆಣ್ಣ ಹಿಡಿದಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾವುದೆಂದರಿಯಬೇಕು.

– ಹನ್ನೆರಡನೆಯ ಶತಮಾನದಲ್ಲಿ ವಚನಕಾರ್ತಿ ಗೊಗ್ಗವ್ವೆ ಹೇಳಿದ ಈ ಮಾತು ಇವತ್ತಿನ ಇಪ್ಪತ್ತೊಂದನೆಯ ಶತಮಾನದಲ್ಲಿ ನಿಂತು ನೋಡಲಾಗಿ ಸ್ತ್ರೀ ಸಮಾನತೆ, ಸ್ತ್ರೀ ಸ್ವಾತಂತ್ರ್ಯ ಎನ್ನುವುದು ಕೇವಲ ಪುಸ್ತಕೀಯ ಮಾತುಗಳಾಗಿವೆ. ಶತಮಾನಗಳಿಂದಲೂ ಹೆಣ್ಣು ಏನೆಲ್ಲಾ ಜವಾಬ್ದಾರಿಗಳಿಗೆ ಹೆಗಲುಕೊಟ್ಟಾಗಿದೆ. ಆದರೆ ಅವಳ ಸಮಸ್ಯೆಗಳಿಗೆ ಪರಿಹಾರ ಮಾತ್ರ ಶೂನ್ಯ. ಅವಳ ಭಾವನೆಗಳಿಗೆ ಕಿಂಚಿತ್ತೂ ಬೆಲೆಯಿಲ್ಲ. ಮನು ಮಹಾಶಯ ಹೇಳಿದಂತೆ ಅವಳನ್ನು ಪೂಜಿಸುವುದೂ ಬೇಡ, ಅವಳನ್ನು ತಿರಸ್ಕರಿಸುವುದೂ ಬೇಡ, ಸುಮ್ಮನೆ ಅವಳ ಪಾಡಿಗೆ ಅವಳನ್ನು ಬಿಟ್ಟುಬಿಡಿ. ಇಲ್ಲಸಲ್ಲದ ಮಾತುಗಳನ್ನಾಡಿ ಅವಳ ಆತ್ಮವಿಶ್ವಾಸಕ್ಕೆ ಧಕ್ಕೆ ತರುವುದು ಸರಿಯೇ ?

ಮಹಿಳೆ ಅಸಮರ್ಥಳು, ಅಬಲೆ ಎಂಬಂತಹ ಅವೇ ಹಳಸಿದ ಶಬ್ದಗಳನ್ನು ಪದೇ ಪದೇ ಬಳಸುವುದರಲ್ಲಿ ಯಾವ ಅರ್ಥವಿದೆ ? ಹೋಗಲಿ ಮಹಿಳೆ ಯಾವುದರಲ್ಲಿ ಹಿಂದೆ ಬಿದ್ದಿದ್ದಾಳೆ ಹೇಳಿ ? ದುಷ್ಟಶಕ್ತಿಗಳ ಕಪಿಮುಷ್ಟಿಯಿಂದ ಹೇಗೋ ಅವಳು ಪಾರಾಗಿ ತನ್ನ ಎಲ್ಲ ಅಡೆತಡೆಗಳನ್ನು ಬದಿಗೊತ್ತಿ ಆತ್ಮವಿಶ್ವಾಸದಿಂದ ಮುನ್ನಡೆಯುತ್ತಿದ್ದಾಳೆ, ಮುನ್ನಡೆಯಲೇಬೇಕು. ಎಲ್ಲಿಯವರೆಗೆ ಮಹಿಳೆ ಅಜ್ಞಾನದಿಂದ ಹೊರಬರುವುದಿಲ್ಲವೋ ಅಲ್ಲಿಯವರೆಗೆ ಅವಳು ಅಬಲೆ ಎಂಬ ಹಣೆಪಟ್ಟಿ ಕಟ್ಟಿಕೊಂಡು ದ್ವಿಸ್ತರ ನ್ಯಾಯಕ್ಕೆ ಮೂಕ ಬಲಿಪಶುವಾಗಬೇಕಾಗುತ್ತದೆ. ಕೇವಲ ಅವಳಲ್ಲಿ ಅಕ್ಷರ ತಿಳುವಳಿಕೆ ಮೂಡಿದರೆ ಸಾಲದು, ವೈಚಾರಿಕ ಕ್ರಾಂತಿ ಆಗಬೇಕು.

ತಾನು ಹೆಣ್ಣಾಗಿ ಹುಟ್ಟಿದ್ದೇ ತಪ್ಪು ಎಂಬ ಭಾವನೆ ಒಂದು ಕಾಲಕ್ಕೆ ಇತ್ತು, ಈಗಲೂ ಇದೆ, ಇಲ್ಲವೆಂದಲ್ಲ; ಹೆಣ್ಣು ಎಂದರೆ ಯಾವುದೇ ತಿಳಿವಳಿಕೆ ಇಲ್ಲದವಳು, ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ ಎಂದು ಏನೆಲ್ಲಾ ಹೇಳಿ ಅವಳನ್ನು ತಿರಸ್ಕಾರದಿಂದ ನೋಡುವುದು ಸಾಮಾನ್ಯವಾಗಿತ್ತು, ಈಗಲೂ ಆ ಹರಿತ, ಕಾಮುಕ ನೋಟಗಳು ಇವೆ, ಇಲ್ಲವೆಂದಲ್ಲ. ಎಲ್ಲಿಯವರೆಗೆ ಪ್ರಮೋದ ಮುತಾಲಿಕನಂಥ ಗೂಳಿಗಳು ಇರುವವೋ ಅಲ್ಲಿಯವರೆಗೆ ಹೆಣ್ಣಿನ ಮಾನರಕ್ಷಣೆ ಹೇಗೆ ಸಾಧ್ಯ ? (ಮೊನ್ನೆ ಮೊನ್ನೆ ನಡೆದ ಮಂಗಳೂರಿನ ಪಬ್ ದಾಳಿ ಇನ್ನೂ ಹಸಿಯಾಗಿದೆ.) ಸಂಸ್ಕೃತಿ, ಸಂಪ್ರದಾಯಗಳ ನೆಪದಲ್ಲಿ ಹೆಣ್ಣಿನ ಶೋಷಣೆ ನಿರಂತರವಾಗಿ ನಡೆದೇ ಇದೆ. ಹೆಣ್ಣಿಗೆ ಸಿಗಬೇಕಾದ ಸ್ಥಾನಮಾನಗಳು ಇನ್ನೂ ಸಿಕ್ಕಿಲ್ಲ. ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲಿನ ಬಗ್ಗೆಯಾಗಲಿ, ಮಹಿಳಾ ಮೀಸಲಾತಿಯ ಬಗ್ಗೆಯಾಗಲಿ, ಹಾಗೂ ವಿವಿಧ ಯೋಜನೆಗಳ ಬಗ್ಗೆಯಾಗಲಿ, ಯಾರೂ ಗಂಭೀರವಾಗಿ ಚರ್ಚಿಸಿಲ್ಲ.

ಇವೆಲ್ಲವನ್ನು ನೋಡಿದಾಗ ಜಾಗತೀಕರಣದಲ್ಲಿಯೂ ಮಹಿಳೆಯ ಬೌದ್ಧಿಕ ಸಾಮರ್ಥ್ಯ ವ್ಯರ್ಥವಾಗಿ ಹೋಗುತ್ತಲಿದೆ. ಅವಳು ಅಡುಗೆಮನೆಯನ್ನು ಬಿಟ್ಟು ಹೊರಬರುವುದೇ ದುಸ್ತರವಾದ ಒಂದು ಕಾಲ ಇತ್ತು, ಈಗ ಅವಳು ಹೊರಬಂದಿದ್ದಾಳೆ. ಆದರೂ ಅವಳ ಸ್ಥಿತಿ ಚಿಂತಾಜನಕವಾಗಿದೆ, ಶೋಚನೀಯವಾಗಿದೆ.

ಇಪ್ಪತ್ತೊಂದನೆಯ ಶತಮಾನದಲ್ಲಿಯೇ ಒಬ್ಬ ಸುಶಿಕ್ಷಿತ ಮಹಿಳೆಯ ಸ್ಥಿತಿ ಹೀಗಿರಬೇಕಾದರೆ, ಇನ್ನು ನಮ್ಮ ಜನಪದ ಗರತಿ, ಏನೂ ಅರಿಯದ ಮುಗ್ಧ ಹೆಣ್ಣು, ಅವಳ ಸ್ಥಿತಿ ಹೇಗಿದ್ದಿರಬೇಡ ?

ಜನಪದ ಕಾವ್ಯವು ಜನತೆಯ ಆಡುನುಡಿಯಿಂದ ತನ್ನ ಹುಟ್ಟನ್ನು ಪಡೆದು ಉದಾತ್ತ ವಿಚಾರಗಳಿಂದ ಅದ್ಭುತ ಶಕ್ತಿಯ ಸೂಕ್ಷ್ಮತಮ ಸಂವೇದನಾಶೀಲತೆಗಳನ್ನು ಪ್ರತಿನಿಧಿಸುತ್ತದೆ. ಗ್ರಾಮೀಣ ಬದುಕಿನ ವಿವಿಧ ಸ್ತರಗಳನ್ನು ಮನಮುಟ್ಟುವಂತೆ ಹೇಳುವ ಜನಪದ ಸಾಹಿತ್ಯ ಜನ್ಮ ಪಡೆದದ್ದು ತನ್ನ ಸಂತೋಷಕ್ಕಾಗಿ, ತನ್ನಂತೆ ಇರುವ ಇತರರ ಸಂತೋಷಕ್ಕಾಗಿ. ಒಟ್ಟಾರೆ ಹೇಳುವುದಾದರೆ ಗ್ರಾಮೀಣ ಬದುಕಿನ ಪ್ರತಿಬಿಂಬ ತೋರಿಸುವ ಕನ್ನಡಿಯೇ ಈ ಜನಪದ ಸಾಹಿತ್ಯ. ಅನುಭವಿಗಳ ಸಾವಿರಾರು ವರ್ಷಗಳ ಅನುಭವದ ಭಟ್ಟಿ ಇಳಿದು ಜನಪದ ಕಾವ್ಯ ಸುಶ್ರಾವ್ಯವಾಗಿ ಹೊರಹೊಮ್ಮಿದೆ. ಜನಸಾಮಾನ್ಯರಿಂದಲೇ ಹುಟ್ಟಿ ಬೆಳೆದು ಅವರಿಂದಲೇ ಉಳಿದುಕೊಂಡು ಬಂದಿರುವುದರಿಂದ ಇದರಲ್ಲಿ ತಾಯಿಯ ಎದೆಹಾಲಿನ ರುಚಿ ಇದೆ.

ತಾಯಿಯ ಎದೆಹಾಲಿನ ರುಚಿಯನ್ನು ಪಡೆದಂತಹ ಈ ಜನಪದ ಕಾವ್ಯದಲ್ಲಿ ಏನುಂಟು, ಏನಿಲ್ಲ? ಎಲ್ಲವೂ ಇದೆ. ಅದನ್ನು ಅನುಭವಿಸುವ ಮನಸ್ಸು ಬೇಕು, ಅಷ್ಟೆ. ತಾಯಿಯಾಗಿ, ಹೆಂಡತಿಯಾಗಿ, ಅತ್ತೆಯಾಗಿ, ಮಗಳಾಗಿ, ಸೊಸೆಯಾಗಿ, ಬಹುಮುಖ ವ್ಯಕ್ತಿತ್ವವನ್ನು ಹೊಂದಿದ ಅವಳಿಗೆ ಸಿಗಬೇಕಾದ ಗೌರವಾದರಗಳು ಸಿಕ್ಕಿಲ್ಲ. ಪ್ರೀತಿಯಿಂದ ವಂಚಿತಳಾದ ಅವಳು ಒಳಗೊಳಗೆ ಹೆಪ್ಪಿಟ್ಟ ಹಾಲಿನಂತೆ ಅವಳ ಮನಃಸ್ಥಿತಿ ಏನು ಎಂಬುದನ್ನು ಇಲ್ಲಿರುವ ಹಲವಾರು ಕಥನ ಗೀತೆಗಳು ಹಾಗೂ ಗೀತಗಳಲ್ಲಿ ನೋಡಬಹುದಾಗಿದೆ.

ಮೊದಲಿಗೆ ಉತ್ತರ ಕರ್ನಾಟಕದ ಜನಪ್ರಿಯ ಕಥನ ಗೀತೆ 'ಕೆರೆಗೆ ಹಾರ'. ಕಲ್ಲನಕೇರಿಯ ಮಲ್ಲನಗೌಡ ಊರಿಗೆ ಕೆರೆಯನ್ನು ಕಟ್ಟಿಸಿದ್ದಾನೆ. ಕೆರೆಯಲ್ಲಿ ನೀರಿಲ್ಲ, ಕಿರಿ

ಜನಪದ ಕಾವ್ಯವು ಜನತೆಯ ಆಡುನುಡಿಯಿಂದ ತನ್ನ ಹುಟ್ಟನ್ನು ಪಡೆದು ಉದಾತ್ತ ವಿಚಾರಗಳಿಂದ ಅದ್ಭುತ ಶಕ್ತಿಯ ಸೂಕ್ಷ್ಮತಮ ಸಂವೇದನಾಶೀಲತೆಗಳನ್ನು ಪ್ರತಿನಿಧಿಸುತ್ತದೆ. ಗ್ರಾಮೀಣ ಬದುಕಿನ ವಿವಿಧ ಸ್ತರಗಳನ್ನು ಮನಮುಟ್ಟುವಂತೆ ಹೇಳುವ ಜನಪದ ಸಾಹಿತ್ಯ ಜನ್ಮ ಪಡೆದದ್ದು ತನ್ನ ಸಂತೋಷಕ್ಕಾಗಿ, ತನ್ನಂತೆ ಇರುವ ಇತರರ ಸಂತೋಷಕ್ಕಾಗಿ. ಒಟ್ಟಾರೆ ಹೇಳುವುದಾದರೆ ಗ್ರಾಮೀಣ ಬದುಕಿನ ಪ್ರತಿಬಿಂಬ ತೋರಿಸುವ ಕನ್ನಡಿಯೇ ಈ ಜನಪದ ಸಾಹಿತ್ಯ. ಅನುಭವಿಗಳ ಸಾವಿರಾರು ವರ್ಷಗಳ ಅನುಭವದ ಭಟ್ಟಿ ಇಳಿದು ಜನಪದ ಕಾವ್ಯ ಸುಶ್ರಾವ್ಯವಾಗಿ ಹೊರಹೊಮ್ಮಿದೆ. ಜನಸಾಮಾನ್ಯರಿಂದಲೇ ಹುಟ್ಟಿ ಬೆಳೆದು ಅವರಿಂದಲೇ ಉಳಿದುಕೊಂಡು ಬಂದಿರುವುದರಿಂದ ಇದರಲ್ಲಿ ತಾಯಿಯ ಎದೆಹಾಲಿನ ರುಚಿ ಇದೆ.

ಪ್ರೊ॥ ದೇವಿಕಾ ಡಿ. ನಗರಕರ

ಸೊಸಿ ಭಾಗೀರಥಿಯನ್ನು ಹಾರವ (ಆಹುತಿ) ಕೊಡಬೇಕೆಂದು ಮನೆಯಲ್ಲಿ ಮಾತುಕತೆ ನಡೆದಾಗ ಭಾಗೀರಥಿಯ ಕಿವಿಗೆ ಆ ಮಾತು ಬೀಳದೆ ಇರಲಿಲ್ಲ. ಅಸಹಾಯಕಳಾದ ಭಾಗೀರಥಿ ಅಪ್ಪ ಅವ್ವನ ನೆಪ ಮಾಡಿ ಕೊಂಡು ತವರಿಗೆ ಹೋಗುತ್ತಾಳೆ. ಅಲ್ಲಿ ಎಲ್ಲರೂ ಕೇಳುವವರೇ :

*ಎಂದಿಲ್ಲದ ಭಾಗೀರಥಿ ಇಂದ್ಯಾಕ ಬಂದೆವ್ವ*
*ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ*
*ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತ*
*'ಇಟ್ಟರ ಇಡಲೇಳು ವಾಲಿಜೋಡು ಕೊಡುತ್ತೇನ'*
*ಎಂದಿಲ್ಲದ ಭಾಗೀರಥಿ ಇಂದ್ಯಾಕ ಬಂದೆವ್ವ*
*ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತ*
*'ಇಟ್ಟರ ಇಡಲೇಳು ಹೊಲಮನಿ ಕೊಡುತಿನ'*
*ತಲೆ ಬಾಗಿಲದಾಗ ಗೆಳತಿನ ಕಂಡಳು,*
*ಎಂದಿಲ್ಲದ ಭಾಗೀರಥಿ ಇಂದ್ಯಾಕ ಈ ಅಳುವು ?*
*ಅಂಜಿ ಹೇಳಲೆ ಗೆಳತಿ, ಅಳುಕಿ ಹೇಳಲೆ ಗೆಳತಿ*
*ಅಂಜಬ್ಯಾಡ ಗೆಳತಿ ಅಳುಕಬ್ಯಾಡ ಗೆಳತಿ*
*ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡ್ತಾರಂತ,*
*ಕೊಟ್ಟರ ಕೊಡಲೇಳು 'ಇಟ್ಟಾಂಗ ಇರಬೇಕ'*
*ಸರ್‍ರನೆ ಹೋದಳು ಬರ್‍ರನೆ ಬಂದಳು.*

ಹೆತ್ತವ್ವನ ಮುಂದೆ ಹೇಳಲಾರದ ತನ್ನ ನೋವನ್ನು ಗೆಳತಿಯ ಮುಂದೆ ತೋಡಿಕೊಂಡಾಗ, 'ಇಟ್ಟಾಂಗ ಇರಬೇಕ' ಎಂಬಲ್ಲಿನ ಧ್ವನಿ ವಾಚ್ಯವನ್ನು ಮೀರಿ ನಿಲ್ಲುತ್ತದೆ. ಗೆಳತಿಯೂ ಒಬ್ಬ ಹೆಣ್ಣು. ಹೆಣ್ಣಿನ ಭಾವನೆಗಳಿಗೆ ಇಲ್ಲಿ ಬೆಲೆಯೇ ಇಲ್ಲ, ಬಂದದ್ದನ್ನು ಅನುಭವಿಸಲೇಬೇಕು. ಇಲ್ಲಿ ಹೆಣ್ಣಿನ ಅತಂತ್ರ ಸ್ಥಿತಿ ಕಣ್ಣಿಗೆ ಕಟ್ಟುತ್ತದೆ. ಅವಳ ಜೀವ ಕುರಿ ಕೋಳಿಗಿಂತ ಕನಿಷ್ಠಮಟ್ಟದ್ದಾಗಿದೆ. ಅವಳಲ್ಲಿ ಪ್ರತಿಭಟನೆ ಮಾಡುವ ಸಾಮರ್ಥ್ಯವೇ ಇಲ್ಲ. ಇದು ವರವೋ ? ಶಾಪವೋ ?

ಇದರಂತೆ ಸ್ತ್ರೀ ಸಂವೇದನೆಯನ್ನು ಬಿತ್ತರಿಸುವ ದಕ್ಷಿಣ ಕರ್ನಾಟಕದ ಇನ್ನೊಂದು ಪ್ರಮುಖ ಕಥನ ಕವನ 'ಉತ್ತರೆ ದೇವಿ'.

*ಉತ್ತರೆ ನೀರಿಗ್ಹೋಗಿ ಮತ್ಯಾಕೆ ಬರಲಿಲ್ಲ*
*ಉತ್ತರ ದೇಶದ ಮಳೆ ಹೊದು ಕೆರೆತುಂಬಿ*
*ಬಸುರಿ ಮುಳ್ಳಡಿ ಅಡಗಿದ್ದೆ*

*ಅತ್ತೆ ಸೊಸೆಯರಿಗೆ ಹತ್ಯಾವ ಕಾಳಗ*
*ಉತ್ತು ಬಂದ ಮಗನಿಗೆ ಉಣಲಿಕ್ಕಿ ಹೇಳ್ಯಾಳೆ*
*ಉತ್ತುರು ದೇವೆಂಬೋ ಸೊಸೆ ಬೇಡ ಕಂದಯ್ಯ*
*ಬಿಟ್ಟುಬಿಡವಳ ಬಸವಿಯ.*

– ನೀರು ತರಲು ಹೋದ ಉತ್ತರೆ ತಡವಾಗಿ ಮನೆಗೆ ಬಂದದ್ದೆ ತಪ್ಪಾಯಿತು. ತಾನೂ ಒಂದು ಹೆಣ್ಣು ಎಂಬುದನ್ನು ಮರೆತ ಅತ್ತೆ ಮಗನ ಕಿವಿ ಊದುತ್ತಾಳೆ. ಅವಳು ಬಸವಿ, ಅವಳನ್ನು ಬಿಟ್ಟುಬಿಡು ಎಂದು ಹೇಳಿ ಮನೆಯಿಂದ ಹೊರಹಾಕಿದಾಗ, ತವರುಮನೆಗೆ ಬಂದ ಉತ್ತರೆಗೆ ಚಿಕ್ಕಮ್ಮನ ಕೈಗೊಂಬೆಯಾಗಿದ್ದ ತಂದೆಯ ಆಸರೆಯೂ ತಪ್ಪಿದಾಗ ಉತ್ತರೆಯ ಮಳೆಯಾಗಿ ಹೋಗು ಎಂಬುದರೊಂದಿಗೆ ಕಥನ ಕವನ ಅಂತ್ಯ ಕಾಣುತ್ತದೆ.

ಒಂದು ಹೆಣ್ಣು ಮಳೆಯಿಂದ ತೊಯಿಸಿಕೊಳ್ಳ ಬಾರದೆಂದು ಗಿಡದ ಆಸರೆಗೆ ನಿಂತಿದ್ದೇ ತಪ್ಪಾಯಿತೇ ? ಹೋಗಲಿ, ಗಂಡನೆಂಬ ಪ್ರಾಣಿಗಾದರೂ ತನ್ನ ಹೆಂಡತಿಯ ಮೇಲೆ ನಂಬಿಕೆ ಇರಲಿಲ್ಲವೇ ? ಹೆಣ್ಣಿನ ಭಾವನೆಗಳ ಕೂಡ ಚೆಲ್ಲಾಟವಾಡುವ ಇಂಥ ಮನಸ್ಸುಗಳಿಂದ ಮುಕ್ತಿಯಾವಾಗ ?

ಇನ್ನೂ ಹಲವಾರು ಜನಪದ ಗೀತೆಗಳಲ್ಲಿ ಹೆಣ್ಣು ತನ್ನ ಭಾವನೆಗಳನ್ನು ಬಿಚ್ಚಿ, ಮುಚ್ಚಿ ಇಡಲು ಯತ್ನಿಸಿದ್ದಾಳೆ. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ಹೇಳಲು ಇಷ್ಟಪಡುವೆ.

ನಮ್ಮ ಜನಪದ ಗರತಿಯಲ್ಲಿ ಹೊಂದಾಣಿಕೆ, ಸಹಕಾರ ಮನೋಭಾವ ಬಿತ್ತರಿಸುವ ಈ ಗೀತೆ :

*ಬೀಸಲಿಕ ಕುಂತೀನಿ ಕೂಸ ನನ ತೊಡಿಮ್ಯಾಲ*
*ವಾಸ್ಯಾಡಬ್ಯಾಡ ನೆಗೆಯಣ್ಣಿ। ನಿನ ಕೆಲಸ*
*ತಾಸೊತ್ತಿನ್ಯಾಗ ಮುಗಿಸೇನು.*

– ಅತ್ತೆ ಸಿಟ್ಟಿಗೆ ಬಂದು ಬೈಗುಳ ಮಳೆ ಸುರಿಸಿದರೂ ಶಾಂತವಾಗಿಯೇ ಉತ್ತರ ಕೊಡುವ ಅವಳ ಔದಾರ್ಯಕ್ಕೆ ನಾವು ತಲೆದೂಗಲೇಬೇಕು.

*ಅತ್ತೀಯ ಮನೆಯಾಗ ಅರವತ್ತು ಗಂಗಾಳ*
*ಬೆಳಗತೀನತ್ತಿ ಬೈಬ್ಯಾಡ। ತವರವರು*
*ಸರಮುತ್ತ ಮಾಡಿ ಸಲವ್ಯಾರ.*

ಗಂಡನೆನಿಸಿಕೊಂಡವ ಪರಸ್ತ್ರೀಯ ಸಂಗ ಮಾಡಿ ದಾಗಲೂ ಈ ಗರತಿ ತನ್ನ ಸಂಸಾರವನ್ನು ಹುಳಿಮಾಡಿ ಕೊಳ್ಳದೆ ಹೀಗೆ ಹೇಳುತ್ತಾಳೆ :

*ಗಂಡ ಪಂಡಿತರಾಯ ರಂಡೀಯ ಮಾಡಿದರ*
*ಭಂಡ ಮಾಡವರ ಮಗಳಲ್ಲ। ಕೊರಳಾನ*
*ಗುಂಡ ಬೇಡಿದರ ಕೊಡವೇನ*

ಇನ್ನೊಂದು ಗೀತ ಹೊಸ ಪರಿಸರದಲ್ಲಿ ಹೊಂದಿ ಕೊಳ್ಳಲಿಕ್ಕಾಗದೆ ಅದೇ ತಾನೇ ಮದುವೆಯಾದ ತರುಣಿಗೆ ತವರಿನ ಕಡೆಗಿರುವ ಹಂಬಲ ಎದ್ದುಕಾಣುತ್ತದೆ :

*ಆಷಾಢ ಮಾಸ ಬಂದೀತವ್ವ*
*ಅಣ್ಣ ಬರಲಿಲ್ಲ ಕರಿಲಾಕ ಸುವ್ವಲಾಲಿ*
*ಸುವ್ವಾಲಿ*

ಹೆಣ್ಣು ತ್ಯಾಗಶೀಲೆ, ಸಹನಶೀಲೆ ಎಂದು ಏನೆಲ್ಲಾ ಹಣೆಪಟ್ಟಿ ಕಟ್ಟಿ ಗಂಡು ಮಾತ್ರ ಚಿಂತಿಲ್ಲದ ಕೋಣದ ಹಾಗೆ ಕಂಡಕಂಡಲ್ಲೆಲ್ಲ ಬಾಯಿ ಹಾಕುತ್ತ ತಿರುಗಿದರೂ ಸಹನೆಯ ಸಾಕಾರಮೂರ್ತಿ ಹೆಣ್ಣು ಹೀಗೆ ಹೇಳುತ್ತಾಳೆ. ಯಾರಿಗೆ ಗೊತ್ತು, ಇದರ ಕರ್ತೃ ಹೆಣ್ಣೋ, ಗಂಡೋ ?

*ಚಿಂತಾಕು ಇಟಗೊಂಡು ಚಿಪ್ಪಾಡಿ ಬಳಿವಾಕಿ*
*ಚಿಂತಿಲ್ಲವೇನ ನಿನಗೇಟ ಚಿಂತಿಲ್ಲವೇನ। ನಿನಗೇಟ*
*ನಿನಗಂಡ ಅಲ್ಲೊಬ್ಬಳ ಕೂಡ ನಗತಿದ್ದ.*

*ನಕ್ಕರ ನಗಲೇಳ ನಗುಮುಖದ ಕ್ಯಾದತಿ*
*ನಾ ಮುಚ್ಚಿ ಮುಡಿದ ಪರಿಮಳದ। ಆ ಹೂವ*
*ಅವಳೊಂದು ಘಳಿಗಿ ಮುಡಿಯಲಿ*

ಇನ್ನು ಹೆಣ್ಣಿನ ಜನ್ಮ ಸಾರ್ಥಕವಾಗಬೇಕಾದರೆ, ಬದುಕು ಹಸನಾಗಬೇಕಾದರೆ, ಅವಳು ತಾಯಿಯಾದಾಗಲೆ, ಇಲ್ಲದಿದ್ದರೆ ಸಮಾಜ ತನ್ನನ್ನು ಅಂಗೀಕರಿಸುವುದಿಲ್ಲ ಎಂಬ ಭಾವನೆ ಅವಳದು. ಅದಕ್ಕಾಗಿ ಅವಳು ಹರಕೆ ಹೊರದ ದೇವರುಗಳಿಲ್ಲ.

*ಹೆಣ್ಣು ಜನ್ಮಕೆ ಬಂದೆ, ಮಣ್ಣು ಮಾಡಲಿ ಬೇಡ*
*ಹೆಣ್ಣುತನ ಶಿವನೆ ಜಗದಾಗ। ಕೈಮುಗಿವೆ*
*ಕಂದನ ಕೊಟ್ಟು ಕಡಿಮಾಡು.*

ಇದ್ದ ದೇವರಿಗೆಲ್ಲ ಹರಕೆ ಹೊತ್ತರೂ ಅವಳ ಆಶೆ ಈಡೇರಿಲ್ಲ. ಮಾನಸಿಕ ವೇದನೆ ಅವಳನ್ನು ಹಿಂಡಿ ಹಿಪ್ಪಿಯನ್ನಾಗಿ ಮಾಡಿದೆ. ಬಾಗಿಲ ಮುಂದಿನ ಮರದ ಮೇಲೆ ಗಿಳಿ ಬಂದು ಕುಂತರೆ, ಆ ಗಿಳಿ ತನ್ನನ್ನು ಹಂಗಿಸಿದಂತೆ ಭಾಸವಾಗುತ್ತದೆ :

*ಬಂಜಿ ಬಾಗಿಲದಾಗ ಅಂಜೂರಿ ಗಿಡ ಹುಟ್ಟಿ*
*ಟೊಂಗಿ ಟೊಂಗೆಲ್ಲ ಗಿಳಿ ಕೂತು। ಹಾಡ್ಯಾವ*
*ಬಂಜೇಯ ಬದುಕು ಹೆರವರಿಗಿ*

– ಹೀಗೆ ತಾನು ತಾಯಿಯಾಗಲಿಲ್ಲವಲ್ಲಾ ಎಂದು ಒಂದೆಡೆ ಈ ಗರತಿ ನೊಂದರೆ, ಇನ್ನೊಂದೆಡೆ ಮುದುಕ ಗಂಡನ ಮಾಡಿಕೊಂಡು ಒಳಗೊಳಗೆ ಕೊರಗುತ್ತಿದ್ದಾಳೆ. ಕೇವಲ ಬಂಗಾರದಿಂದೇನು ಪ್ರಯೋಜನ ? ಪ್ರಾಪಂಚಿಕ ಸುಖದಿಂದ ಅವಳು ವಂಚಿತಳಾಗಿದ್ದಾಳೆ. ಹೆಣ್ಣು ಎಂದರೆ ಹುಣ್ಣು ಎಂದು ಭಾವಿಸಿದ ಅದೆಷ್ಟೋ ಹೆತ್ತವರು, ಅವಳ ಮನಸ್ಸನ್ನು ಅರಿಯದೇ ಮದುವೆ ಮಾಡಿ ಕೈ ತೊಳೆದು ಕೊಂಡುಬಿಡುತ್ತಾರೆ.

*ಮದ್ದು ಗುಣಕಿ ಗಿಡಾ ಉದ್ದ ಬೆಳೆದರೇನು ?*
*ಮುದುಕ ಗಂಡನ ಮದಿವ್ಯಾಗಿ। ಆ ಬಾಲಿ*
*ಇದ್ದ ಬಂಗಾರ ಇಡವಳ್ಳ*

– ಕೊನೆಗೂ ಆ ಗರತಿಯ ಸಹನೆಯ ಕಟ್ಟೆಯೊಡೆದು ತಾಯಿ ಮತ್ತು ಗೆಳತಿಯ ಮುಂದೆ ಜರೂರಿ ವಿಷಯವನ್ನು ಹೇಳಿ ಎದೆ ಹಗುರಮಾಡಿಕೊಳ್ಳಲು ಯತ್ನಿಸಿದ್ದಾಳೆ :

*ತಾಯವ್ವ ನಿನ ಮುಂದ ತಾರೀಪೇನ್ಹೇಳಲಿ*
*ತಾಯಿ ನನ ಜೀವ ಸೊಗಸಿಲ್ಲ ಬಾಳೀಯ*
*ಹಣಗ್ಯಾಗ ಹಣ್ಣ ಕಳಿತಂಗ*

ಹುದುಲಾಗ ಹುದುಗಿಕೊಂಡ ಅನುಭವ ಅವಳದು. ತನ್ನ ಒಡಲಾಳದ ನೋವನ್ನು ಯಾರ ಮುಂದೆ ಹೇಳಿಕೊಳ್ಳಬೇಕು ? ಮೇಲೆ ನೋಡಿದರೆ ಬಹಳ ಸುಂದರವಾಗಿ ಕಾಣುವ ಇವಳ ಜೀವನ ಒಳಗೊಳಗೆ ಬಾಳೀಯ ದಿಂಡಿನಂತೆ ಕೊಳೆಯುತ್ತಿದ್ದಾಳೆ.

*ಕಂಡೆಂತ ಗೆಳೆತವ್ವ ಉಂಡೆಂತ ಕೇಳಿದರ*
*ಉಂಡೆ ಬಾ ಗೆಣತಿ ಸುಖವಿಲ್ಲ। ಬಾಳೀಯ*
*ದಿಂಡ ನೀರಾಗ ಕೊಳೆತ್ಹಾಂಗ*

ಹೀಗೆ ಹೆಣ್ಣು ಜೀವನದ ಕಷ್ಟ-ಕಾರ್ಪಣ್ಯಗಳನ್ನು ಬಿತ್ತರಿಸುವ ನಮ್ಮ ಜನಪದ ಸಾಹಿತ್ಯ ತನ್ನದೇ ಆದ ಒಂದು ಸೊಗಡನ್ನು, ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿದೆ.

ಜನಪದ ಹಾಡುಗಳು ಕೇವಲ ಸಾಹಿತ್ಯ ಅಲ್ಲ; ಸಂಗೀತ ಮತ್ತು ಸಾಹಿತ್ಯಗಳೆರಡನ್ನೂ ಕೂಡಿಯೇ ಹೊರಹೊಮ್ಮಿದ ಶರೀರ ಅವುಗಳದ್ದು ಎಂದು ಹುಚ್ಚು ಮನಸ್ಸಿನ ಹತ್ತು ಮುಖಗಳ ಅಜ್ಜ ಶಿವರಾಮ ಕಾರಂತರ ಅನಿಸಿಕೆ.

ಇಂಥ ಸಾಹಿತ್ಯಕ್ಕೆ ಮೂಗುಮುರಿಯುವ ಮಡಿವಂತಿಕೆಯ ಜನರು ಇದ್ದಾರೆ. ಶಿಷ್ಟ ಸಾಹಿತ್ಯಕ್ಕಿಂತ ನಮ್ಮ ಜನಪದ ಸಾಹಿತ್ಯವೇನೂ ಹಿಂದೆಬಿದ್ದಿಲ್ಲ. ಅದಕ್ಕೆ ಅವರದೇ ಆದ ವಿಶಿಷ್ಟ ಗುಣ ಇದೆ. ಇಂದಿನ ಜಾಗತೀಕರಣದ ಕರಿಛಾಯೆಯಲ್ಲಿ ಬದುಕುತ್ತಿರುವ ನಾವುಗಳೆಲ್ಲ ಅದನ್ನು ಉಳಿಸಿ ಬೆಳೆಸಬೇಕಾಗಿದೆ.

**ಪ್ರೊ॥ ದೇವಿಕಾ ಡಿ. ನಗರಕರ**
ಶಿವಾನಂದ ಮಹಾವಿದ್ಯಾಲಯ, ಕಾಗವಾಡ




# ಸೊಂಪಾಗಿ ಸುರಿದರೆ ಸಾಕಿತ್ತೋ ಮಳೆರಾಯ

**ಟಿ. ಎಸ್. ಗೊರವರ**

**ಸಂ**ಜೆ ಐದರ ಹೊತ್ತು. ಅಷ್ಟೂ ಹೊತ್ತು ಜೂಜು ಕಟ್ಟಿದವರಂತೆ ಬಿಡದೇ ಸುರಿದ ಮಳೆ ಸುಸ್ತಾಗಿ ಇಷ್ಟಿಷ್ಟೇ ಸುರಿಯತೊಡಗಿತು. ಮಳೆಯಿಂದಾಗಿ ತಂಗಾಳಿ ಅಂಬೆಗಾಲಿಡತೊಡಗಿತ್ತು. ಈ ಚೂರುಪಾರು ತಂಗಾಳಿ ಕಾದ ಕುಲುಮೆಯಂತಾಗಿದ್ದ ನನ್ನ ಮನಸ್ಸಿಗೆ ಚಾಮರ ಬೀಸಿದರೂ ತಟಗೂ ಜಗ್ಗಲಿಲ್ಲ. ಗ್ರಾಮೀಣ ವರದಿಗಾರ ಮಹಾಶಯರು ತಮ್ಮ ಪಾಂಡಿತ್ಯವನ್ನೆಲ್ಲಾ ಅಳೆದು ಸುರಿದು ಉಪಸಂಪಾದಕನ ಶಾಣ್ಯಾತನಕ್ಕೆ ಸವಾಲು ಎಸೆಯುವಂತೆ ಕಳಿಸಿದ ಸುದ್ದಿಗಳನ್ನು ಎಡಿಟ್ ಮಾಡುವುದರೊಳಗೆ ತಲೆ ದಿಮುಗುಡತೊಡಗಿತ್ತು. ಬಿಸಿ ಹಬೆಯಾಡುವ ಚಹಾ ಕುಡಿಯಲು ಮನಸ್ಸು ಮಕ್ಕಳಂತೆ ಹಟ ಹಿಡಿಯಿತು. ''ಅತಿ ಚಾ ಕುಡಿಬ್ಯಾಡಪೋ...'' ಎಂದು ಅಕ್ಕರೆಯಿಂದ ಬಯ್ದು ಹೇಳಿದ ಅವ್ವನ ಮಾತು ನೆನಪಿನ ಸಿವಡಿನೊಳಗೆ ಮಿಸುಗಾಡಿತು. ''ಚಾ ಕುಡಿದ್ರ ಹಸಿವುಗಟ್ಟುತ್ತ. ಅದ್ರಾಗ ನೀನು ಇಪರೀತ ಚಾ ಕುಡಿಯಾಂವ. ಚಾ ಅಂದ್ರ ನಿನ್ಗ ಶರಬತ್ತು ಆದಂಗಾಗೈತಿ. ಅದ್ರ ಬದಲಿ ಏನಾದ್ರು ಹಣ್ಣುಪಣ್ಣು ತಿನ್ನು ...'' ಅಂತ ಹೇಳಿದ ಅವ್ವನ ಮಾತನ್ನು ಗಾಳಿಗೆ ತೂರಿ ಆಫೀಸಿನಿಂದ ತುಸುವೇ ದೂರವಿರುವ ಫಾತೀಮಾ ಆಂಟಿಯ ಚಾದಂಗಡಿ ಕಡೆಗೆ ಪಾದ ಬೆಳೆಸಿದೆ.

ಮೊಬೈಲ್ ರಿಂಗಣಿಸತೊಡಗಿತು. ಮೊಬೈಲ್ ದಿಟ್ಟಿಸಿದರೆ ಅಪರಿಚಿತ ನಂಬರು. ಅದೂ ಲ್ಯಾಂಡ್‌ಫೋನಿಂದ ಬಂದ ಬ್ಯಾರೆ ರಾಜ್ಯದ ಕರೆ. ನಿತ್ಯ ಇಪ್ಪತ್ತೆಂಟು ಸಲ ಕಾಲ್ ಮಾಡಿ ನೂರೆಂಟು ಆಫರ್‌ಗಳ ಆಮಿಷವೊಡ್ಡಿ ಕಿರಿ ಕಿರಿ ಕೊಡುವ ಮೊಬೈಲ್ ಕಂಪನೀದು ಇರಬೇಕೆನಿಸಿ ದಿವ್ಯ ನಿರ್ಲಕ್ಷ್ಯದಿಂದ ರಿಸಿವ್ ಮಾಡಿ ಕಿವಿಗಿಟ್ಟುಕೊಂಡೆ. ನನ್ನ ಊಹೆ ತಪ್ಪಾಗಿತ್ತು. ಆ ಕಡೆಯ ಧ್ವನಿ ಸಂಕೋಚದಿಂದ, ಮುದುಡಿದ ಮಾತುಗಳಿಂದ ತನ್ನ ಪರಿಚಯ ಮಾಡಿಕೊಂಡಿತು. ನನ್ನ ಕಿವಿಗಳಿಗೆ ನಂಬಲಾಗಲಿಲ್ಲ. ಅಂವ ನನ್ನ ಜೊತೆಗೆ ಹತ್ತನೆತ್ತದ ತನಕ ಓದಿ ಅಂಕಿಸಂಖ್ಯೆ ಒಲಿಯದೆ ಗಣಿತದಲ್ಲಿ ಫೇಲಾಗಿ ಗೋವಾದಲ್ಲಿ ಟಿಪ್ಪರ್ ಗಾಡಿ ಹೊಡೆಯುತ್ತಿರುವ ಚಡ್ಡಿ ದೋಸ್ತ. ಅದ್ಯಾರದೋ ಕಡೆಯಿಂದ ನನ್ನ ನಂಬರ್ ಇಸಗೊಂಡು ಫೋನ್ ಮಾಡಿದ್ದ. ಆಫೀಸಿನಲ್ಲಿ ಹಲ್ಲೂ ಕಾಣದಂತೆ ತುಟಿ ಅಗಲಿಸುವ, ಒಂದು ಮಾರ್ಕ್‌ನ ಪ್ರಶ್ನೆಗೆ ಉತ್ತರ ನೀಡಿದಂತೆ ಮಾತಾಡುವ, ಜಗತ್ತಿನ ಹಿರೇತನವನ್ನು ತಲೆ ಮ್ಯಾಲೆ ಹೊತ್ತುಕೊಂಡವರಂತೆ ಗಂಭೀರವಾಗಿರುವವರನ್ನು ನೋಡಿ ನೋಡಿ ಸಾಕಾಗಿ ಬೆವರತೊಡಗಿದ್ದ ಮನಸ್ಸಿಗೆ ಅವನ ಎದೆಯಾಳದಿಂದ ಒತ್ತರಿಸಿಕೊಂಡು ಬಂದ ನನ್ನೂರ ನೆಲದ ಅಪ್ಪಟ ಜವಾರಿ ಮಾತುಗಳು ನನ್ನೊಳಗೆ ದಿವ್ಯವಾದ ಆನಂದ ಚಿಲ್ಲನೆ ಚಿಮ್ಮುವಂತೆ ಮಾಡಿದವು. ಅವನ ಸಂಗಡ ಮಾತಾಡದೆ, ಅವನನ್ನು ನೋಡದೆ ಅದೆಷ್ಟೋ ಶ್ರಾವಣ ಕಳೆದಿದ್ದವು. ನನ್ನೊಳಗೆ ವಸಂತದ ಸಂಭ್ರಮ ಚಿಗುರೊಡೆದು ಬಾಲ್ಯದ ನೆನಪುಗಳು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಸಂತಸದಿಂದ ತಕಥೈ ಕುಣಿಯತೊಡಗಿದವು.

''ನಾನು ನೀನು ಮಾತಾಡ್ದ ಎಷ್ಟಾಕೊಂಡು ದಿನ ಆತು. ಹೈಸ್ಕೂಲು ಹುಡ್ರು ನೋಡಿದ್ರ ನಿನ್ನ ನೆನ್ಪು ಬರುತ್ತ. ಮಾಸ್ತರ್ನ ಸಿಕ್ಕಾಪಟ್ಟೆ ಕಾಡಿಸಿದ್ದು, ಮೂಲಿ ಮನಿ ಸಂಗಪ್ಪಜ್ಜಂದು ಪಟಗ ಕಸ್ಗೊಂಡು ಮ್ಯಾಳಿಗಿ ಮ್ಯಾಗ ಒಗೆದು ಓಡಿ ಹೋಗಿದ್ದು, ರೂಪಾಳಿಗೆ ಕಣ್ಣು ಹೊಡೆದಿದ್ದನ್ನು ಆಕಿ ಮಾಸ್ತರಿಗೆ ಹೇಳಿ ಬಾಯ್ತುಂಬ ಬಯ್ಸಿ ಹಿರೋಯಿನಿಯಂಗ ಮೆರೆದಿದ್ದು, ಹುಂಚಿಹಣ್ಣು, ಬಾರಿಹಣ್ಣು, ಗೊಂಜಾಳ, ಸಿಂಗಾ,

ಅಲಸಂದಿ, ಸೌತೆಕಾಯಿ ತುಡುಗು ಮಾಡಿ ತಿಂದದ್ದು, ಕಳಕಪ್ಪನ ಜಾತ್ರ್ಯಾಗ ಜೋಗ್ಯಾರ ಅಂಗಡ್ಯಾಗ ಗಾಡಿ ಕಳ್ಳತನ ಮಾಡಿ ಸಿಕ್ಕು ಬಿದ್ದು ಹೊಡ್ತಾ ತಿಂದದ್ದು ಏಕಾಏಕಿ ಒಮ್ಮೊಮ್ಮೆ ನೆಪ್ಪಾಗಿ ಖುಷಿ ಆಗುತ್ತ. ಯಾಕರ ದೊಡ್ಡಾರು ಆದ್ವಿ ಅಂತ ಅನಿಸುತ್ತ. ನಮ್ಮ ಹೈಸ್ಕೂಲು ಜೀವ್ನ ಬಾಳ ಅಂದ್ರ ಬಾಳ ಚೆಂದ ಇತ್ತು ನೋಡು. ಆ ದಿನಗಳನ್ನು ಕನಸು ಮನಸಿನ್ಯಾಗ ನೆನಸ್ಕೊಂಡು ಮತ್ತೊಮ್ಮೆ ಬಾ ಅಂದ್ರು ಬರೋಲ್ಲ. ಅದೆಲ್ಲ ಹೋಗ್ಲಿ. ನೀನು ಆರಾಮದಿಯಲ. ಕೆಲಸ ಹೆಂಗ ನಡದೈತಿ. ಏ, ಈ ಸಲ ಊರಿಗೆ ಹೋಗ್ಬೇಕಾದ್ರ ನನ್ಗ ಫೋನು ಮಾಡು. ನಾನೂ ಊರಿಗೆ ಬರ್ತೀನಿ. ಒಂದಿಷ್ಟು ಕಷ್ಟ-ಸುಖ ಹಂಚಿಗೊಳ್ಳೋನು...'' ಅಂತ ಬಾಳ ಕಕ್ಕುಲಾತಿ ತೋರಿದ.

ನಾನೂ ಊರಿನ ಮುಖ ನೋಡದೆ ತುಂಬಾ ದಿನವಾಗಿತ್ತು. ಚಡ್ಡಿ ದೋಸ್ತನ ಮಾತು ಕೇಳಿದ ನಂತರ ಊರಿನ ಸವಿ ಸವಿಯಾದ ನೆನಪುಗಳು ಮನಸಿನ ಅಂಗಳದಲ್ಲಿ ಚೆಲ್ಲಿಕೊಂಡು ಘಮಗುಡತೊಡಗಿದವು. ಈ ಬದುಕಿನ ತಿರುವುಗಳೇ ಹಾಗೇನೋ. ಯಾವ ಪುಣ್ಯಾತ್ಮನ ನಿಲುಕಿಗೂ ಸಿಗುವುದಿಲ್ಲ. ಉದ್ಯೋಗವಿಲ್ಲದೆ ಉರಿ ಬಿಸಿಲು ಹೊತ್ತು ಬಣಗುಡುತ್ತಿದ್ದ ಖಾಲಿ ದಿನಗಳಲ್ಲಿ ಹೊಟ್ಟೆ ಹೊರೆಯಲು ಎಂತದೋ ಒಂದು ನೌಕರಿ ಸಿಕ್ಕರೆ ಸಾಕೆನಿಸುತ್ತಿತ್ತು. ಹೊಟ್ಟೆ ಹೊರೆಯಲು ಎನ್ನುವುದಕ್ಕಿಂತ ಊರ ಜನರ, ಮನೆ ಮಂದಿಯ ಬಾಯಿಂದ ''ನಯಾ ಪೈಸೆ ಕೆಲಸಕ್ಕೂ ಬಾರದವನು...'' ಅಂತೆನ್ನುವ ನಿಂದನೆಯ ಮಾತುಗಳ ಅಡಕತ್ತರಿಯಿಂದ ತಪ್ಪಿಸಿಕೊಳ್ಳಬೇಕಿತ್ತು.

ಕೈಗೆ ಏನೊಂದೂ ಕೆಲಸವಿಲ್ಲದೆ ಮುಂಜಾನೆ ಚಾದಂಗಡಿಯಲ್ಲಿ ಪೇಪರು ಓದುತ್ತಾ, ಅಲ್ಲಿದ್ದವರ ಜೊತೆಗೆ ರಾಜಕಾರಣವನ್ನು ಅರೆದು ಕುಡಿದವನಂತೆ ಹರಟುತ್ತಿದ್ದೆ. ಈ ಹರಟೆ ಬಿಗಿಯುವುದರಲ್ಲೇ ಮುಂಜಾನೆ ಮುಗಿದು, ಮಧ್ಯಾಹ್ನ ಕಳೆದು ಹೈಸ್ಕೂಲು ಬಿಡುವ ಹೊತ್ತಾಗುತ್ತಿತ್ತು. ಸಿನೇಮಾ ನೋಡಿ ಹುಡುಗರ ಕಡೆ ಭಯ ಬಿಟ್ಟು ಕುಡಿನೋಟ ಬೀರುತ್ತಿದ್ದ ಹೈಸ್ಕೂಲು ಹುಡುಗಿಯರ ಚಂದವನ್ನು ಕಣ್ತುಂಬಿಕೊಳ್ಳಲು ಅವರು ಬರುವ ದಾರಿಯ ಕಡೆ ಹೋಗುತ್ತಿದ್ದೆವು.

ಹೀಗೆ ದಿನಗಳು ಅರಿವಿಗೆ ಬಾರದಂತೆ ಒಂದೊಂದಾಗಿ ಜಾರತೊಡಗಿದವು. ಮೂದಲಿಕೆಯ ಮಾತುಗಳು ದಿನದಿಂದ ದಿನಕ್ಕೆ ಕರ್ಣಕಠೋರವಾಗತೊಡಗಿದ್ದವು. ಆಗ ಒಂದು ನೌಕರಿ ಸಿಕ್ಕರೆ ಸಾಕು ಅಂತ ಸಾವಿರ ಸಾವಿರ ಸಲ ಅಂದುಕೊಂಡದ್ದು ಖರೆ. ಅಂದುಕೊಂಡ ಮಾತುಗಳು ಇನ್ನೂ ಹಸಿರಿರುವಾಗಲೇ ಕೆಲಸ ಸಿಕ್ಕು ತಲೆಯ ಮ್ಯಾಲಿನ ಶೆಗಣಿ ಪುಟ್ಟಿಹೊತ್ತಂತ ಭಾರ ತನ್ನಿಂದ ತಾನೇ ಜರ್ರನೆ ಇಳಿದು ಹೃದಯ ಹೂವಿನಷ್ಟು ಹಗುರವಾಗಿತ್ತು. ಇಡೀ ದಿನ ಹೊಲದೊಳಗೆ ಬಿಸಿಲಿಗೆ ಮೈಯೊಡ್ಡಿ ದುಡಿದು ಹೈರಾಣುಗೊಂಡಂತಿದ್ದ ಮನಸ್ಸು ಉಲ್ಲಾಸಗೊಂಡಿತ್ತು.

ಕೆಲಸ ಸಿಕ್ಕು ಒಂದೆರಡು ತಿಂಗಳು ನನ್ನೊಳಗೆ ಖುಷಿಯೊಂದೇ ಏಕಮಾತ್ರ ರಾಜನಂತೆ ಬೀಗುತ್ತಾ ದರ್ಬಾರು ನಡೆಸಿತು. ಈಗ ಕೆಲಸದ ನಿಮಿತ್ತ ಬೀದಿಗುಂಟ ಬಾಲ್ಯದ ನೆನಪುಗಳಿರುವ ಊರು, ಕಡುಕಷ್ಟದಲ್ಲೂ ದಣಿವರಿಯದೆ ಓದಿಸಿ, ತುತ್ತು ಉಣಿಸಿದ ಅಪ್ಪ, ಅವ್ವ, ಗೆಳೆಯರಂತಿರುವ ತಮ್ಮ, ಅಣ್ಣ, ಅಕ್ಕರೆ ಉಕ್ಕಿಸುವ ತಂಗಿಯರು, ನಿಷ್ಕಲ್ಮಷ ಸ್ನೇಹದ ಗೆಳೆಯರು, ಪ್ರೇಮದ ಹುಡುಗಿಯಿಂದ ದೂರವಿರುವುದಕ್ಕೆ ಒಲ್ಲೆನಿಸುತ್ತದೆ. ಜೀವ ಚೈತನ್ಯ




ಜಡಗೊಳ್ಳುತ್ತದೆ. ಯಾವ ಯಾವುದೋ ಕಾರಣಕ್ಕೆ ಊರು ಪದೇ ಪದೇ ನೆನಪಾಗುತ್ತದೆ. ಮದುವೆಯಾಗಿ ದೂರದ ಊರಿನ ಅಪರಿಚಿತರ ಮನೆಯಲ್ಲಿ ಹೊಸ ಬದುಕು ಕಟ್ಟಿಕೊಳ್ಳುವ ಹುಡುಗಿಯರು ನಿಜಕ್ಕೂ ಗಟ್ಟಿಗಿತ್ತಿಯರು.

* * *

ಎರಡು ದಿನ ರಜೆ ಕೇಳಿದ್ದಕ್ಕೆ ಸ್ಥಾನಿಕ ಸಂಪಾದಕರು ಸಿಡಿಮಿಡಿಗೊಂಡರು. ಆದರೂ ಪಟ್ಟು ಬಿಡದೆ ನಿರ್ವಾಹ ಇಲ್ಲದೆ ನಂಬಲೇಬೇಕಾದ ಸುಳ್ಳು ಹೇಳಿ ರಜೆ ಜಡಿದು ಊರ ಕಡೆ ಮುಖ ಮಾಡಿದೆ. ಹೊಟ್ಟು ಮೇದು ಸಾಕುಸಾಕಾಗಿದ್ದ ಆಕಳಿಗೆ ಹಸಿರು ಹುಲ್ಲು ಸಿಕ್ಕಂತೆನಿಸಿತು. ಬಸ್ಸು ಆಗಲೇ ಪಟ್ಟಣ ದಾಟಿತ್ತು. ಕಿಟಕಿಯಾಚೆ ಕಣ್ಣು ಹಾಯಿಸಿದೆ. ಕರುಳು ಚುರ್ರೆಂತು. ಹೊಲದೊಳಗೆ ಎದೆಮಟ್ಟ ಎತ್ತರ ಬೆಳೆದು ಹಚ್ಚಗೆ ನಗುತ್ತಿದ್ದ ಬೆಳೆ, ಕರುಣೆ ಕಳೆದುಕೊಂಡು ಮನಸಿಗೆ ಬಂದಂತೆ ಬಿಡದೇ ಸುರಿದ ಮಳೆಯಿಂದ ನೆಲಕ್ಕೆ ಮಲಗಿತ್ತು. ಬಿಸಿಲಿಗೆ ಬಾಯಾರಿಕೆಯಾಗಿ ಮುಗಿಲಿಗೆ ಬಾಯೊಡ್ಡಿದ ಬಿರುಕುಗಳ ಬಾಯಿಗೆ ಮಳೆ ತುಸುವೇ ನೀರು ಬಿಟ್ಟಿದ್ದರೆ ಸಾಕಿತ್ತು. ಬಿರುಕುಗಳ ಹೊಟ್ಟೆಯೂ ತಣ್ಣಗಾಗುತ್ತಿತ್ತು. ರೈತನ ಬಾಳೂ ಹಸನಾಗುತ್ತಿತ್ತು. ಮಳೆರಾಯನಿಗೆ ಇದು ಸರಿ ಕಾಣಲಿಲ್ಲವೇನೋ. ಮಾತೆತ್ತಿದರೆ ಬಾರದ ಮಳೆಯನ್ನು ಶಪಿಸುತ್ತಿದ್ದ ಉತ್ತರ ಕರ್ನಾಟಕದ ಜನರ ಮ್ಯಾಲೆ ಕಡುಕೋಪವಿರಬೇಕು. ಊರಲ್ಲಿನ ಇದ್ದಬಿದ್ದ ಕಲ್ಲು ದೇವರಿಗೆಲ್ಲ ಸಾಕು ಸಾಕೆಂದು ಮೊರೆಯಿಟ್ಟು, ಬೇಡಿಕೊಂಡು ಮುಡಿಪು ಕಟ್ಟಿದರೂ ಕಿವುಡ ಮಳೆಗೆ ಕೇಳಿಸಲೇ ಇಲ್ಲ. ಆ ಹೊಲ ಅದ್ಯಾರದೋ ಏನೋ. ಹೊಸದಾಗಿ ಹಾಕಿದ ಹೊಲದ ಒಡ್ಡು ಒಂಚೂರು ಗುರುತಿಗೂ ಸಿಗದಂತೆ ಒಡೆದು ಹೋಗಿದೆ. ಆ ರೈತನ ಕಣ್ಣೀರ ಕಟ್ಟೆಯೂ ಒಡೆದಿರಬೇಕು.

ಬಸ್ಸು ಇದ್ಯಾವುದರ ಬಗ್ಗೆ ಏನೊಂದೂ ಗೊತ್ತಿಲ್ಲದಂತೆ ತನ್ನ ಪಾಡಿಗೆ ತಾನು ಚಲಿಸತೊಡಗಿತ್ತು. ದಾರಿ ಕ್ರಮಿಸಿದಂತೆ ಎಲ್ಲ ಹೊಲಗಳಲ್ಲೂ ನೀರೋ ನೀರು. ನೀರಿಲ್ಲದೆ ಮೈ ಮ್ಯಾಲಿನ ಎಲೆಗಳೆಲ್ಲ ಉದುರಿ ಜೀವ ಚೈತನ್ಯವೇ ಇಲ್ಲವಾಗಿ ಒಣಗಿ ನಿಂತಿರುವ ಒಂಟಿ ಮರದ ಕೆಳಗೂ ನೀರು. ನನಗೆ ಯಾತನೆ ಅನಿಸಿತು. ಪತ್ರಿಕೆಯಲ್ಲಿ ನೆರೆ ಹಾವಳಿ ಸುದ್ದಿ ಬಳಸಿಕೊಳ್ಳುವಾಗ ಅಷ್ಟೊಂದು ಎದೆ ಕಲಕಿರಲಿಲ್ಲ. ಕಣ್ಣೆದುರಿನ ಈ ದೃಶ್ಯಗಳು ನನ್ನನ್ನು ಜರ್ಜರಿತಗೊಳಿಸಿದವು. ಊರಿಗೆ ಹೋಗುವಾಗ ಇದ್ದ ಸಂಭ್ರಮ ಅಳುಮುಖ ಮಾಡಿತು. ಕಣ್ಣೊಳಗೆ ಮಳೆ ಹಚ್ಚನಿಂತು ಸುರಿಯತೊಡಗಿತು. ಮಗ್ಗುಲಲ್ಲಿ ಕುಳಿತ ವ್ಯಕ್ತಿ ಅಳು ತುಂಬಿದ ನನ್ನ ಕಣ್ಣು ನೋಡಿ ಇಂವ ಭಗ್ನ ಪ್ರೇಮಿ ಇರಬೇಕು ಎನ್ನುವವನಂತೆ ದಿಟ್ಟಿಸಿದ. ಸಂಕೋಚವೆನಿಸಿ ಕಣ್ಣೊರೆಸಿಕೊಂಡೆ. ಮತ್ತೆ ಕಿಟಕಿಯಾಚೆ ದಿಟ್ಟಿಸಿದರೆ ಅದೇ ಕರುಳು ಕೊರೆಯುವ ದೃಶ್ಯ.

ಈ ಮೊದಲೆಲ್ಲ ಒಂದಿಷ್ಟೇ ಇಷ್ಟು ಮಳೆಯಾದರೂ ಸಾಕು. ಆ ಮಳೆಗೆ ಏಳುವ ಮಣ್ಣ ಕಂಪಿನೊಂದಿಗೆ ಅವಳ ನೆನಪೂ ತೇಲಿ ಬಂದು ಆಹ್ಲಾದಗೊಳ್ಳುತ್ತಿದ್ದೆ. ಅವಳ ಜೊತೆಗೆ ಕೆರೆ ದಂಡೆ ಮ್ಯಾಲೆ ಕುಳಿತು ನೀರೊಳಗೆ ಕಾಲು ಇಳಿಬಿಟ್ಟು ಚೂಡಾ, ಮಿರ್ಚಿಬಜ್ಜಿ ತಿನ್ನುತ್ತಾ ಹರಟಬೇಕು, ಎದೆಯಾಗಿನ ಎಲ್ಲ ಪ್ರೀತಿಯನ್ನು ಬಸಿದು ಅವಳ ಬೊಗಸೆಗೆ ಸುರಿಯಬೇಕು, ಸವಿ ಮಾತಾಡಿ ಅವಳ ಕಣ್ಣೊಳಗೆ ಸಾವಿರ ನಕ್ಷತ್ರ ಮಿನುಗಿಸಬೇಕು, ಅವಳ ಬೆಳದಿಂಗಳ ನಗೆಯನ್ನು ಕಣ್ತುಂಬಿಕೊಂಡು ಸಂತೃಪ್ತಿಯಿಂದ ಬೀಗಬೇಕು ಅಂತ ಅನಿಸುತ್ತಿತ್ತು. ಈಗ ನನ್ನೊಳಗೆ ಸವಿ ಮಾತುಗಳೆಲ್ಲಾ ಒಂದೊಂದಾಗಿ ಸತ್ತು ಹೋಗಿದ್ದವು. ಅವಳೀಗ ಜೊತೆಗಿದ್ದಿದ್ದರೆ ಇದಿಮಾಯಿ ಮಳೆಯ ಕಥಾನಕ ಹೇಳುತ್ತಿದ್ದೆ. ಬಸ್ಸು ಒಮ್ಮಿಂದೊಮ್ಮೆಲೆ ಗಕ್ಕನೆ ತರುಬಿತು. ನೋಡಿದರೆ ಬಸ್ಸು ಆಗಲೇ ಬಸ್ಟ್ಯಾಂಡಿನ ಎದುರಿಗೆ ನಿಂತಿತ್ತು.

* * *

ಬಸ್ಟ್ಯಾಂಡಿನ ತುಂಬಾ ಜನ ಕಿಕ್ಕಿರಿದಿದ್ದರು. ಗೌಜು ಗದ್ದಲು ಜೋರಾಗಿತ್ತು. ಅದ್ಯಾವುದೋ ಪುಟ್ಟ ಮಗುವಿನ ಅಳು ಆ ಗದ್ದಲ ಸೀಳಿಕೊಂಡು ಅಲೆಯಾಗಿ ತೇಲಿ ಬಂದು ಕಿವಿಗಪ್ಪಳಿಸತೊಡಗಿತ್ತು. ಮಳೆ ಸಣ್ಣಗೆ ಹುಯ್ಯುತ್ತಲೇ ಇತ್ತು. ಬಸ್ಟ್ಯಾಂಡಿನೊಳಗಿನ ಜನರನ್ನು ನೋಡಿದರೆ ಅವರು ಊರಿಗೆ ಹೊರಟ ಪ್ರಯಾಣಿಕರಂತೆ ತೋರುತ್ತಿಲ್ಲ. ತೊಟ್ಟ ಬಟ್ಟೆಯಲ್ಲಾ ಒದ್ದೆಯಾಗಿ ಕೊಳೆಯಾಗಿತ್ತು. ತಲೆಗಳು ಕೋಳಿ ಕೆದರಿದ ತಿಪ್ಪೆಯಂಗಿದ್ದವು. ಮುಖದ ತುಂಬಾ ದುಃಖವಿತ್ತು. ಮನೆಯ ಕಡೆ ಹೆಜ್ಜೆ ಬೆಳಸಬೇಕಿದ್ದ ನಾನು ಮಳೆಯಿಂದಾಗಿ ಚಾಟಿಗೆಂದು ಬಸ್ಟ್ಯಾಂಡಿನೊಳಗೆ ನುಗ್ಗಿದೆ. ಅಲ್ಲಿ ಕಾಲಿಡಲೂ ಜಾಗವಿಲ್ಲ. ನಮ್ಮ ಮನೆಯ ಮಗ್ಗುಲದ ಶಂಕ್ರಪ್ಪ ಕಾಕಾ ಗುರುತು ಹಿಡಿದು ಮಾತಾಡಿಸಿದ.

ನಾನು ''ಯಾಕೋ ಕಾಕಾ ಊರಿಗೆ ಹೊಂಟಿರೇನು...'' ಅಂದೆ.

''ಎಲ್ಲಿ ಊರಿಗೋ ಮಾರಾಯ. ಈ ಮಳಿ ಸಲುವಾಗಿ ಸಾಕು ಬೇಕು ಕೂಡೇ ಆಗೇತಿ. ಬಿಟ್ಟೂ ಬಿಡ್ದ ಮಳಿ ಜಡ್ದು ನಮ್ದು ದೆವ್ವನಂತ ಮನಿ ಬಿದ್ದೈತಿ. ಅಲ್ಲೊಂದಿಷ್ಟು ನಿಲ್ಲಾಕ ಸೈತ ಜಾಗಿಲ್ಲ. ಮನಾನ ಜ್ವಾಳ, ಬಿತ್ತಾಕಂತ್ಹೇಳಿ ತೆಗೆದಿಟ್ಟ ಅಕ್ಕಡಿಕಾಳು ಎಲ್ಲಾ ನೆಂದು ಮಳಕಿ ಒಡದಾವು. ಇದ್ದು ಬಿದ್ದ ಸಾಮಾನೆಲ್ಲ ತೊಯ್ದು ಹಾಳಾಗಿಹೋಗ್ಯಾವು. ನಿಮ್ಮ ಚಿಗವ್ವನ ಮ್ಯಾಲ ಮನಿ ಬಿದ್ದು ದವಾಖಾನಿಗೆ ಹಾಕಿವಿ. ಬಕ್ಕಂದಾಗ ನೋಡಿದ್ರ ನಯಾ ಪೈಸೆ ರೊಕ್ಕಿಲ್ಲ. ಹೊತ್ತು ಹೊತ್ತಿಗೆ ಮೂರೊತ್ತು ಊಟ ಮಾಡ್ತಿದ್ದಿವಿ. ಈಗ ಕೂಳು ಸಹಿತ ಬಂಗಾರಾಗೇತಿ. ಮನಿ ಬಿದ್ದೈತಿ. ಬೀಳೂ ಕೈಲೆ ಮನಾಸ ಮಂದಿ ಮ್ಯಾಲೇರ ಬಿದ್ದಿದ್ರ ಆ ಕಡೆ ಕಣ್ಣೂ ಕಾಣ್ದ ಸತ್ತು ಹೊಕ್ಕಿದ್ದಿವಿ. ಇಲ್ಲಿರೋರಿಗೆಲ್ಲ ಈಗ ಬಸ್ಟ್ಯಾಂಡ ಮನಿ. ಈ



ಪಡಿಪಾಟ್ಲು ಯಾರಿಗೂ ಬರಬಾಡ್ದಪ...'' ಅಂತ ದುಃಖಿತಗೊಂಡು ಮಾತಾಡಿದ ಆತನ ಕಣ್ಣೊಳಗೆ ತೆಳ್ಳಗೆ ನೀರಾಡತೊಡಗಿತ್ತು.

ಏನು ಮಾತಾಡಬೇಕು, ಹೇಗೆ ಸಾಂತ್ವನ ಹೇಳಬೇಕು ಎಂದು ತೋಚದಾಯಿತು. ದುಃಖದಲ್ಲಿ ತೊಯ್ದಿದ್ದ ಆತನ ಮಾತುಗಳಿಗೆ ಬರೀ ಕಿವಿಯಾದೆ. ನನ್ನೊಳಗಿನ ಮಾತುಗಳೆಲ್ಲ ಸತ್ತುಹೋಗಿದ್ದವು. ಸುಮ್ಮನೆ ಎಲ್ಲರ ಕಡೆ ದೃಷ್ಟಿ ಹಾಯಿಸಿದೆ. ಅವರಲ್ಲಿ ಒಂದು ಹಿಡಿಯಷ್ಟೂ ಲವಲವಿಕೆ ಇಲ್ಲ, ಚೈತನ್ಯವಿಲ್ಲ. ಬದುಕು ಬೀದಿಗೆ ಬಿದ್ದ ಸಂಕಟ ಅವರೆಲ್ಲರ ಮುಖದೊಳಗೆ ಮಡುಗಟ್ಟಿತ್ತು.

ಬಸ್ಟ್ಯಾಂಡಿನಿಂದ ತುಸುವೇ ದೂರದಲ್ಲಿ ಹಳ್ಳದಂತೆ ಹರಿಯುತ್ತಿರುವ ನಡುಮಟ ನೀರಿನಲ್ಲಿ ಹರೆಯದ ಹುಡುಗಿಯೊಂದು ನಿಂತಲ್ಲೇ ನಿಂತಿತ್ತು. ಅವಳ ತಲೆ ಮ್ಯಾಲೆ ಮಳೆ ಹನಿಗಳು ಬೀಳುತ್ತಲೇ ಇದ್ದವು. ಆದರೂ ಆಕೆ ಜಪ್ಪಯ್ಯ ಅನ್ನದೆ ನಿಂತಿದ್ದಳು. ಎರಡೂ ಕೈಯಿಂದ ತನ್ನ ಲಂಗವನ್ನು ನೀರ ಮೇಲಕ್ಕೆ ಎತ್ತಿ ಹಿಡಿದಿದ್ದಳು. ಒಮ್ಮೊಮ್ಮೆ ಮುಖ ಗಂಟಿಕ್ಕುತ್ತಿದ್ದಳು. ಪಾಪ, ಅವಳು ಬಸ್ಟ್ಯಾಂಡಿನ ಚಾಟಿನೊಳಗೆ ಬರಬಾರದೇ ಅನಿಸಿತು.

''ಆ ಹುಡುಗಿ ನೀರೊಳಗೆ ಅದ್ಯಾಕ ನಿಂತಾಳ ಕಾಕ...'' ಎಂದು ಶಂಕ್ರಪ್ಪ ಕಾಕನನ್ನು ಕೇಳಿದೆ. ಆತನಿಗೆ ದುಃಖ ಮತ್ತಷ್ಟು ಒತ್ತರಿಸಿ ಬಂತು. ತಡವರಿಸುತ್ತ ಹೇಳಿದ :

''ಅಕಿ ನೀರಾಗ ನಿಂತು ಸಂಡಾಸು ಮಾಡಕತ್ಯಾಳ. ಬ್ಯಾರೆ ಎಲ್ಲಿಲ್ಲೂ ಜಾಗಿಲ್ಲ. ಎಲ್ಲಾ ಕಡೆಗೂ ನೀರು ಗಾಳಿ ತುಂಬಿದಂಗ ತುಂಬ್ಯೈತಿ. ನನ್ಗ ಸಂಡಾಸು ಬಂದ್ರು ನಾನೂ ನಡುಮಟ ನೀರಾಗ ನಿಲ್ಲಬೇಕು. ನಿನ್ಗ ಬಂದ್ರು ನೀನೂ ಅದ ನೀರಾಗ ಹೋಗಬೇಕು. ಮುದುಕ್ರು, ಬಸುರು ಹೆಣ್ಮಕ್ಕಳ ಪರಿಸ್ಥಿತಿನಂತೂ ಕಣ್ಣಿಂದ ನೋಡಬಾರ್ದು. ಏನು ಮಾಡೋದು ಅಂತ ತಿಳಿವಲ್ದಂಗಾಗೇತಿ. ನೀರಡಿಕೆ ಆದ್ರೂ ಅದ ನೀರ ಕುಡೀಬೇಕು...'' ಅಂತ ಶಂಕ್ರಪ್ಪ ಕಾಕ ಇದ್ದುದನ್ನು ಬಿಚ್ಚಿ ಹೇಳಿದ. ಇದನ್ನೆಲ್ಲ ಕೇಳಿ ಸಿಡಿಲು ಬಡಿದಂಗಾತು.

ಮಳೆಗೆ ಹನಿ ಸುರಿಸುವ ದ್ಯಾಸ ಮರೆತಿರಬೇಕು. ವರಪು ಗೊಂಡಿತು. ಮನೆಯ ಕಡೆ ಹೆಜ್ಜೆ ಬೆಳೆಸಿದೆ. ದಾರಿಗುಂಟ ರಜ್ಜು ಕಿತಿ ಕಿತಿ ಅನ್ನತೊಡಗಿತ್ತು. ಚಪ್ಪಲಿ ರಜ್ಜಾಗಿ ತಮ್ಮ ಮೊದಲಿನ ಚಹರೆ ಕಳೆದುಕೊಂಡು ಗುರುತು ಸಿಗದಂತಾದವು. ಪ್ಯಾಂಟಿನ ಹಿಂಬದಿಯ ಗತಿ ಏನಾಗಿರಬಹುದು ಎಂದು ನೋಡಿಕೊಂಡೆ. ಅಲ್ಲಲ್ಲಿ ರಜ್ಜು ಸಿಡಿದು ಚಿತ್ರ ಬಿಡಿಸಿದಂತೆ ಕಾಣತೊಡಗಿತ್ತು. ದಾರಿಯ ಮಗ್ಗುಲ ಅದೇನೋ ಸದ್ದಾಯಿತು. ನೋಡಿದರೆ ನೀಲಪ್ಪನ ಮಣ್ಣಿನ ಮನೆ ಗೋಡೆ ಕಪ್ಪರಿಸಿ ಕಪ್ಪರಿಸಿಕೊಂಡು ಬೀಳತೊಡಗಿತ್ತು. ಯಾರಿಗಾದರೂ ಅನಾಹುತವಾಯಿತೇನೋ ಎಂದು ನೋಡಿದರೆ ಮನೆಗೆ ಬೀಗ ಜಡಿದಿತ್ತು. ಅವರಿಗೆ ಮನೆ ಬೀಳುವುದು ಖಾತ್ರಿಯಾಗಿರಬೇಕು. ಅವರೆಲ್ಲ ಈಗ ಬಸ್ಟ್ಯಾಂಡಿನಲ್ಲಿರಬಹುದು. ಬರೀ ನೀಲಪ್ಪನ ಮನೆಯೊಂದೇ ಅಲ್ಲ. ಕಣ್ಣಿಗೆ ಕಾಣತೊಡಗಿದ್ದ ಮನೆಗಳೆಲ್ಲ ನೆಂದು ಅರ್ಧಂಬರ್ಧ ಬಿದ್ದುಹೋಗಿದ್ದವು. ನಮ್ಮ ಮನೆ ನೆಪ್ಪಿಗೆ ಬಂತು. ಅಣ್ಣ ಮೊನ್ನೆ ಫೋನಿನಲ್ಲಿ ಹೇಳಿದ್ದ ಮನೆ ಬಿದ್ದಲ್ಲವೆಂದು. ಈ ಎಲ್ಲವನ್ನೂ ನೋಡಿ ನನಗೆ ಅಣ್ಣನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಕ್ಷಣ ಕಾಲ ಆತಂಕವಾಯಿತು. ಮಳೆಯಿಂದಾಗಿ ತಣ್ಣನೆ ಗಾಳಿ ಸೆರಗು ಬೀಸತೊಡಗಿದ್ದರೂ ಬೆವರುಗೊಂಡೆ. ಮನಸ್ಸು ಅಧೀರಗೊಂಡಿತು. ಹೆಜ್ಜೆಗಳು ಚಮತುಗೊಂಡವು.

ಮನೆಯಂತೂ ಬಿದ್ದಿರಲಿಲ್ಲ. ಸಮಾಧಾನಗೊಂಡೆ. ಊರಿಂದ ಬಂದಿರುವ ನನ್ನನ್ನು ಕಂಡು ಮನಾಸ ಮಂದಿಯಲ್ಲಾ ಸಹಜವಾಗಿ ಹರ್ಷಗೊಂಡರು. ಹೆಂಚು ಸೋರಿದ್ದರಿಂದ ಸೋರದಿರುವ ಕಡೆ ಎಲ್ಲರೂ ಜಮೆಗೊಂಡಿದ್ದರು. ಹೊಗೆ ಅಡರಿ ಒಂದಿಷ್ಟು ಕಪ್ಪಗಾಗಿದ್ದ ಸುಣ್ಣ ಹಚ್ಚಿದ ಗೋಡೆಗಳ ಮ್ಯಾಲೆ ಮಳೆ ಹನಿಗಳ ಜೋರು ಇಳಿದು ದುಃಖಿಸಿ ದುಃಖಿಸಿ ಅಳುತ್ತಿರುವಂತೆ ಕಾಣತೊಡಗಿದ್ದವು. ಮನೆ ಮಂದಿಯಲ್ಲಾ ಅದನ್ನು ದಿಟ್ಟಿಸುತ್ತಾ ಮನೆ ಬೀಳುವ ಭಯದಲ್ಲಿದ್ದರು. ಅಲ್ಲೇ ಮೂಲೆಯಲ್ಲಿ ಹರೆಯದ ಹೆಣ್ಣು ಜೀವವೊಂದು ಹಾಸಿಗೆಯನ್ನೂ ಹಾಸಿಗೊಳ್ಳದೆ ನೆಲದಲ್ಲೇ ಮೈಗೂಡಿಸಿಕೊಂಡು ಮಲಗಿತ್ತು. ನೋಡಿದರೆ ಯಾರೆಂದು ಗುರುತು ಸಿಗಲಿಲ್ಲ. ಅವ್ವನನ್ನು ''ಯಾರವ್ರು...'' ಎಂದು ಕೇಳಿದೆ. ಮಾತಿನ ಸದ್ದಿಗೆ ಆ ಜೀವ ಎದ್ದು ಕುಂತು ನನ್ನ ಕಡೆ ದಿಟ್ಟಿಸಿತು. ಅಚ್ಚರಿಗೊಂಡೆ. ಆಕೆ ಎದುರಿನ ಮನೆಯ ಹೈಸ್ಕೂಲ್ ಕ್ಲಾಸ್‌ಮೇಟ್ ಸಂಧ್ಯಾ. ನನ್ನ ನೋಡಿದ ತಕ್ಷಣವೇ ಕಣ್ಣೀರು ತೆಗೆದಳು. ನಾನು ಈ ದೃಶ್ಯವನ್ನು ಖಂಡಿತ ನೀರಿಕ್ಷಿಸಿರಲಿಲ್ಲ. ತುಸು ಗೊಂದಲಗೊಂಡೆ. ''ಯಾಕ್ರೀ ಸಂಧ್ಯಾ. ಏನಾಗೇತಿ. ಯಾಕ ಅಳಾಕತ್ತೀರಿ...'' ಎಂದೆ.

ಅವಳಿಂದ ಒಂದು ಮಾತೂ ಹೊರಡಲಿಲ್ಲ. ಬದಲಾಗಿ ಅಳು ಮನೆಯ ಹೆಂಚು ಮುಟ್ಟತೊಡಗಿತ್ತು. ಎದೆ ಬಡಿದುಕೊಂಡು ನಂಗ ಕೂಸು ಬೇಕು ಎಂದು ಅಳಹತ್ತಿದಳು. ಕಣ್ಣಿಂದ ದಳ ದಳ ನೀರು ಹರಿಯುತ್ತಲೇ ಇತ್ತು. ನಂಗೆ ಏನೊಂದೂ ತಿಳಿಯದೆ, ''ಏನಾಗ್ಯೆತಿ. ಪಾಪ, ಯಾಕ ಅಳಕತ್ಯಾಳ ಇಕಿ...'' ಎಂದು ಅವ್ವನನ್ನು ಕೇಳಿದೆ.

''ಅಕಿ ನಸೀಬು ಕೆಟ್ಟ ಐತಿ. ಇದ್ರ ಬಾರ್ಲ ಬಡೀಲಿ. ಮಳಿ ಯಾವ ಶನಿಯಿಂದ ಬಂದಿತ್ತೋ ಏನೋ. ಸಂಧ್ಯಾ ಹಡ್ದು ಒಂದಾ ಒಂದು ದಿನ ಆಗಿತ್ತು. ಕೂಸು ನೋಡಾಕ ಬಂಗಾರಾಗಿತ್ತು. ಇವ್ರುದು ಮೊದ್ಲ ಕಂಡಾಪಟಿ ಹಳೆ ಮನಿ. ಬಿಟ್ಟು ಬಿಡದ ಒಂದ ಸವನ ಸುರಿದ ಮಳಿಗೆ ಮನಿ ಕಪ್ಪರಿಸಿಕೊಂಡು ಬಿತ್ತು. ದೊಡ್ಡದೊಂದು ಕಲ್ಲು ಕೂಸಿನ ತಲಿಗೆ ಬಡ್ದು ಪಾಪ ಅದ್ರ ಚಂಡಾಳಿ ಸತ್ತೋತು. ಇಕಿ ನೋಡಿದ್ರ ಮದುವ್ಯಾಗಿ ಬಾಳ ದಿನದ ಮ್ಯಾಲೆ ಹಡದಿದ್ಲು. ಆ ಹಾದರಗಿತ್ತಿ ಇದಿಗೆ ಇದು ಚೆಂದ ಕಾಣ್ಲೆಲ್ಲ ಅಂತ ಕಾಣುತ್ತ. ಹಿಂಗ ಕೊಟ್ಟ ಕೂಸು ಹಿಂಗ ಕಣ್ಣೂ ಕಾಣ್ದ ಕಸ್ಕೊಂಡು ಹೋತು. ಆ ಕೂಸಿನ ಹಣೆಬರಹದಾಗ ಸೆಟಗಿ ಹಂಗ ಬರೆದಿದ್ಲೋ ಏನೋ. ಸಂಧ್ಯಾ ಬಾಳ ಸಂಭಾವಿತ ಹುಡುಗಿ. ಅವ್ಳ ಬಾಳೆ ಸುದ್ದಾಗಲಿಲ್ಲ. ಅವರತ್ತಿ ಹಡೆಯವಲ್ಲೂ ಅಂತ ದಿನ ಕಾಟ ಕೊಡ್ತಿದ್ಲು. ಬಂಜಿ, ರಂಡಿ ಅಂತ ಹಿಯಾಳಿಸ್ತಾ ಇದ್ಲು. ಇನ್ಮುಂದ ಹೆಂಗ ಐತೋ ಏನೋ...'' ಅಂತ ಅವ್ವ ದುಃಖಗೊಂಡು ಹೇಳಿದಳು. ಕೂಸು ಕಳೆದುಕೊಂಡ ತಾಯಿ ಜೀವ ಸಂಧ್ಯಾಗೆ ಏನೊಂದು ತೋಚದಂಗಾಗಿ ಅಳುತ್ತಲೇ ಇದ್ದಳು.

*   *   *

ವೇಳೆ ಎಷ್ಟಾಗಿದೆ ಎಂದು ಗೊತ್ತಾಗಲಿಲ್ಲ. ಮೊಬೈಲ್ ನೆನಪಾಗಿ ಅದರಲ್ಲಿ ಟೈಮ್ ನೋಡಿಕೊಂಡೆ. ಮಧ್ಯಾಹ್ನ ಎರಡಾಗಿತ್ತು. ಮಧ್ಯಾಹ್ನದ ಕುರುಹಾಗಿ ಒಂಚೂರು ಬಿಸಿಲಿರಲಿಲ್ಲ. ಕೊಡಕ್ಕೆ ತೂತು ಬಿದ್ದಂತೆ ಮೋಡದಿಂದ ಮಳೆ ಸುರಿಯುತ್ತಲೇ ಇತ್ತು. ಹೊಟ್ಟೆ ಹಸಿವಾಗಿತ್ತು. ತಿನ್ನಬೇಕೆಂದರೆ ಕೆರಸಿಯಲ್ಲಿ ಅರಬಿಯನ್ನು ಹೊರತುಪಡಿಸಿ ರೊಟ್ಟಿಯ ಒಂದು ತುಣುಕೂ ಇರಲಿಲ್ಲ. ಚರಿಗೆ ನೀರು ಗಟ ಗಟ ಕುಡಿದೆ. ಆದರೂ ತಣಿಯಲಿಲ್ಲ.

''ಯವ್ವಾ, ಈಗ ಊಟಕ್ಕೇನು ಮಾಡೋದು. ನಂಗ ಬಾಳ ಹೊಟ್ಟಿ ಹಸ್ತೈತಿ...'' ಅಂದೆ.

''ಮನಾಗಂತೂ ತಿನ್ನಾಕ ಏನೂ ಇಲ್ಲ. ಒಲ್ಯಾಗ ಬೆಂಕಿ ಮಾಡ್ಲಾರ್ದ ಆಗ್ಲೇ ನಾಕೈದು ದಿನ ಆತು. ನೋಡಲ್ಲೇ ಒಲ್ಯಾಗ ಬೆಕ್ಕು ಮಕ್ಕೊಂಡೈತಿ. ಸಾಲಿ ಗುಡ್ಯಾಗ ಅನ್ನ, ಸಾರು ಕೊಡ್ತಾರ. ಊರಾನ ಮಂದೆಲ್ಲಾ ಅಲ್ಲೇ ಉಂತಾರ. ಸಾಲಿಗೆ ಹೋಗಿ ಊಟ ಮಾಡ್ಕೊಂಡು ಬಾ...'' ಅಂದಳು.

ತಾಟು, ಕೊಡೆ ಹಿಡಿದುಕೊಂಡು ಸಾಲಿ ಗುಡಿ ಕಡೆ ಪಾದ ಬೆಳೆಸಿದೆ. ಹೀಗೆ ತಾಟು ಹಿಡಿದುಕೊಂಡು ಹೋಗುವುದನ್ನು ಲೋಕದ ಕಣ್ಣುಗಳೆಲ್ಲ ದಿಟ್ಟಿಸಿ ನಕ್ಕಂತಾಯಿತು. ಮನೆ ಮನೆಗೆ ಎಡತಾಕಿ ತಾಟು ಮುಂದೊಡ್ಡಿ ''ಯವ್ವಾ ಒಂದಿಷ್ಟು ಅನ್ನ, ರೊಟ್ಟಿ ಇದ್ರ ಹಾಕ್ರೀ...'' ಅಂತ ಒದರುವ ಭಿಕ್ಷುಕರ ನೆಪ್ಪಾಯಿತು. ಇವರ ಅವಮಾನದ ಮುಂದೆ ನನ್ನದು ಏನೇನೂ ಅಲ್ಲವೆನಿಸಿ ಭಿಕ್ಷುಕನಂತೆ ಸಾಲೆ ಕಡೆಯ ಬೀದಿಯಲ್ಲಿ ನಡೆಯತೊಡಗಿದೆ. ಆ ಕಡೆ ಈ ಕಡೆಯ ಮನೆಗಳೆಲ್ಲಾ ಬಿದ್ದು ರಾಜಮಾರಾಜರ ಶಿಥಿಲಗೊಂಡ ಹಳೆಯ ಕಟ್ಟಡಗಳಂತೆ ಕಾಣ ತೊಡಗಿದ್ದವು. ಅದು ಬಿದ್ದಿರುವ ಮನೆಯವರು ಸಾಕಿದ ನಾಯಿ ಇರಬೇಕು. ಬಿದ್ದ ಮನೆ ಮಂದಿಯಲ್ಲಾ ಸಾಲೆಯಲ್ಲಿ ವಸ್ತಿ ಹಾಕಿದಂತಿದೆ. ಇದ್ಯಾವುದನ್ನೂ ಅರಿಯದ ನಾಯಿ ಕೂಳಿಲ್ಲದೆ ಮನೆ ಅಂಗಳದಲ್ಲಿ ಮಳೆಯಲ್ಲಿ ನೆನೆಯುತ್ತಾ ದಿನಗಳೆದಂತಿದೆ. ಅದರ ಮೈಯೊಳಗಿನ ಒಂದೊಂದು ಎಲಬೂ ಚಿತ್ರ ಬಿಡಿಸಿದಂತೆ ಎದ್ದು ಕಾಣುತ್ತಿವೆ. ಎದ್ದೇಳಲು ಶತ ಪ್ರಯತ್ನಪಡುತ್ತಿದೆ. ಮೈಯೊಳಗೆ ಸತುವು ಕಳೆದುಕೊಂಡು ಸೊರಗಿರುವ ಅದಕ್ಕೆ ಏಳಲು ತ್ರಾಣವಾಗುತ್ತಿಲ್ಲ. ತಿನ್ನಲು ಅದಕ್ಕೊಂದು ಬ್ರೆಡ್ ಪೀಸ್ ಹಾಕಬೇಕೆನಿಸಿತು. ನನ್ನ ಹತ್ತಿರ ಬ್ರೆಡ್ ಬ್ಯಾರೆ ಇಲ್ಲ. ಏನೂ ತಿಳಿದಂಗಾತು. ಅಸಹಾಯಕತೆಯಿಂದ ಮುಂದೆ ನಡೆದೆ. ಇದ್ಯಾವುದನ್ನೂ ಗಮನಕ್ಕೆ ಬಿಟ್ಟುಕೊಳ್ಳದ ಮಳೆ ರೋಷಗೊಂಡಂತೆ ಹನಿಯತೊಡಗಿತು.

ಸಾಲಿ ಗುಡಿ ತಲುಪುವ ಹೊತ್ತಿಗೆ ಜಡಿ ಮಳೆ ಹೋಗಿ ಜಿಟಿ ಜಿಟಿ ಬೀಳತೊಡಗಿತು. ಸಾಲಿ ಗುಡಿ ಆವರಣ ನೋಡಿ ದಂಗಾದೆ. ಅದರ ಮೈ ತುಂಬಾ ಊರಿನ ಜನವೆಲ್ಲಾ ಜಮೆಯಾಗಿತ್ತು. ಊರ ಜಾತ್ರೆ ನೆಪ್ಪಾಯಿತು. ಆದರೆ, ಆ ಜಾತ್ರೆಯ ಸಂಭ್ರಮ, ಕಳೆ, ಬೆಂಡು - ಬತ್ತಾಸು, ಗೊಂಬೆ ಅಂಗಡಿ ಇವು ಯಾವೂ ಅಲ್ಲಿರಲಿಲ್ಲ. ಜಾತ್ರೆಗೆ ಸೇರುವಷ್ಟು ಜನ ಮಾತ್ರ ನೆರೆದಿದ್ದರು.

ಕೆಲವರು ಟ್ರ್ಯಾಕ್ಟರ್ ಟ್ರೈಲಿಯ ಮ್ಯಾಲೆ ನಿಂತು ಕೈವೊಡ್ಡಿದ ತಟ್ಟೆಗೆ ಅನ್ನ ಬಡಿಸತೊಡಗಿದ್ದರು. ನೀಡಿಸಿಕೊಳ್ಳುವವರೆಲ್ಲಾ ಥೇಟು ಭಿಕ್ಷುಕರಂತೆ ಕಾಣತೊಡಗಿದ್ದರು. ಒಂದು ರೀತಿಯಲ್ಲಿ ಅದು ಭಿಕ್ಷುಕರ ಸಮಾವೇಶದಂತೆ ತೋರತೊಡಗಿತ್ತು. ಒಮ್ಮೆಯೂ ಬಿಸಿಲಿಗೆ ಮುಖ ತೋರದ, ಬಾಕಿ ಜನರಿಗೆ ನೀರನ್ನೂ ಎತ್ತಿ ಹಾಕುವ ಊರಿನ ಗಣ್ಯಾತಿ ಗಣ್ಯರ ಮನೆಯವರೂ ಅಲ್ಲಿ ಎಲ್ಲರೊಳಗೊಂದಾಗಿ ಅನ್ನಕ್ಕೆ ಕೈಯೊಡ್ಡಿದ್ದರು. ದುಃಖ, ಹಸಿವಿನಲ್ಲೂ ನನಗೆ ನಗು ಬಂತು. ಹಸಿವು ಎಲ್ಲರಿಗೂ ಪಾಠ ಕಲಿಸುತ್ತದೆ ಅನಿಸಿತು. ನಾನೂ ಅನ್ನಕ್ಕಾಗಿ ಆಗಲೇ ಬಡಿದಾಡತೊಡಗಿದ್ದ ಜನರೊಳಗೆ ತೂರಿಕೊಂಡು ಕೈಯೊಡ್ಡಿದೆ. ನನ್ನ ನಸೀಬು ಖೊಟ್ಟಿ ಇರಬೇಕು. ಅನ್ನ ಖಾಲಿ ಆತು. ಹಸಿವು ಹೊಟ್ಟೆಯೊಳಗೆ ಕರಡಿ ಮಜಲು ಬಾರಿಸತೊಡಗಿತ್ತು.

ಅದ್ಯಾರೋ ನನ್ನೆಸರು ಹಿಡಿದು ಕರೆದರು. ಹಿಂದುರುಗಿ ನೋಡಿದರೆ ಫಕೀರಪ್ಪಜ್ಜ. ''ಅನ್ನ ಇಲ್ಲಿ ಸಿಕ್ಕಾರ ಮುಕ್ಕಣ್ಣ. ದೂರ ನಿಂತ್ರ ತುತ್ತು ಅನ್ನ ಸಹಿತ ಸಿಗಲ್ಲ. ಬಾ ಇಲ್ಲೆ ನನ್ನ ತಾಟ್ನ್ಯಾಗ ಉಣ್ಣು. ನಮ್ಮ ಪರಿಸ್ಥಿತಿ ಹ್ಯಾಂಗೈತಿ ನೋಡು. ಊರಾಗ ನಾಕು ಮಂದಿಗೆ ಊಟ ಹಾಕಂಗ ಇದ್ವಿ. ಈಗ ನಾವೂ ಕೈಯೊಡ್ಡು ಹಂಗ ಆಗೇತಿ...'' ಅಂದು ನನ್ನೆದುರಿಗೆ ತಾಟು ಹಿಡಿದ. ಎರಡು ತುತ್ತು ತಿಂದೆ. ಅದ್ಯಾಕೊ ಮೈಯೊಳಗಿನ ಎಲಬು ಎದ್ದು ಕಾಣುತ್ತಿದ್ದ ಹಸಿದ ನಾಯಿ



ನೆಪ್ಪಾಯಿತು. ಅನ್ನ ತಿನ್ನಲಾಗಲಿಲ್ಲ. ಜನ ಮಾತ್ರ ಶತಮಾನಗಳಿಂದ ಹಸಿದವರಂತೆ ತಿನ್ನುತ್ತಲೇ ಇದ್ದರು. ಅನ್ನ ಸಿಗದವರು ಸಿಕ್ಕವರನ್ನು ಬೇಡಿ ಒಂದೆರಡು ತುತ್ತು ತಿಂದು ಹಸಿವೆಗೆ ತಾತ್ಪೂರ್ತಿಕ ಸಾಂತ್ವನ ಹೇಳುತ್ತಿದ್ದರು. ನನಗೆ ಕೆಡುಕೆನಿಸಿತು.

''ತಮ್ಮಾ, ನೀನೂ ತಿಳುವಳಿಕಿ ಇದ್ದಾಂವ ಅದಿ. ನಿನ್ನಿಂದ ಒಂದೀಟು ಸಹಾಯ ಆಗಬೇಕಿತ್ತು...'' ಅಂತ ಫಕೀರಪ್ಪಜ್ಜ ಮೌನ ಮುರಿದ.

''ಏನು ಮಾಡ್ಬೇಕು ಹೇಳೋ ಯಜ್ಜಾ. ನನ್ನ ಕೈಲಾದಷ್ಟು ಸಹಾಯ ಮಾಡ್ತೀನಿ...'' ಎಂದೆ. ನನ್ನ ಮಾತುಗಳು ನನಗೇ ಸ್ಪಷ್ಟವಾಗಿ ಕೇಳಿಸಲಿಲ್ಲ. ಗವಿಯೊಳಗಿಂದ ತೂರಿ ಬಂದಂತಿದ್ದವು.

''ನೋಡಪ ಮನಿ ಮಾತ್ರ ಎಲ್ಲಾ ಬಿದ್ದು ಹೇಳಾಕ ಹೆಸರಿಲ್ಲದಂಗಾಗೈತಿ. ಇದ್ದ ಬಿದ್ದು ಸಾಮಾನು, ಕಾಳು - ಕಡಿನೆಲ್ಲಾ ಕಳ್ಳರು ತುಡುಗು ಮಾಡ್ಕೊಂಡು ಹೋಗ್ಯಾರ. ಇದೆಲ್ಲ ನಿಂಗ ಗೊತ್ತಿದ್ದ ಹಕೀಕತ್ತ ಐತಿ. ಮತ್ತ ಹೊಳ್ಳಂಬುಳ್ಳ ಬಿಡಿಸಿ ಹೇಳೋದ್ರಾಗ ಅರ್ಥಿಲ್ಲ. ತಿಂದೇನು ಅಂದ್ರ ಮುಕ್ಕು ಜ್ವಾಳ ಉಳಿದಿಲ್ಲ. ಇಲ್ನೋಡಿಲ್ಲೆ. ಎಲ್ಲಾ ಮನಾಸ ಮಂದಿ ಇಲ್ಲೇ ಅದಿವಿ. ಎಲ್ಲಾರೂ ಸಾಲ್ಯಾಗ ಮಕ್ಕೊಂತಿವಿ. ಪರಿಹಾರಕ್ಕಾಗಿ ಕಂಡ ಕಂಡವರಿಗೆ ಕೈ ಮುಗಿದೆ. ಫೋಟೋ ತಗಿಯಾವುಗೊಂದಿಷ್ಟು ರೊಕ್ಕ ಕೊಟ್ಟೆ. ತಲಾಟಿ, ಪಂಚ್ಯಾತಿ ಮೆಂಬರನ ಕೈನೂ ಬೆಚ್ಚಗೆ ಮಾಡಿದೆ. ನಾನು ಖರ್ಚು ಮಾಡಿದ ರೊಕ್ಕದ ಗಿರ್ದ ಸಹಿತ ಪರಿಹಾರ ಸಿಗಲಿಲ್ಲ. ಬರೀ ಐದ್ನೂರು ರೂಪಾಯಿ ಪರಿಹಾರದ ಚೆಕ್ ಕೊಟ್ಟಾರ. ಇದ್ನ ತಗೊಂಡು ಏನು ಮಾಡೋದು ಹೇಳೀಗ. ಹತ್ತಿಪ್ಪತ್ತು ಸಾವಿರ ರೂಪಾಯಿ ಕೊಟ್ರೂ ನನ್ನ ಮನಿ ರಿಪೇರಿ ಆಗಲ್ಲ. ನಾಲಾಕಿ ಸೂಳೆ ಮಕ್ಳು. ಎಲ್ಲಾ ತಿಂದುಹಾಕಿದ್ರು. ನಾನಿವತ್ತಿಗೂ ಯಾವಂಗೂ ಕೈಯೊಡ್ಡಿ ಬೇಡಿದವನಲ್ಲ. ದೇವ್ರು ಯಾಡು ರಟ್ಟಿ ಕೊಟ್ಟಾನ. ದುಡ್ದು ತಿಂತಿದ್ದೆ. ನಂಗೂ ಸ್ವಾಭಿಮಾನ ಐತಿ. ಆದ್ರ ಏನ್ಮಾಡೋದು. ಪರಿಸ್ಥಿತಿ ಈಗ ಹಿಂಗಾಗೈತಿ. ನಿಂಗ, ನಿನ್ನ ಹೇಂತಿ ಮಕ್ಕಳಿಗೆ ಪುಣ್ಯ ಬರುತ್ತೆ. ಎಷ್ಟರ ಒಂದಿಷ್ಟು ಪರಿಹಾರ ಕೊಡಿಸು...'' ಅಂತ ಎದೆಯಾಗಿನ ಸಂಕಟವನ್ನೆಲ್ಲಾ ನನ್ನೆದುರು ಸುರುವಿದ.

ಮತ್ತೊಬ್ಬರ ಸಂಕಟವನ್ನೂ ಅರ್ಥಮಾಡಿಕೊಳ್ಳದ ಸ್ವಾರ್ಥತನ ಕೆಲವರೊಳಗೆ ಅದ್ಹೇಗೆ ಬೀಜಾಂಕುರ ವಾಗುತ್ತದೋ ತಿಳಿಯದು. ಮನೆ ಕಳೆದು ಕೊಂಡು ಸಂತ್ರಸ್ತರಾದ ಫಕೀರಪ್ಪಜ್ಜನಂಥ ನೂರಾರು ಜನರಿಗೆ ಬಂದ ಪರಿಹಾರ ಧನ ಊರೊಳಗೆ ಒಣ ರಾಜಕೀಯ ಮಾಡಿಕೊಂಡು ತಿರುಗಾಡುವ ಹರಾಮಿಕೋರರ ಕೈ ಸೇರಿದ್ದೇ ಹೆಚ್ಚು. ಆ ಕ್ಷಣಕ್ಕೆ ಅದೇನೂ ಮಾಡಬೇಕೆಂದು ತಿಳಿಯದೆ ಫಕೀರಪ್ಪಜ್ಜನಿಗೆ ಆಸರೆ ಯೊದಗಿಸುವ ಭರವಸೆಯ ಮಾತಾಡಿದೆ. ಫಕೀರಪ್ಪಜ್ಜ ಆಸರೆ ಸಿಕ್ಕಷ್ಟೇ ಖುಷಿಗೊಂಡ.

ಫಕೀರಪ್ಪಜ್ಜನೊಂದಿಗೆ ಮಾತಾಡುತ್ತ ಸಾಲಿ ಗೇಟಿನ ಕಡೆ ದಿಟ್ಟಿಸಿದೆ. ಗೇಟು ದಾಟಿಕೊಂಡು ಬರುತ್ತಿರುವ ವ್ಯಕ್ತಿ ಗೋವಾದಲ್ಲಿ ಟಿಪ್ಪರ್ ಗಾಡಿ ಹೊಡೆಯುತ್ತಿರುವ ಚಡ್ಡಿ ದೋಸ್ತನಂತೆ ಗೋಚರಿಸಿದ. ಅನುಮಾನದಿಂದ ದಿಟ್ಟಿಸಿ ನೋಡಿದೆ. ನನ್ನ ಊಹೆ ನಿಜವಾಗಿತ್ತು. ಅಂವ ಚಡ್ಡಿ ದೋಸ್ತ... ಕೈಯಲ್ಲಿ ತಾಟಿತ್ತು. ಗುರುತು ಹಿಡಿದು ನನ್ನ ಕಡೆಗೇ ಬಂದ... ಅನ್ನ ಖಾಲಿಯಾಗಿರುವುದು ಅವನಿಗೆ ಗೊತ್ತಿಲ್ಲ. ಅನ್ನದ ಒಂದಗಳೂ ಹತ್ತದ ಖಾಲಿ ತಾಟು ತೋರಿಸಿದ. ಅನ್ನ ಖಾಲಿಯಾಗಿರುವುದು ನಿಕ್ಕಿಯಾಗಿ ಡಬಗೊಳ್ಳಿ ಮುಳ್ಳು ಚುಚ್ಚಿದಂತೆ ಬೆಚ್ಚಿದ. ದೋಸ್ತನ ಮುಖ ಓದಿದೆ. ಹಸಿವಿನ ಬಳಲಿಕೆ ಅಲ್ಲಿ ಕಾಲು ಮುರಿದುಕೊಂಡು ಬಿದ್ದಿತ್ತು. ಸಾಂತ್ವನಿಸುವಂತೆ ಅವನ ಹೆಗಲಮ್ಯಾಲೆ ಕೈ ಹಾಕಿದೆ. ಜಂಪಲು ಹಿಡಿದು ಸೋರುತ್ತಿರುವ ನಮ್ಮ ಮನೆಯ ಕಡೆ ಇಬ್ಬರೂ ಪಾದ ಬೆಳೆಸಿದೆವು.

ಟಿ. ಎಸ್. ಗೊರವರ
ಅಂಚೆ : ರಾಜೂರ, ರೋಣ ತಾಲ್ಲೂಕು
ಗದಗ ಜಿಲ್ಲೆ

# "ಜಾತಿ–ವಿಜಾತಿ ಎನಬೇಡ..."




ಧರ್ಮ-ಮತ-ಜಾತಿ ಈ ಪದಗಳು ಈಗ ಸಮಾನಾರ್ಥದಲ್ಲಿ ಬಳಕೆಯಾಗುತ್ತಲಿವೆ. ಇದಕ್ಕೆ ಕಾರಣ : ಅರ್ಥಗಳು ಸಂಕುಚಿತವಾಗಿವೆ. ವಿಶಾಲ ಅರ್ಥದಲ್ಲಿ ಈ ಪದಗಳು ಭಿನ್ನವಾಗಿವೆ.

ಧರ್ಮ ಎಂಬ ಪದ, ಪದ್ಧತಿ, ಶಾಸನ, ಸತ್ಯ, ಕರ್ತವ್ಯ, ನ್ಯಾಯ, ಧರಿಸು, ಎತ್ತಿಹಿಡಿ, ಪೋಷಿಸು ಎಂಬ ಅರ್ಥಗಳನ್ನು ಹೊಂದಿದೆ. 'ಧೀಮತೇ ಅನೇನ ಇತಿ ಧರ್ಮಃ', 'ಧಾರಣಾದ್ಧರ್ಮ ಮಿತ್ಯಾಹು' ಎಂದು ವ್ಯಾಖ್ಯಾನಿಸುತ್ತಾರೆ. ಆಂಗ್ಲಭಾಷೆಯಲ್ಲಿ ಧರ್ಮವನ್ನು 'ರಿಲಿಜನ್' ಎನ್ನುತ್ತಾರೆ. ಮ್ಯಾಕ್ಸ್ ಮುಲ್ಲರ್ ಪ್ರಕಾರ ಮತಧರ್ಮವು, "ಇಂದ್ರಿಯ, ಬುದ್ಧಿ, ತರ್ಕಗಳಿಗೆ ಅತೀತವಾದ ಮಾರ್ಗದಲ್ಲಿ ಅನಂತತೆಯ ಅನುಭವವನ್ನು ತಂದುಕೊಡುವ ಶಕ್ತಿ." ಟಾಲ್‌ಸ್ಟಾಯ್ ಪ್ರಕಾರ, "ಮನುಷ್ಯ ತನ್ನ ಬದುಕನ್ನು ಅನಂತಶಕ್ತಿಯೊಂದಿಗೆ ಕೂಡಿಸಿಕೊಂಡು ತನ್ನ ನಡವಳಿಕೆಯನ್ನು ರೂಪಿಸಿಕೊಂಡರೆ ಅದು ಧರ್ಮ." ಋಗ್ವೇದದಲ್ಲಿ ಧರ್ಮ ಎಂದರೆ ಎತ್ತಿಹಿಡಿಯುವುದು, ಸಲಹುವುದು ಎಂದರ್ಥವಿದೆ. ಧರ್ಮದ ಕರ್ತವ್ಯಗಳೇ ಧಾರ್ಮಿಕ. ಮನು, ಧರ್ಮವನ್ನು ಕುರಿತು : "ಶ್ರುತಿ, ಸ್ಮೃತಿ, ಸದಾಚಾರ, ಅಂತಃಸಾಕ್ಷಿ ಧರ್ಮದ ಲಕ್ಷಣಗಳು" ಎನ್ನುತ್ತಾನೆ. 'ಆಚಾರಃ ಪರಮೋ ಧರ್ಮಃ' ಎನ್ನುವ ಮಾತು ಇದೆ. 'ಅಹಿಂಸಾ ಪರಮೋ ಧರ್ಮಃ' ಎಂದು ಜೈನ, ಬೌದ್ಧ ಧರ್ಮಗಳು ಹೇಳುತ್ತವೆ. ಧರ್ಮ ಎಂದರೆ ಮನುಷ್ಯನು ತನ್ನ ಬದುಕಿನಲ್ಲಿ ಅನುಸರಿಸುವ ಸನ್ನೀತಿ, ಸದಾಚಾರ, ಸದ್‌ನಿಯಮ, ಸದ್‌ತರ್ಕವ್ಯ ಎನ್ನಲಾಗಿದೆ.

'ಮತ' ಎಂದರೆ ಅಭಿಪ್ರಾಯ, ವಿಚಾರ, ಆಲೋಚನೆ, ತತ್ವ ಸಿದ್ಧಾಂತ, ಪಂಗಡ, ಪಂಥ ಎಂದು ಅರ್ಥೈಸಲಾಗಿದೆ. ಮತದಾನ ಪ್ರಜಾಪ್ರಭುತ್ವದ ನಿರ್ಣಾಯಕ ಅಂಶ. ಇಲ್ಲಿ ಮತ ಎಂದರೆ ಅಭಿಪ್ರಾಯ, ಸೂಚನೆ. ಪ್ರಜೆ 'ಮತ' ಎಂಬ ಸಾಧನದಿಂದ ತನಗೆ ಬೇಕಾದ ವ್ಯಕ್ತಿ ಅಥವಾ ಪಕ್ಷವನ್ನು ಆಯ್ಕೆ ಮಾಡುವನು. ಬಹುಮತ ಎಂದರೆ ಬಹುಜನರ ಅಭಿಪ್ರಾಯ. ಪ್ರಜಾತಂತ್ರದಲ್ಲಿ ಬಹುಮತವೇ ನಿರ್ಣಾಯಕಾರಿ ಅಂಶ. ಇನ್ನು ವೈದಿಕ ಧರ್ಮ, ಬೌದ್ಧ ಧರ್ಮ, ಜೈನ ಧರ್ಮ ಇಸ್ಲಾಂ ಧರ್ಮ, ಕ್ರೈಸ್ತ ಧರ್ಮ, ವೀರಶೈವ ಧರ್ಮ, ಸಿಖ್ ಧರ್ಮ ಇವೆಲ್ಲವೂ ಧಾರ್ಮಿಕ ಭಾವನೆಗಳ ತತ್ವಗಳ ಸಿದ್ಧಾಂತಕ್ಕೆ ಬದ್ಧವಾಗಿವೆ. 'ಮತ' ಎಂಬುದು ತತ್ವ ಸಿದ್ಧಾಂತಗಳ ಸಂಕುಲ ಎಂದಾಗಿದೆ.

'ಜಾತಿ' ಎಂದರೆ ಹುಟ್ಟಿದ ಕುಲ, ಗುಂಪು, ವರ್ಗ ಪಂಗಡ, ಸಮುದಾಯ ಎಂಬ ಅರ್ಥವಿದೆ. ಒಂದು ಕಾಲದಲ್ಲಿ ವೃತ್ತಿಗೆ ಅನುಗುಣವಾಗಿ ಜಾತಿಯ ಕಲ್ಪನೆಯಾಯಿತು. ಒಂದೊಂದು ಜಾತಿಗೆ ಒಂದೊಂದು ವೃತ್ತಿ ಎಂಬ ವ್ಯವಸ್ಥೆ ಆಗ ಇದ್ದಿತು. ಕ್ರಮೇಣ ಒಂದು ವೃತ್ತಿ ಇನ್ನೊಂದು ವೃತ್ತಿಗಿಂತ ಮೇಲು-ಕೀಳು ಎಂಬ ತಾರತಮ್ಯ ಭಾವನೆ ಹೆಚ್ಚುತ್ತ ಹೋಯಿತು. ಇದರ ಪರಿಣಾಮ ಜಾತಿಗಳಲ್ಲಿ ಮೇಲು-ಕೀಳು ಎಂಬ ಭಾವನೆಗಳು ಉಂಟಾದವು. ಉದ್ಯೋಗ ಆಧಾರಿತ ನಾಲ್ಕು ವರ್ಣಗಳಿಂದ ಅನೇಕ ಜಾತಿ-ಉಪಜಾತಿಗಳು ಹುಟ್ಟಿಕೊಂಡು

**ಪ್ರೊ|| ಯು. ಎನ್. ಸಂಗನಾಳಮಠ**

ಸಮಾಜದ ಅನೇಕ ಸಮಸ್ಯೆಗಳಿಗೆ ಕಾರಣವಾದುವು. ಬ್ರಾಹ್ಮಣ ದ್ರೋಣ, ಕ್ಷತ್ರಿಯ ಅರ್ಜುನ ಸೇರಿ ಶೂದ್ರ ಏಕಲವ್ಯನ ಬದುಕಿನ ಹಕ್ಕನ್ನು ಕಸಿಯುತ್ತಾರೆ.

ಶಿಕ್ಷಣ, ವ್ಯಾಪಾರ, ರಾಜಕೀಯ, ಹೀಗೆ ಜೀವನದ ಪ್ರತಿ ಹಂತದಲ್ಲೂ ಜಾತೀಯತೆ ನುಸುಳುತ್ತಲಿದೆ. ಇದಕ್ಕೆ ಮೂಲ ಕಾರಣ ಮಾನವನ ಸ್ವಾರ್ಥ, ದುರಾಶೆ, ದುರಾಕಾಂಕ್ಷೆಗಳು. ಬುದ್ಧ, ಬಸವ, ಹಲವು ಆಚಾರ್ಯರು, ಫುಲೆ, ಗಾಂಧಿ, ಅಂಬೇಡ್ಕರ್ ಮೊದಲಾದವರೇ ಇದರ ವಿರುದ್ಧ ಹೋರಾಡಿದರೂ ನಿರೀಕ್ಷಿತ ಫಲ ದೊರಕಲಿಲ್ಲ. ಈಗ ಇದು ಪಾಪಾಸ್‌ಕಳ್ಳಿಯಂತೆ ಹರಡಿದೆ. ಈ ಜಾತೀಯತೆ ಎಂಬ ವಿಷವೃಕ್ಷದ ಬುಡವನ್ನು ಕತ್ತರಿಸಿದರೆ ಸಾಲದು, ಬೇರುಸಹಿತ ಅದನ್ನು ಕಿತ್ತೊಗೆಯಬೇಕು. ಬದಲು ಈ ವಿಷವೃಕ್ಷದ ಬೇರುಗಳಿಗೆ ನೀರು-ಗೊಬ್ಬರ ಹಾಕಿ ಪೋಷಿಸುವ ಪ್ರಯತ್ನ ನಡೆಯುತ್ತಿದೆ. ಈ ಪ್ರಯತ್ನದಲ್ಲಿ ಬಂಡವಾಳಗಾರರು, ರಾಜಕಾರಣಿಗಳು, ಅಧಿಕಾರಿಗಳು ಸಹಕರಿಸುತ್ತಿದ್ದಾರೆ. ಇವರೆಲ್ಲ ತಮ್ಮ ಸ್ಥಾನ-ಮಾನ ಗೌರವ ಪ್ರತಿಷ್ಠೆಗಳನ್ನು ಉಳಿಸಿಕೊಳ್ಳಲು ಜಾತಿ ಎಂಬ ಅಸ್ತ್ರವನ್ನು ಉಪಯೋಗಿಸುವರು. 'ಜಾತಿ' ರಾಜಕಾರಣದಿಂದ ಈ ದೇಶದ ವಿಭಜನೆ, ನೆಲ್ಸನ್ ಮಂಡೇಲರಿಗೆ ಶಾಶ್ವತ ಸೆರೆಮನೆ, ಕರ್ನಾಟಕದ ಬೆಂಡಿಗೆರೆ, ಕಿತ್ತೂರ ಪ್ರಕರಣ ನಡೆದಿವೆ. ಯೋಜನೆಗೆ ಸ್ಥಾನಮಾನಗಳು ದೊರೆಯುವುದಕ್ಕೆ, ರಾಜಕಾರಣಿಗಳು ಚುನಾವಣೆ ಗೆಲ್ಲುವುದಕ್ಕೆ, ಸಚಿವ-ಸಂಪುಟದಲ್ಲಿ ಸ್ಥಾನ ಲಭಿಸುವುದಕ್ಕೆ, ಸರಕಾರಿ ನೌಕರರ ವರ್ಗಾವಣೆಗೆ ಜಾತಿ ಪ್ರಧಾನ ಪಾತ್ರ ವಹಿಸುತ್ತದೆ. ಇಲ್ಲಿ ಪ್ರಾಮಾಣಿಕತೆ, ಪ್ರತಿಭೆ ಎಲ್ಲವೂ ಶೂನ್ಯ, ನಗಣ್ಯ.

ಡಾ|| ಲೋಹಿಯಾ ಒಂದೆಡೆ ಈ ರೀತಿ ಹೇಳಿದ್ದಾರೆ : "ಈ ಜಾತಿ ಪದ್ಧತಿ ನಿರ್ಮೂಲನೆಗಾಗಿ ಶೂದ್ರರು, ದ್ವಿಜರು ಒಗ್ಗಟ್ಟಾಗಿ ಹೋರಾಡಬೇಕು" ಇದು ಸಾಧ್ಯವೇ ? ಶೂದ್ರರೊಳಗಿನ ಸುಶಿಕ್ಷಿತರು, ಅನುಕೂಲಸ್ಥರು ದ್ವೇಷದಿಂದ ಪ್ರಚೋದಿತರಾಗುವವರೇ ಹೆಚ್ಚು, ಇಂಥ ಸನ್ನಿವೇಶವನ್ನು ವೈದಿಕರು ತಮ್ಮ ವೈಯಕ್ತಿಕ, ರಾಜಕೀಯ ಲಾಭಕ್ಕಾಗಿ ಬಳಸಿಕೊಳ್ಳುವರು, ಈ ಇಬ್ಬಗೆಯ ಪಾತ್ರದಿಂದ ದ್ವಿಜ-ಶೂದ್ರರು ಪ್ರಾಣಾಂತಿಕ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ ಎಂಬ ಮಾತು ಮನನೀಯವಾದದ್ದು. "ಹಿಂದುಳಿದವರು ಪ್ರಬಲರಾದೊಡನೆ ಅನುಕೂಲಸ್ಥರಾದೊಡನೆ ಮೇಲುವರ್ಗದವರ ಬಗ್ಗೆ ದ್ವೇಷ ಹೊಂದಬಾರದು. ದ್ವಿಜರಲ್ಲಿ ಅಪಾರ ಸಂಖ್ಯೆಯ ಬಡವರಿದ್ದಾರೆ, ನಿರ್ಗತಿಕರಿದ್ದಾರೆ ಎನ್ನುವುದನ್ನು ಶೂದ್ರರು ಮರೆಯಬಾರದು" ಎಂಬ ಮಾತು ಸಹ ಮನವರಿಕೆಯಾಗಬೇಕು. ಹಿಂದುಳಿದ ವರ್ಗಗಳಿಗೆ ಉದ್ಯೋಗಾವಕಾಶಗಳ ಮತ್ತು ಭೂಮಿ ಹಂಚಿಕೆ ಆಗಬೇಕು. ಅಂತರ್‌ಜಾತಿ ವಿವಾಹ ಸಹ ಜಾತೀಯತೆಯ ನಿವಾರಣೆಗೆ ಪರಿಹಾರ ಎನ್ನುತ್ತಾರೆ.

ಪ್ರಧಾನ ಜಾತಿಗಳಲ್ಲಿ ಸಹ ಹಲವು ಉಪಜಾತಿಗಳಿದ್ದು ಮೇಲಿನವರು ಕೆಳಗಿನವರನ್ನು ಹತ್ತಿಕ್ಕಲು ಪ್ರಯತ್ನಿಸುವರು. ಈ ಮೇಲರಿಮೆ-ಕೀಳರಿಮೆ ದೂರವಾಗಿ ನಾವೆಲ್ಲ ಮನುಷ್ಯರು ಎಂದರಿತು ನಮ್ಮ ನಮ್ಮ ನಡುವೆ ಉಂಟಾಗಿರುವ ಈ ಅಂತರವನ್ನು ಕಡಿಮೆ ಮಾಡುವ ಮನಃಪರಿವರ್ತನೆಯಾಗಬೇಕು. ಹುಟ್ಟಿದ ಜಾತಿಗಿಂತ

ಜನಿಸುವಾಗ ಎಲ್ಲರೂ ವಿಶ್ವಮಾನವರೇ, ಆದರೆ ಬೌದ್ಧಿಕ, ದೈಹಿಕ ಬೆಳವಣಿಗೆ ಆಗುತ್ತಿದ್ದಂತೆ ಮಾನವ ಸ್ವಾರ್ಥದೊಂದಿಗೆ ಸಂಕುಚಿತವಾಗುತ್ತ ಜಾತಿಯ ಕಟ್ಟಳೆಗಳಿಗೆ ಒಳಗಾಗಿ ವಿಶ್ವಮಾನವತ್ವದಿಂದ ದೂರವಾಗುವನು. ಚಿಕ್ಕವರಿದ್ದಾಗ ತಮ್ಮ ವಯಸ್ಸಿನ ಗೆಳೆಯರೊಂದಿಗೆ ಯಾವ ಭೇದ-ಭಾವವಿಲ್ಲದೇ ಕೂಡಿ ಆಡುವುದು, ಊಟ ಮಾಡುವುದು ಮಾಡುತ್ತಾರೆ. ಕ್ರಮೇಣ ಹಿರಿಯರು ಮೇಲು-ಕೀಳು ಎಂಬ ಜಾತಿಯ ಭಾವನೆಯನ್ನು ಬಿತ್ತುತ್ತಾರೆ. ಇದು ಬೆಳೆದು ಜಾತಿ ಎಂಬ ಆಕ್ಟೋಪಸ್‌ನ ಹಿಡಿತದಲ್ಲಿರಿಸುತ್ತದೆ. ನಮ್ಮ ದೇಶ ಸಂವಿಧಾನಬದ್ಧವಾಗಿ ಜಾತ್ಯತೀತ ರಾಷ್ಟ್ರ. ಮಾನವರೆಲ್ಲ ಒಂದೇ. ಎಲ್ಲ ಧರ್ಮಗಳು ಸಮಾನ. ಭಾರತಕ್ಕೆ ಯಾವುದೇ ಜಾತಿ ಪ್ರಧಾನವಲ್ಲ, ಎಲ್ಲ ಧರ್ಮಗಳ ಸಹಿಷ್ಣುತೆ, ಸಮಾನ ಅವಕಾಶ ಇವು ತಾರಕ ಮಂತ್ರವಾಗಬೇಕು.

ಬದುಕುವ ರೀತಿ ಮುಖ್ಯವಾಗಬೇಕು. ಮಾನಸಿಕ ಪರಿವರ್ತನೆಯಿಂದ, ಕಾನೂನಿನಿಂದ ಅಸ್ಪೃಶ್ಯತೆಯ ನಿವಾರಣೆ ಆಗಬೇಕು. ಜಾತಿಪದ್ಧತಿಯನ್ನು ಪ್ರೋತ್ಸಾಹಿಸುವ ಅಂಶಗಳನ್ನು ಪಠ್ಯಕ್ರಮದಲ್ಲಿ ಸೇರ್ಪಡೆ ಮಾಡಬಾರದು. ಜಾತಿಗೊಂದರಂತೆ ವಿದ್ಯಾರ್ಥಿ ನಿಲಯ ತೆರೆಯದೆ, ಸಾರ್ವಜನಿಕ ವಿದ್ಯಾರ್ಥಿ ನಿಲಯ ಮಾತ್ರ ಇರಬೇಕು. ''ಉಪ ಜಾತಿಗೊಂದು ಜಗದ್ಗುರು'' ಎಂಬ ಈ ಪದ್ಧತಿ ಸಹ ಹೋಗಬೇಕು.

ಜನಿಸುವಾಗ ಎಲ್ಲರೂ ವಿಶ್ವಮಾನವರೇ, ಆದರೆ ಬೌದ್ಧಿಕ, ದೈಹಿಕ ಬೆಳವಣಿಗೆ ಆಗುತ್ತಿದ್ದಂತೆ ಮಾನವ ಸ್ವಾರ್ಥದೊಂದಿಗೆ ಸಂಕುಚಿತವಾಗುತ್ತ ಜಾತಿಯ ಕಟ್ಟಳೆಗಳಿಗೆ ಒಳಗಾಗಿ ವಿಶ್ವಮಾನವತ್ವದಿಂದ ದೂರವಾಗುವನು. ಚಿಕ್ಕವರಿದ್ದಾಗ ತಮ್ಮ ವಯಸ್ಸಿನ ಗೆಳೆಯರೊಂದಿಗೆ ಯಾವ ಭೇದ-ಭಾವವಿಲ್ಲದೇ ಕೂಡಿ ಆಡುವುದು, ಊಟ ಮಾಡುವುದು ಮಾಡುತ್ತಾರೆ. ಕ್ರಮೇಣ ಹಿರಿಯರು ಮೇಲು-ಕೀಳು ಎಂಬ ಜಾತಿಯ ಭಾವನೆಯನ್ನು ಬಿತ್ತುತ್ತಾರೆ. ಇದು ಬೆಳೆದು ಜಾತಿ ಎಂಬ ಆಕ್ಟೋಪಸ್‌ನ ಹಿಡಿತದಲ್ಲಿರಿಸುತ್ತದೆ.

ನಮ್ಮ ದೇಶ ಸಂವಿಧಾನಬದ್ಧವಾಗಿ ಜಾತ್ಯತೀತ ರಾಷ್ಟ್ರ. ಮಾನವರೆಲ್ಲ ಒಂದೇ. ಎಲ್ಲ ಧರ್ಮಗಳು ಸಮಾನ. ಭಾರತಕ್ಕೆ ಯಾವುದೇ ಜಾತಿ ಪ್ರಧಾನವಲ್ಲ, ಎಲ್ಲ ಧರ್ಮಗಳ ಸಹಿಷ್ಣುತೆ, ಸಮಾನ ಅವಕಾಶ ಇವು ತಾರಕ ಮಂತ್ರವಾಗಬೇಕು.

''ಮಾನವರೆಲ್ಲ ಒಂದೇ. ನನಗೆ ಜಾತಿಯಲ್ಲಿ ನಂಬಿಕೆಯಿಲ್ಲ'' ಎಂದು ಹೇಳುವವರ ಅಂತರಂಗ ಒಂದಾದರೆ, ಬಹಿರಂಗ ಬೇರೊಂದಾಗಿರುತ್ತದೆ. ರಾಜಕೀಯ ಮುಖಂಡರೇ ಮೊದಲು ಜಾತಿ ಭಾವನೆಯನ್ನು ಬಿತ್ತುವರು. ಈ ಆಧಾರದ ಮೇಲೆ ಜನರನ್ನು ಎತ್ತಿಕಟ್ಟಿ ತಮ್ಮ ಬೇಳೆ ಬೇಯಿಸಿಕೊಳ್ಳುವರು, ಜಾತ್ಯತೀತತೆ ಎನ್ನುವುದು ಒಂದು ಮುಖವಾಡವಾಗಿದೆ, ಅಷ್ಟೆ.

**ರಾಜಕಾರಣಿಗಳನ್ನು ಮಾದರಿ ಮಾಡಿಕೊಳ್ಳದಿರಿ**



**ಅವರ ನೆರಳು ಕೂಡ ತಾಗಬಾರದು.. ಕಣ್ರೀ, ಅದೂ ಹುಡುಗನಿಗೆ ಅಪಾಯ...?**

ಜಾಗತೀಕರಣ ಯುಗದಲ್ಲೂ ನಮ್ಮ ದೇಶ ಜಾತೀಕರಣದಿಂದ ತಪ್ಪಿಸಿಕೊಂಡಿಲ್ಲ. ಜಾತಿ ಎಂಬ ವಿಷಸರ್ಪ ಎಲ್ಲ ಸಮುದಾಯದ ದುರ್ಬಲರನ್ನು ತಟ್ಟಿದೆ. ಮೀಸಲಾತಿ ನೀತಿ ಎಲ್ಲ ಅರ್ಹರಿಗೆ ಮುಟ್ಟಿಲ್ಲ. ರಾಜಕಾರಣಿಗಳಿಂದ ಜಾತಿಗಣತಿಗೆ ಅಡ್ಡಿಯಾಗಿದೆ. ಸರಕಾರವು ಅನೇಕ ಜಾತಿಗಳಿಗೆ ಸೌಲಭ್ಯಗಳನ್ನು ಒದಗಿಸಿದರೂ ಅದನ್ನು ಪಡೆಯಲಾರದ ಅನೇಕ ಜಾತಿಗಳೂ ಇವೆ.

ಇತ್ತ ಸಾರ್ವಜನಿಕವಾಗಿ ಜಾತಿ ಕೊಲೆ, ಜಾತಿ ದೌರ್ಜನ್ಯ, ಜಾತಿ ವಿವಾದ, ಜಾತಿಗೊಬ್ಬ ಧರ್ಮಗುರು ಜಾತಿ ಪಂಚಾಯತಿ ಇವೆಲ್ಲ ಸಾಮಾನ್ಯ. ಇದೆಲ್ಲ ಜಾತಿಯ ವಿಷವರ್ತುಲ. ಈ ವರ್ತುಲದಲ್ಲಿ ಪ್ರತಿಯೊಬ್ಬರೂ ಸಿಲುಕಿದ್ದಾರೆ. ಇವೆಲ್ಲವುಗಳ ನಡುವೆ 'ವಿಶ್ವಮಾನವ' ಕಲ್ಪನೆ ಕೇವಲ ಕಲ್ಪನೆಯಾಗಿಯೇ ಉಳಿದಿದೆ. 'ಸೆಕ್ಯುಲರ್' ಎಂದು ಹೇಳಿಕೊಳ್ಳುವ ಜನರು 'ಜಾತಿಧರ್ಮ'ವನ್ನು ಆಚರಿಸುತ್ತಾರೆ. ಭಾರತೀಯರೆಂದು ಪೋಸು ಕೊಡುವ ರಾಷ್ಟ್ರೀಯವಾದಿಗಳಲ್ಲೂ ಸಹ 'ಜಾತಿ' ತೊಲಗಿಲ್ಲ. ಒಂದರ್ಥದಲ್ಲಿ ಜಾತಿಯನ್ನು ಮೆಟ್ಟಿ ನಿಲ್ಲಬಲ್ಲವರು ಈಗ ಹುಟ್ಟಿದ್ದಾರೆ. ಅಂತರ್‌ಜಾತಿ ವಿವಾಹದಿಂದ ಜನಿಸಿದವರು ಯಾವ ಜಾತಿಗೂ ಸೇರದೆ ತಾವು ಕೇವಲ ಭಾರತೀಯರು ಎನ್ನಬಹುದು ಎಂದು. ಜಾತಿಯಿಂದ ಅತೀತರಾಗುವರು ಅಪ್ಪಟ ಭಾರತೀಯರು. ಆಗ ನೆನಪಾಗುವುದು 'ಜಾತಿ-ವಿಜಾತಿ ಎನಬೇಡ' ಎಂಬ ಸರ್ವಜ್ಞನ ಮಾತು.

**ಪ್ರೊ|| ಯು. ಎನ್. ಸಂಗನಾಳಮಠ**
ಉಪನ್ಯಾಸಕರು - ಲೇಖಕರು, 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ,
ಒಂದನೇ ಒಳ ತಿರುವು, ಹೈಸ್ಕೂಲ್ ಬಡಾವಣೆ
ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ

# ಜೀತಾ



ನೋಡುತ್ತಿದ್ದಂತೆ ಕಣ್ಣೆನಾಳಕ್ಕಿಳಿದು
ಹೃದಯಾಳಕ್ಕೆ ಬೀಜ ಬಿತ್ತುತ್ತದೆ.
ಸವೆದ ಕೈಕಾಲುಗಳ ಸುಕ್ಕುಗಟ್ಟಿದ ಚಕ್ಕಳದಡಿಯಲ್ಲಿ
ಕಡ್ಡಿಯೆಲುಬುಗಳ ನಗ್ನ ದರ್ಶನ.
ಗೌಡನ ಕೊಟ್ಟಿಗೆಯಲ್ಲುಚ್ಚುವ
ಎಮ್ಮೆಗಳ ಸಗಣಿ ಬಳಿದು ಬಸವಳಿದರೂ
ಹುಟ್ಟಿಸಿದವರಿಗೆ ಧೂಪವಿಕ್ಕುವ ದಿನ
ನಮ್ಮ ನಾವು ಅಡವಿಟ್ಟುಕೊಳ್ಳಲೇಬೇಕು.
ಸೇರು ರಾಗಿಯ ಗಂಜಿಗುಟುಕಿಗೆ
ಮತ್ತೆ, ಗತ್ತಿನ ಚರ್ಮದ ಜೋಡುಗಳಿಗೆ
ಚರ್ಮ ಹದಮಾಡಲೇಬೇಕು. ಮೂಳೆ ಸವೆಸಿ.
ಕೆಂಪು ಖಂಡ ಕಿತ್ತು ಸೋರುವ ರಕ್ತ ಬಸಿದು
ರೋಮವಿಲ್ಲದ ದಣಿಯೆದೆಗೆ ನೈವೇದ್ಯ ಮಾಡಿ
ಸವೆದ ಮೂಳೆಗಳ ಅಟ್ಟಣಿಗೆ ಕಟ್ಟಿ ನರ ಬಿಗಿದು
ಮಧುಮಂಚ ರೆಡಿ ಮಾಡಲೇಬೇಕು.
ನಮ್ಮೆಣ್ಣುಮಕ್ಕಳು ಮೈ ಹರಡಲೇಬೇಕು
ಕೊರೆಯುವ ನೋವ ಸಹಿಸಿ.
ಮತ್ತೆ ಈಚಲು ಹೆಂಡಕ್ಕೆ ಕೈಯೊಡ್ಡಲೇಬೇಕು
ಸಾಲಕ್ಕೆ ಸೂಲಕ್ಕೆ ಹಾದರದ ಆಟಕ್ಕೆ
ನಮ್ಮ ನಾವು ಒಡ್ಡಿಕೊಳ್ಳಲೇಬೇಕು. ಜೀವ ಸವೆಸಿ.

**ವಾಜರಹಳ್ಳಿ ದಿನೇಶ್**
ಅಂತಿಮ ಪದವಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ
ಬೆಂಗಳೂರು - ೫೬೦ ೧೦೪

**ಧರಣಿಮಂಡಲ ಮಧ್ಯದೊಳಗೆ**
22 ಕನ್ನಡ ಕಥೆಗಳು

**ಆಫ್ರಿಕದ ಹಾಡು**
ಆಫ್ರಿಕ ಖಂಡದ ಕಥೆಗಳು
ಅನು : ಸಿ. ಸೀತಾರಾಮ್

**ಕಾಡಿನಲ್ಲಿ ಬೆಳದಿಂಗಳು**
ವಿಯೆಟ್ನಾಮ್ ಕಥೆಗಳು
ಅನು : ಸಿ.ಪಿ. ರವಿಕುಮಾರ್

**ಚೆಲುವು**
ಮಂಗೋಲಿಯ, ಚೀನ, ಜಪಾನ್, ಕೊರಿಯ ಕಥೆಗಳು
ಅನು : ಜಿ.ಎಸ್. ಸದಾಶಿವ

**ಸುಭಾಷಿಣಿ**
ಭಾರತ, ನೆರೆಹೊರೆಯ 23 ಕಥೆಗಳು
ಅನು : 23 ಅನುವಾದಕರು

**ವಿಚಿತ್ರ ಕಕ್ಷಿದಾರ**
ಇಂಗ್ಲೆಂಡ್ ಕಥೆಗಳು
ಅನು : ಎನ್.ಎಸ್. ರಾಮಚಂದ್ರಯ್ಯ
ಎಸ್.ಆರ್. ಭಟ್

**ಮಂಜುಹೂವಿನ ಮದುವಣಿಗ**
ಹಂಗೆರಿ, ರುಮಾನಿಯ ಕಥೆಗಳು
ಅನು : ಕೆ.ಎಸ್. ನಾರಾಯಣಸ್ವಾಮಿ

**ಬೂದುಬಣ್ಣದ ಕಾಂಗರೂ**
ಆಸ್ಟ್ರೇಲಿಯ, ನ್ಯೂಜಿಲೆಂಡ್ ಕಥೆಗಳು
ಅನು : ಪಾ. ಸಂಜೀವ ಬೋಳಾರ

**ಹೆಜ್ಜೆಗುರುತು**
ರಷ್ಯ - ನೆರೆಹೊರೆ ಕಥೆಗಳು
ಅನು : ಕೆ.ಎಸ್. ನಿಸಾರ್ ಅಹಮದ್

**ಅರಬಿ**
ಐರ್‌ಲೆಂಡ್, ವೇಲ್ಸ್, ಸ್ಕಾಟ್‌ಲೆಂಡ್ ಕಥೆಗಳು
ಅನು : ಶಾ. ಬಾಲು ರಾವ್

**ನೆತ್ತರು ದೆವ್ವ**
ಚೆಕೊಸ್ಲೊವಾಕಿಯ, ಪೋಲೆಂಡ್ ಕಥೆಗಳು
ಅನು : ಎಚ್.ಕೆ. ರಾಮಚಂದ್ರಮೂರ್ತಿ

**ಬಾವಿಕಟ್ಟೆಯ ಬಳಿ**
ಯುಗೊಸ್ಲಾವಿಯ, ಅಲ್ಬೇನಿಯ, ಬಲ್ಗೇರಿಯ ಕಥೆಗಳು
ಅನು : ಟಿ. ಶ್ರೀನಿವಾಸರಾಜು

**ಅದೃಷ್ಟ**
ಅಮೆರಿಕ, ಕೆನಡ, ಮೆಕ್ಸಿಕೊ ಕಥೆಗಳು
ಅನು : ವೀಣಾ ಶಾಂತೇಶ್ವರ

## ಲೋಕಸಾಹಿತ್ಯೋದ್ಯಾನದ ಸವಿಜೇನು ಸಂಗ್ರಹ

# ವಿಶ್ವಕಥಾಕೋಶ

**25 ಸಂಪುಟಗಳಲ್ಲಿ**
**96 ದೇಶ-ಪ್ರದೇಶಗಳ, 320 ಲೇಖಕರ**
**324 ಶ್ರೇಷ್ಠ ಕಥೆಗಳ ಕಣಜ**

ಪ್ರಧಾನ ಸಂಪಾದಕರು
**ನಿರಂಜನ**

*30 ವರ್ಷಗಳ ನಂತರ ಇದೀಗ ಮರುಮುದ್ರಣವಾಗುತ್ತಿದೆ.*

ಇಂದಿನ ಮಾರುಕಟ್ಟೆಯ ದರದಲ್ಲಿ ಪ್ರತಿ ಸಂಪುಟ ₹100ರಂತೆ 25 ಸಂಪುಟಗಳಿಗೆ ₹2500
ಇನ್‌ಫೋಸಿಸ್ ಫೌಂಡೇಷನ್ ನೆರವಿನೊಂದಿಗೆ ಪ್ರತಿ ಸಂಪುಟ ₹65ರಂತೆ ಸುಲಭದರದಲ್ಲಿ ಲಭ್ಯ
**ಒಟ್ಟು 25 ಸಂಪುಟಗಳ (4000 ಪುಟಗಳು) ಮುದ್ರಿತ ಬೆಲೆ ₹1625**

**ಪ್ರಕಟಣಾಪೂರ್ವ ಬೆಲೆ**
**₹1100**
**ಭಾರಿ ಉಳಿತಾಯ**
**₹525**

**2011ರ ಏಪ್ರಿಲ್ 3ರಂದು ಬೆಳಗ್ಗೆ 10ಕ್ಕೆ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಲೋಕಾರ್ಪಣೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು**

**ಲೋಕಾರ್ಪಣೆ : ಡಾ|| ಯು. ಆರ್. ಅನಂತಮೂರ್ತಿ**

**ವೇದಿಕೆಯಲ್ಲಿ : ಶ್ರೀಮತಿ ಸುಧಾ ಮೂರ್ತಿ**
**ಶ್ರೀ ಎಸ್. ದಿವಾಕರ್, ಡಾ|| ಎಚ್. ನಾಗವೇಣಿ**

₹1100ನ್ನು ಇಂದೇ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ವಿಳಾಸಕ್ಕೆ ಕಳಿಸಿ ನಿಮ್ಮ ಹೆಸರನ್ನು ನೋಂದಣಿ ಮಾಡಿಕೊಳ್ಳಿ. ಹಣವನ್ನು ಚೆಕ್, ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಿ. ಇಲ್ಲವೇ ನಮ್ಮ ಬ್ಯಾಂಕ್ ಅಕೌಂಟ್‌ಗೆ ಜಮಾ ಮಾಡಿ (Current A/c No. 0788201010612; IFSC Code CNRB0000788; Canara Bank, Madhavnagar Branch, Bangalore. ಹೀಗೆ ಜಮಾ ಮಾಡುವವರು ಬ್ಯಾಂಕ್ ಚಲನ್‌ನ ಜೆರಾಕ್ಸ್ ಪ್ರತಿ ಹಾಗೂ ತಮ್ಮ ಹೆಸರು, ವಿಳಾಸವನ್ನು ಕೆಳಕಂಡ ನಮ್ಮ ಪ್ರಧಾನ ಕಛೇರಿಗೆ ಕಳಿಸಬೇಕು).

**ಸಜ್ಜನನ ಸಾವು**
ಐಸ್‌ಲೆಂಡ್, ಡೆನ್‌ಮಾರ್ಕ್, ನಾರ್ವೆ, ಸ್ವೀಡನ್, ಫಿನ್‌ಲೆಂಡ್ ಕಥೆಗಳು
ಅನು : ಕ.ನಂ. ನಾಗರಾಜು

**ಡೇಗೆ ಹಕ್ಕಿ**
ಇಟಲಿ, ಆಸ್ಟ್ರಿಯ ಕಥೆಗಳು
ಅನು : ಎಸ್. ಅನಂತನಾರಾಯಣ

**ಅವಸಾನ**
ಗ್ರೀಸ್, ಸೈಪ್ರಸ್, ಟರ್ಕಿ ಕಥೆಗಳು
ಅನು : ಈಶ್ವರಯ್ಯ

**ತಾತನ ಹುಟ್ಟುಹಬ್ಬ**
ಹಾಲೆಂಡ್, ಬೆಲ್ಜಿಯಮ್, ಸ್ವಿಟ್ಜರ್‌ಲೆಂಡ್ ಕಥೆಗಳು
ಅನು : ಸಿ.ಎಚ್. ಪ್ರಹ್ಲಾದರಾವ್

**ಬಾಲ ಮೇಧಾವಿ**
ಜರ್ಮನಿ ಕಥೆಗಳು
ಅನು : ಎಚ್.ಎಸ್. ರಾಘವೇಂದ್ರರಾವ್

**ಇಬ್ಬರು ಗೆಳೆಯರು**
ಸ್ಪೇನ್, ಪೋರ್ಚುಗಲ್ ಕಥೆಗಳು
ಅನು : ಕೆ.ವಿ. ನಾರಾಯಣ

**ಅಬಿಂದಾ - ಸಯೊದ್**
ಇಂಡೊನೇಷ್ಯ, ಫಿಲಿಪ್ಪೀನ್ಸ್, ಮಲಯ, ಸಿಂಗಾಪುರ, ಥಾಯ್‌ಲೆಂಡ್ ಕಥೆಗಳು
ಅನು : ಎಸ್ಸಾರ್ಕೆ

**ನಿಗೂಢ ಸೌಧ**
ಫ್ರಾನ್ಸ್ ಕಥೆಗಳು
ಅನು : ಬಸವರಾಜ ನಾಯ್ಕರ

**ಬೆಳಗಾಗುವ ಮುನ್ನ**
ಕ್ಯೂಬಾ, ಜಮೇಯಿಕ ಕಥೆಗಳು
ಅನು : ಶ್ರೀಕಾಂತ

**ಮರಳುಗಾಡಿನ ಮದುವೆ**
ಪಶ್ಚಿಮ ಏಷ್ಯ ಕಥೆಗಳು
ಅನು : ವಾಸುದೇವ

**ಕಿವುಡು ವನದೇವತೆ**
ದಕ್ಷಿಣ ಅಮೆರಿಕ ಕಥೆಗಳು
ಅನು : ಈಶ್ವರಚಂದ್ರ

**ಸಾವಿಲ್ಲದವರು**
ಪಂಚ ಮಹಾಕಾವ್ಯಗಳಿಂದ ಆಯ್ದ ಕಥೆಗಳು
ನಿರೂಪಣೆ : ಸಿ. ಕೆ. ನಾಗರಾಜ ರಾವ್

*ಹಣವನ್ನು ನವಕರ್ನಾಟಕದ ಶಾಖೆಗಳಲ್ಲಿ, ಮಳಿಗೆಗಳಲ್ಲಿ ಅಥವಾ ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಪಾವತಿಸಬಹುದು. ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.
ದೂರವಾಣಿ : 080-30578022, 22203580. ಫ್ಯಾಕ್ಸ್ : 080-30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / MARCH 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)